# ಶ್ರೀವ್ಯಾಸಮಧ್ವಸಂಶೋಧನ ಪ್ರತಿಷ್ಠಾನ (ರಿ.)

'Pajaka', 89/24, III Cross, Mount Joy Road, Hanumanthanagar, Bangalore - 560 019.
Website: www.vyasamadhwa.org Ph:26602802 Email: info@vyasamadhwa.org

## ಸಂಸ್ಥೆಯ ಪ್ರಮುಖ ಯೋಜನೆಗಳು

೧. ಪ್ರಾಚೀನ ಸಂಸ್ಕೃತ ಹಸ್ತಪ್ರತಿಗ್ರಂಥಗಳನ್ನು ಸಂಗ್ರಹಿಸಿ, ವ್ಯವಸ್ಥಿತವಾಗಿ ಸಂರಕ್ಷಿಸುವುದು; ಈಗಾಗಲೇ ೨೦೦೦ಕ್ಕೂ ಹೆಚ್ಚು ಹಸ್ತಪ್ರತಿಗಳನ್ನು ಸಂಗ್ರಹಿಸಿ, ತನ್ನ 'ಶ್ರೀಜಯತೀರ್ಥ ಸಂಸ್ಕೃತ ಹಸ್ತಲಿಖಿತ ಗ್ರಂಥಾಲಯ'ದಲ್ಲಿ ಸಂರಕ್ಷಿಸುತ್ತಿದೆ.

೨. ಶ್ರೀವ್ಯಾಸಮಧ್ವರ ಕೃತಿಗಳ ಅನುವಾದ ಹಾಗೂ ವಿವರಣೆಗಳನ್ನೊಳಗೊಂಡ ಕೃತಿಗಳನ್ನು, ಹರಿದಾಸಸಾಹಿತ್ಯವನ್ನು ಪ್ರಕಾಶನಪಡಿಸುವುದು (ಐತರೇಯಪ್ರಕಾಶನ); ಈಗಾಗಲೇ ೪೦೦೦೦ ಪುಟಗಳಿಗೂ ಮೀರಿದ ಸಾಹಿತ್ಯವನ್ನು ಸಂಸ್ಕೃತ, ಕನ್ನಡ, ಆಂಗ್ಲ ಹಾಗೂ ತೆಲುಗು ಭಾಷೆಗಳಲ್ಲಿ ಪ್ರಕಾಶನ ಪಡಿಸಲಾಗಿದೆ.

೩. 'ಶ್ರೀರಾಘವೇಂದ್ರ ವೇದಾಂತಪಾಠಶಾಲಾ' ಎಂಬ ಸಂಸ್ಥೆಯನ್ನೂ ಪ್ರಾರಂಭಿಸಿ, ಪ್ರತಿನಿತ್ಯ ಸರ್ವ-ಮೂಲಗ್ರಂಥಗಳ ಪಾಠ-ಪ್ರವಚನ, ಸ್ತೋತ್ರಪಾಠ ಇತ್ಯಾದಿಗಳನ್ನು ಅನೇಕ ವರ್ಷಗಳಿಂದ ನಿರಂತರ ನಡೆಸುತ್ತಾ ಬಂದಿದೆ.

೪. 'ಶ್ರೀವ್ಯಾಸಮಧ್ವಸೇವಾಪುರಸ್ಕಾರ ಯೋಜನೆ': ಶ್ರೀವ್ಯಾಸಮಧ್ವರ ಸೇವೆ ಸಲ್ಲಿಸಿದ ವೃದ್ಧ ವಿದ್ವಾಂಸರಿಗೆ ಪ್ರತಿತಿಂಗಳು · ಮಾಸಿಕ ಗೌರವಧನವನ್ನು ಆಜೀವ ಸಲ್ಲಿಸುವುದು; ಪ್ರಕೃತ ೨೬ ವಿದ್ವಾಂಸರಿಗೆ ರೂ. ೧೫೦೦/-ಗಳನ್ನು ಸಲ್ಲಿಸುತ್ತಿದೆ.

೫. ಶ್ರೀವ್ಯಾಸಮಧ್ವರ ಕೃತಿಗಳನ್ನು ಅಧ್ಯಯನ ಮಾಡುತ್ತ, ಲೌಕಿಕ ವಿದ್ಯೆಯ ವ್ಯಾಸಂಗ ಮಾಡುತ್ತಿರುವ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಆರ್ಥಿಕಸಹಾಯ ನೀಡುವುದು.

೬. ಪ್ರತಿವರ್ಷ ಒಬ್ಬ ಶ್ರೇಷ್ಠ ಹಿರಿಯ ವಿದ್ವಾಂಸರಿಗೆ ರೂ. ೧೨,೦೦೦/-ಗಳ 'ಶ್ರೀವ್ಯಾಸಮಧ್ವಸೇವಾಪ್ರಶಸ್ತಿ'.

೭. ಮಹಾಭಾರತತಾತ್ಪರ್ಯನಿರ್ಣಯವನ್ನು ಪೂರ್ಣಕಂಠಪಾಠ ಒಪ್ಪಿಸುವ ವಿದ್ಯಾರ್ಥಿಗೆ ರೂ.೨೫,೦೦೦/- ಪ್ರಶಸ್ತಿ, ಸುಮಧ್ವವಿಜಯವನ್ನು ಒಪ್ಪಿಸುವ ವಿದ್ಯಾರ್ಥಿಗೆ 'ಶ್ರೀಮಧ್ವಪ್ರಿಯ' ಪ್ರಶಸ್ತಿ, ಹಾಗೂ ಹರಿಕಥಾಮೃತಸಾರವನ್ನು ಒಪ್ಪಿಸುವ ವಿದ್ಯಾರ್ಥಿನಿಗೆ 'ದಾಸಪ್ರಿಯ' ಪ್ರಶಸ್ತಿಪ್ರದಾನ.

೮. ಶ್ರೀವ್ಯಾಸಮಧ್ವರನ್ನು ಹಾಗೂ ಅವರ ಕೃತಿಗಳನ್ನು ಕುರಿತ ಸಂಶೋಧನಕೃತಿಗಳ ಪ್ರಕಾಶನಕ್ಕೆ ಆರ್ಥಿಕ ಸಹಾಯ.

೯. ಯುವಜನತೆಯಲ್ಲಿ ತಾತ್ತ್ವಿಕಜಾಗೃತಿಯನ್ನು ಉಂಟು ಮಾಡಲು ಕಾಲಕಾಲಕ್ಕೆ ಶ್ರೀವ್ಯಾಸಮಧ್ವರ ತತ್ತ್ವಗಳ ಬಗ್ಗೆ ಕಾರ್ಯಾಗಾರಗಳನ್ನು, ವಿಚಾರಸಂಕಿರಣಗಳನ್ನು ಮತ್ತು ವಿದ್ವದ್ಗೋಷ್ಠಿಗಳನ್ನು ಏರ್ಪಡಿಸುವುದು.

ಅಪಾರವೆಚ್ಚದ ಈ ಎಲ್ಲ ಯೋಜನೆಗಳಿಗಾಗಿ ಪ್ರತಿಷ್ಠಾನವು ಯಾವುದೇ ರೀತಿಯ ದೇಣಿಗೆಯನ್ನು ಆಸ್ತಿಕಜನತೆಯಿಂದ ಸ್ವಾಗತಿಸುತ್ತದೆ. ರೂ.೧೫,೦೦೦/- ಹಾಗೂ ಅದಕ್ಕಿಂತ ಹೆಚ್ಚಿನ ಮೊತ್ತದ ದೇಣಿಗೆಯನ್ನು ನೀಡುವವರಿಗೆ ಸರ್ವಮೂಲಗ್ರಂಥಗಳು, ಮಹಾಭಾರತತಾತ್ಪರ್ಯನಿರ್ಣಯ ಹಾಗೂ ಹರಿಕಥಾಮೃತಸಾರಗಳ ಅನುವಾದಗಳು ಸೇರಿದಂತೆ ಪ್ರತಿಷ್ಠಾನದ ಪ್ರಕಾಶನದಲ್ಲಿ ಲಭ್ಯವಿರುವ ಎಲ್ಲಾ ಗ್ರಂಥಗಳನ್ನು ಉಚಿತವಾಗಿ ನೀಡಲಾಗುವುದು.

### ವಿಶೇಷ ಸೂಚನೆ :

೧. ದೇಣಿಗೆಗಳನ್ನು "ಶ್ರೀವ್ಯಾಸಮಧ್ವಸಂಶೋಧನ ಪ್ರತಿಷ್ಠಾನ(ರಿ.)", ಬೆಂಗಳೂರು - ಈ ಹೆಸರಿಗೆ ನಗದು/ಚೆಕ್/ಡ್ರಾಫ್ಟ್ ಮೂಲಕ ಸಲ್ಲಿಸಿ ಅಧಿಕೃತ ರಸೀತಿಯನ್ನು ಪಡೆಯತಕ್ಕದ್ದು.

೨. **80G** ಅನ್ವಯ ಆದಾಯ ತೆರಿಗೆ ವಿನಾಯಿತಿಯನ್ನು ಬಯಸುವವರು ನಮ್ಮ ಪ್ರತಿಷ್ಠಾನಕ್ಕೆ "**Sri Vyasa Madhwa Research Foundation (R)**" ಎಂಬ ಹೆಸರಿಗೆ ದೇಣಿಗೆ ನೀಡಬಹುದು.




# ಪವಿತ್ರತುಲಸೀ

(ತುಲಸಿಯ ಬಗೆಗಿನ ಇತಿಹಾಸಪುರಾಣಗಳಲ್ಲಿನ ಮಾಹಿತಿ, ತುಲಸೀಮಹಾತ್ಮ್ಯ, ತುಲಸೀಸ್ತೋತ್ರಮಂಜರೀ, ತುಲಸಿಯನ್ನು ಕುರಿತ ಹರಿದಾಸರ ಕೃತಿಗಳು ಮೊದಲಾದವುಗಳ ಸಂಕಲನ)

ಸಂಗ್ರಹ, ಅನುವಾದ:

## ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯ



ಪ್ರಕಾಶನ :

**ಐತರೇಯ ಪ್ರಕಾಶನ - ವ್ಯಾಸನಕೆರೆ**

ಶ್ರೀವ್ಯಾಸ-ಮಧ್ವಸಂಶೋಧನ ಪ್ರತಿಷ್ಠಾನದ ಪ್ರಕಾಶನ ವಿಭಾಗ

'ಪಾಜಕ', ೮೯/೨೪, ೩ನೇ ಮುಖ್ಯರಸ್ತೆ, ಮೌಂಟ್‌ಜಾಯ್ ಎಕ್ಸ್‌ಟೆನ್ಷನ್,
ಹನುಮಂತನಗರ, ಬೆಂಗಳೂರು - ೫೬೦೦೧೯

**Pavitra-Tulasī** (A Compendium about Śrī-Tulasī : by Vidyāvācaspati, Darśanaratnam, Pravacanācārya, Sacchāstra-vicakṣaṇaratnam, Śāstrapravacanakesari, Madhvamatavardhana, Vidvaccūḍāmaṇi, Vedavidyāvicakṣaṇa, Paṇḍitaratnam, Vidyāvāridhi, Sacchāstrapravacanapravīṇa, Gītāratnākara, Tattvavācaspati, Mūlavidyāprabhākara, Jnānaratnākara (and Recipient of Karnataka State Sanskrit Award-1999 & **Karnataka Rajyotsava Award-2002, Śrī Vidyāmānya Mahāpraśasti** of Śrī Pejavar Math, **Paravidyāmānya praśasthi** of Śrī Palimāru math, Udupi and **Rashtrapati Award - 2005**) **Dr.Vyasanakere Prabhanjanacharya**, M.A., Ph.D., D.Litt., F.I.B.R., F.U.W.A., Principal (Rtd.), Govt. First Grade College, K.R.Puram, Bangalore and Published by **Aitareya Prakāśana Vyasanakere**, Publication wing of **Śrī VyāsaMadhva Samśodhana Pratiṣṭhāna** Pājaka, No.89/24, Third Cross, Mount Joy Extension, Hanumanthanagar, Bangalore - 560019. Pages: 336 (xvi+320);1000 Copies

Phone : 26602802; 26611011.

Internet : www.vyasamadhwa.org

E-mail : info@vyasamadhwa.org



**PAVITRATULASĪ**

**ISBN No. 978-93-81826-36-2**

First Edition : 2014

Price : Rs. 130/-

Typeset by :
**Śrī Vyāsa Madhva Samśodhana Pratiṣṭhāna (R), Bangalore.**

**Cover Design by:**
**Smt. Shruti Vyasanakere**

Printed at :
**Vāgartha,** N.R. Colony, Bangalore, Ph: 22427677.

# ವಿಷಯಾನುಕ್ರಮಣಿಕೆ

*****

# ಮುನ್ನುಡಿ

ಪೂಜ್ಯವಸ್ತುಗಳಲ್ಲಿ ಸರ್ವೋತ್ತಮ ಪೂಜ್ಯವಸ್ತು ಭಗವಂತನಾದ ಶ್ರೀಹರಿ. ಪೂಜಕರಲ್ಲಿ ಅಗ್ರಸ್ಥಾನ ಜೀವೋತ್ತಮರಾದ ಶ್ರೀವಾಯುದೇವರದು. ಪೂಜಾಸಾಧನ ದ್ರವ್ಯಗಳಲ್ಲಿ ಅತ್ಯಂತ ಪ್ರಮುಖವಾದುದು ತುಲಸೀ. ಈ ಮೂರು ಜೊತೆಯಾಗುವುದು ಆಧ್ಯಾತ್ಮಿಕ ಸಾಧನೆಯ ಮಹಾತ್ರಿವೇಣೀಸಂಗಮ. ಪೂಜಾಪ್ರತೀಕವಾಗಿ ಸಾಲಿಗ್ರಾಮಕ್ಕೆ ಅಗ್ರಸ್ಥಾನವಾದರೆ, ಪೂಜಾದ್ರವ್ಯಗಳಲ್ಲಿ ತುಲಸಿಗೆ ಅಗ್ರಸ್ಥಾನ. ಸಾಲಿಗ್ರಾಮವಿಲ್ಲದೇ ತೀರ್ಥವಿಲ್ಲ. ತುಲಸಿಯಿಲ್ಲದೇ ಪೂಜೆಯಿಲ್ಲ. ಪ್ರಾಣಿಗಳಲ್ಲಿ ಗೋವು, ಮನುಷ್ಯರಲ್ಲಿ ವಿಪ್ರ, ಸಸ್ಯಗಳಲ್ಲಿ ತುಲಸೀ, ಇದು ಇನ್ನೊಂದು ಬಗೆಯಲ್ಲಿ ತುಲಸಿಯ ಮಹಿಮೆ. ದೇವತೆಗಳಿಲ್ಲದ ಪದಾರ್ಥವೇ ಇಲ್ಲ. ಆದರೆ, ಎಲ್ಲ ದೇವತೆಗಳು ನೆಲೆಸಿರುವ ಅಪೂರ್ವ ವಸ್ತು ಎಂದರೆ ತುಲಸೀ. ಸಕಲ ದೇವತೆಗಳು ಮಾತ್ರವಲ್ಲದೇ ಪುಷ್ಕರ ಮೊದಲಾದ ಸಕಲ ಕ್ಷೇತ್ರಗಳು, ಗಂಗಾದಿ ಸಕಲ ತೀರ್ಥಗಳು ಸಹ ತುಲಸಿಯಲ್ಲಿ ನೆಲೆಸಿವೆ ಎಂಬುದು ಇನ್ನೊಂದು ವಿಶೇಷ. ಮೃತ್ತಿಕೆ, ವೇದಿಕೆ, ಪರಿಸರ, ಮಂಜರೀ, ದಳ, ಬೇರು, ಕಾಷ್ಠ ಗಂಧ, ಬೀಸಿಬರುವ ಗಾಳಿ, ಹಾಕುವ ನೀರು ಮೊದಲಾಗಿ ತುಲಸಿಗೆ ಸಂಬಂಧಿಸಿದ ಪ್ರತಿಯೊಂದು ಸಹ ಪರಮಪಾವನ. ತುಲಸಿಯಲ್ಲಿ ತ್ಯಾಜ್ಯವೆನ್ನಿಸುವ ಅಂಶವೇ ಇಲ್ಲ. ಧೂಪ, ದೀಪ, ಜಪ, ತರ್ಪಣ, ಧಾರಣ, ಪ್ರಾಶನ, ಮಾರ್ಜನ, ಅಲಂಕಾರ, ನೈವೇದ್ಯ[೧], ಹೋಮ, ಆಪೋಶನ, ಭೋಜನ, ಮೊದಲಾಗಿ ಸಕಲ ದೇವಕಾರ್ಯಕ್ಕೂ ಸಹ ತುಲಸಿಯು ಅತ್ಯಗತ್ಯ. ದೇವಕಾರ್ಯದಂತೆ ವೈಶ್ವದೇವ (ದೇವಯಜ್ಞ), ಬ್ರಹ್ಮಯಜ್ಞ (ಋಷಿಯಜ್ಞ), ಶ್ರಾದ್ಧ ಪಕ್ಷ (ಪಿತೃಯಜ್ಞ), ಭೂತಯಜ್ಞ ಹಾಗೂ ಮನುಷ್ಯಯಜ್ಞ ಎಂಬ ಪಂಚಮಹಾಯಜ್ಞಗಳಲ್ಲೂ ತುಲಸಿಯದೇ ಪ್ರಧಾನ ಪಾತ್ರ. ಪ್ರತಿಯೊಂದು ದಾನದೊಂದಿಗೂ ಸಹ ತುಲಸಿಯು ವಿಹಿತ. ಅಗ್ನಿ ಮೊದಲಾದವುಗಳಂತೆ ಶಪಥಕ್ಕೂ ಸಹ ತುಲಸಿಯು ವಿಹಿತವಾಗಿದೆ. ತುಲಸಿಗೆ ಪ್ರಾಕಾರ ಕಟ್ಟಿಸುವುದು ಸಹ ಮಹಾಪುಣ್ಯಕ್ಕೆ ಸಾಧನ. ತುಲಸಿಯ ಪರಿಸರವು ಸಹ ಪರಮಪಾವನ. ತುಲಸೀ ಮಾಲೆಯ ಧಾರಣೆಯು ಜಪ ಮೊದಲಾದವುಗಳ ಪೂರ್ಣಸಾಫಲ್ಯಕ್ಕೆ ಕಾರಣವಾಗುವ ಪ್ರಧಾನ ವೈಷ್ಣವಚಿಹ್ನೆ. ಹೀಗೆ ತುಲಸಿಯ ಮಹಿಮೆ ಅಗಾಧ ಹಾಗೂ ಅಪೂರ್ವ. ಅಮೃತೋದ್ಭವೆಯಾದ ತುಲಸಿಯದು ಅಮೃತಮಯವಾದ ವ್ಯಕ್ತಿತ್ವ ಎಂಬುದು ನಿಶ್ಚಿತ.

ತುಲಸಿಯು, ಜಾಜಿ ಮೊದಲಾದವುಗಳಂತೆ ಹೂವಿನ ಗಿಡವಲ್ಲ, ಮಾವು ಮೊದಲಾದವುಗಳಂತೆ ಹಣ್ಣಿನ ಮರವೂ ಅಲ್ಲ, ಕದಂಬ ಮೊದಲಾದವುಗಳಂತೆ ನೆರಳಿನ

---

೧ ತುಲಸೀದಲಸಂಮಿಶ್ರಂ ಜಲಂ ಯಸ್ತು ಪ್ರಯಚ್ಛತಿ । ಕರೋತಿ ಕಮಲಾಕಾಂತಃ ದಿವ್ಯಾನ್ನಂ ಷಡ್ರಸಾತ್ಮಕಮ್ ॥
ದಿವ್ಯಾನ್ನಮಪಿ ರಾಜೇಂದ್ರ ತುಲಸೀದಲವರ್ಜಿತಮ್ । ನ ಗೃಹ್ಣಾತಿ ಹರಿಸ್ತದ್ಧಿ ವಿಷಮಂ ಕುರುತೇ ಪರಃ ॥
– ಲಕ್ಷ್ಮೀಸಂಹಿತಾ

ಮರವೂ ಅಲ್ಲ, ತೆಂಗು, ತಾಳೆಗಳಂತಹ ಎತ್ತರವೂ ಇದಕ್ಕಿಲ್ಲ, ಅಶ್ವತ್ಥ ಆಲಗಳಂತಹ ವೈಶಾಲ್ಯವೂ ಇದರದ್ದಲ್ಲ. ಆದರೆ, ಅವು ಯಾವಕ್ಕೂ ಇಲ್ಲದ ಹಿರಿಮೆ ತುಲಸಿಗೆ ಇದೆ ಎಂಬುದು ಮಾತ್ರ ನಿಜ. ತುಲಸಿಯಂತೆ ನಿತ್ಯ ಪೂಜ್ಯವೆನ್ನಿಸಿದ ಸಸ್ಯ ಮತ್ತೊಂದಿಲ್ಲ. ದರ್ಶನ, ಸ್ಪರ್ಶನ, ನೋಟ, ವಂದನೆ, ಮೊದಲಾದ ಪ್ರತಿಯೊಂದು ಕಾರ್ಯಕ್ಕೂ ಸಹ ಅಪಾರ ಪುಣ್ಯ ನೀಡುವ ಹಿರಿಮೆ ತುಲಸಿಯದು. ಅಂತ್ಯಕಾಲದಲ್ಲೂ ಸಹ ಗಂಗೆಯಂತೆ ಅತ್ಯಗತ್ಯವಾದ ವಸ್ತುವೆಂದರೆ ತುಲಸಿಯೇ.

ಪಾಪನಾಶಕವಸ್ತುಗಳಲ್ಲಿಯೂ ಸಹ ತುಲಸಿಯದು ಅಗ್ರಸ್ಥಾನ. ಯಮದೇವರ ಪಟ್ಟಿಯಲ್ಲಿನ ಸಕಲ ಪಾಪಗಳನ್ನು ಸಹ ಪರಿಹರಿಸುವ ಅದ್ಭುತ ಸಾಮರ್ಥ್ಯ ತುಲಸಿಯದು. ರೋಗಹರವಸ್ತುವಾಗಿಯೂ ಆಯುರ್ವೇದದಲ್ಲಿ ಪರಿಗಣಿತವಾಗಿರುವ ಪದಾರ್ಥ ತುಲಸಿ. ಸಕಲರೋಗಗಳಿಗೂ ಸಹ ಸಂಜೀವಿನಿ ಎನ್ನಿಸಿರುವುದು ಇದರ ಹಿರಿಮೆ.

ಶ್ರೀಹರಿಯ ಪೂಜಾ ಪ್ರತೀಕವಾಗಿ ಸಾಲಿಗ್ರಾಮವು ಸರ್ವಶ್ರೇಷ್ಠ. ಅದರಂತೆ ಪೂಜಾ-ಸಾಧನದ್ರವ್ಯವಾಗಿ ತುಲಸಿ ಸರ್ವಶ್ರೇಷ್ಠ ಸಕಲ ಸಾಧನಗಳಿದ್ದು ತುಲಸಿಯಿಲ್ಲದ ಪೂಜೆ ಶ್ರೀಹರಿ ಕೊಳ್ಳನು. ತುಲಸಿ ಇದ್ದ ಸ್ಥಳದಲ್ಲಿಯೇ ವಿಷ್ಣುವಿನ ನಿತ್ಯಸನ್ನಿಧಾನ. ತುಲಸಿಯ ದಳ ಇಲ್ಲದಿದ್ದರೆ ಅದರ ಎಲೆಯೂ ಶ್ರೇಷ್ಠ ಕಾಷ್ಠವೂ ಶ್ರೇಷ್ಠ. ತುಲಸಿಯು ಒಣಗಿದ್ದರೂ ಯಾವ ದೋಷವೂ ಇಲ್ಲ. ಅತ್ಯಂತ ಅನಿವಾರ್ಯ ಸಂದರ್ಭಗಳಲ್ಲಿ ನಿರ್ಮಾಲ್ಯ ತುಲಸಿಯನ್ನು ತೊಳೆದೂ ಸಹ ಪೂಜೆಗೆ ಪುನಃ ಉಪಯೋಗಿಸಬಹುದು. ಕೊನೆಯ ಪಕ್ಷ ತುಲಸಿ ಎಂಬ ನಾಮವನ್ನಾದರೂ ಉಚ್ಚರಿಸಿ ಶ್ರೀಹರಿಯನ್ನು ಪೂಜಿಸಬೇಕು. ನೈವೇದ್ಯ ಪದಾರ್ಥಗಳಲ್ಲೂ ತುಲಸಿದಳವನ್ನು ಹಾಕಲೇಬೇಕು. ಅಂತೂ ತುಲಸಿಯಿಲ್ಲದ ಪೂಜೆ ಮೊದಲಾದ ಸಕಲ ಕಾರ್ಯಗಳು ನಿಷಿದ್ಧ.

ತುಲಸಿಯನ್ನು ಕುರಿತು ತುಲಸ್ಯುಪನಿಷತ್ ಎಂಬ ಉಪನಿಷತ್ತೇ ಇದೆ ಎಂಬುದು ಇದರ ಹಿರಿಮೆಗೆ ಮತ್ತೊಂದು ನಿದರ್ಶನ. ತುಲಸಿಯ ಹಿರಿಮೆಯು ಅದರ ಹೆಸರಿನಲ್ಲಿಯೇ ಬಂದಿದೆ. ತುಲನೆಯಿಲ್ಲದ ಸಸ್ಯ ಎಂಬುದು ಇದರ ಅರ್ಥ. ಆದಕ್ಕೆಂದೇ ಇದರ ಅಭಿಮಾನಿ ದೇವತೆ ಸಾಕ್ಷಾತ್ ಮಹಾಲಕ್ಷ್ಮೀ ಎಂದು ಶಾಸ್ತ್ರಗಳು ಸಾರಿವೆ. ವೈಷ್ಣವೀ, ವಿಷ್ಣುವಲ್ಲಭೇ, ವಿಷ್ಣುಪ್ರಿಯೇ, ಮೋಕ್ಷದಾಯಿನೀ, ನಾರಾಯಣಮನಃಪ್ರಿಯೆ, ಭುಕ್ತಿಮುಕ್ತಿಪ್ರದೆ, ರೂಪದಲ್ಲಿ ಲಕ್ಷ್ಮೀ, ರೆಂಬೆಗಳಲ್ಲಿ ಸಾಗರಸಂಭವೆ, ಪತ್ರಗಳಲ್ಲಿ ಶ್ರೀ, ಶಾಖೆಗಳಲ್ಲಿ ಕಮಲ, ಪುಷ್ಪಗಳಲ್ಲಿ ಇಂದಿರಾ, ಫಲದಲ್ಲಿ ಕ್ಷೀರಾಬ್ಧಿ ಸಂಭವ, ಮಜ್ಜೆಯಲ್ಲಿ ಪದ್ಮವಾಸ, ತ್ವಚೆಗಳಲ್ಲಿ ಹರಿಪ್ರಿಯೇ ಮೊದಲಾದ ವರ್ಣನೆ, ಸುರಾಸುರನರೋರಗಗಳಿಂದ ಸದಾ ವಂದ್ಯತ್ವ, ವಿಷ್ವಂಕಹರ್ಷಕಾರಿಣೀ,

ವೈಕುಂಠೇಶ್ವರ ಪದಾಬ್ಜವಾಸಿನೀ, ಜಗದ್ಧಾತ್ರಿ, ಬ್ರಹ್ಮಾದಿಗಳಿಗೂ ಅನುಗ್ರಹ ಮಾಡುವವಳು[೨], ಚರಾಚರಗಳ ಪಾಲಕಿ, ಪುರುಷೋತ್ತಮವಲ್ಲಭೆ, ಶ್ರೀಮಹಾಲಕ್ಷ್ಮೀ, ವಿದ್ಯಾ, ಅಮೃತಾ, ಸರ್ವಕಲ್ಯಾಣೀ, ಸರ್ವಸಂಪತ್ಪ್ರದಾಯಿನೀ, ವಿಶ್ವಕರ್ತ್ರೀ, ಲೋಕಪೂಜ್ಯಾ, ಕರವೀರಪುರನಿವಾಸಿನೀ, ಭಗವತೀ, ಬ್ರಹ್ಮಾಣೀ, ಪಂಕಜಧಾರಿಣೀ, ಮೊದಲಾದ ತುಲಸಿ ಸ್ತೋತ್ರಗಳಲ್ಲಿನ ಉಲ್ಲೇಖಗಳು, ತುಲಸಿಯು ಮಹಾಲಕ್ಷ್ಮೀ ಎಂಬುದಕ್ಕೆ ಗಮಕವಾಗಿವೆ.

''ರಮಾ ಶ್ರೀತುಲಸೀಸಂಸ್ಥಾ''[೩], ''ಶಾಲಿಗ್ರಾಮೋ ಮಹಾವಿಷ್ಣುಸ್ತುಲಸೀ[೪] ಶ್ರೀರ್ನ ಸಂಶಯಃ'', ''ಯಥಾ [೫]ಶ್ರೀಸ್ತುಲಸೀಸಂಸ್ಥಾ ನಿತ್ಯಮೇವ'', ''ಪ್ರಾಣಿನಾಂ ಕೃಪಯಾ [೬]ಲಕ್ಷ್ಮೀಸ್ತುಲಸೀವೃಕ್ಷಮಾಶ್ರಿತಾ'', ''ವೃಕ್ಷಾಧಿವಾಸಮಗಮತ್ ಕಮಲಾ ಚ ದೇವೀ ದುಃಖಾದಿನಾಶನಕರೀ ಸತತಂ ಸ್ಮೃತಾಽಪಿ''[೭] ಇತ್ಯಾದಿ ಶಾಸ್ತ್ರವಚನಗಳು ತುಲಸಿಯನ್ನು ಮಹಾಲಕ್ಷ್ಮೀ ಎಂಬುದಾಗಿ ವರ್ಣಿಸಿವೆ. ಸಾಲಿಗ್ರಾಮದಲ್ಲಿ ಹೇಗೆ ಸಾಕ್ಷಾತ್ ಮಹಾವಿಷ್ಣುವಿನ ಸನ್ನಿಧಾನವೋ ಹಾಗೇ ತುಲಸಿಯಲ್ಲಿ ಸಾಕ್ಷಾತ್ ಮಹಾಲಕ್ಷ್ಮಿಯ ಸನ್ನಿಧಾನ ಎಂದು ಇದರಿಂದ ತಿಳಿಯುವುದು: ಪ್ರಾಕೃತ ಸಸ್ಯವನ್ನೇ ಮಹಾಲಕ್ಷ್ಮಿ ಎಂಬುದಾಗಿ ತಿಳಿಯಬೇಕು ಎಂದಲ್ಲ.

ವರಲಕ್ಷ್ಮಿ ಶ್ರೀತುಲಸಿ, ಪುರಂದರವಿಟ್ಠಲನ ರಾಣಿ, ಪುರಂದರವಿಟ್ಠಲನ ಚರಣಕಮಲಗಳ ಸ್ಮರಣೆ ಈವಳು ತುಲಸಿ, ಉತ್ತಮ ವೈಕುಂಠಪದವೀಯುವವಳು, ಪಾವನವೈಕುಂಠಪದವೀವಳೆ, ಇಂದಿರೆ ಶ್ರೀತುಲಸೀ, ಸರಸಿಜನಾಭನ ಸಲಿಗೆಯ ರಾಣಿ ಎಂಬ ಪುರಂದರದಾಸರ ಮಾತುಗಳು, ಶ್ರೀತರುಣಿವಲ್ಲಭನ ಪ್ರೀತಿವಿಷಯಳೇ, ಭಜಿಪರಿಗೆ ಪರಮಮಂಗಳದ ಪದವಿತ್ತು ಸಲಹುವಿ ಎಂಬ ಜಗನ್ನಾಥದಾಸರು ಮೊದಲಾದವರ ಮಾತುಗಳು ಸಹ ತುಲಸಿಯು ಮಹಾಲಕ್ಷ್ಮೀ ಎಂಬುದನ್ನೇ ಸ್ಫುಟಪಡಿಸುವವು. ''ಸಂಸಾರ ಬಲೆಯಿಂದ ಕಡೆಗೆತ್ತು ಎನ್ನ ಕಲುಷವರ್ಜಿತೆ'', ''ಭಜಿಪರಿಗೆ ಪರಮ ಮಂಗಳದ ಪದವಿತ್ತು ಸಲಹುವಿ'', ''ಜಗನ್ನಾಥವಿಟ್ಠಲನ ಚರಣಾಬ್ಜ ಮನದಲ್ಲಿ ನೀ ತೋರಿಸೆನಗೆ ನೀ ದಯದಿ'' ಮೊದಲಾಗಿ ಮಹಾಲಕ್ಷ್ಮಿಗೆ ಅನ್ವಯಿಸುವ ಹಿರಿಮೆಯನ್ನು ಅನ್ವಯಿಸಿಯೇ ಸ್ತುತಿಸಿರುವರು. ಆದ್ದರಿಂದ ತುಲಸಿಯನ್ನು ಸಾಕ್ಷಾತ್

---

೨ ಜಗದ್ಧಾತ್ರಿ ನಮಸ್ತುಭ್ಯಂ ವಿಷ್ಣೋಶ್ಚ ಪ್ರಿಯವಲ್ಲಭೇ।
ಯತೋ ಬ್ರಹ್ಮಾದಯೋ ದೇವಾಃ ಸೃಷ್ಟಿಸ್ಥಿತ್ಯಂತಕಾರಣಃ॥ – ಬೃಹದ್ಧರ್ಮಪುರಾಣ

೩. ಪಂಚರಾತ್ರ, ಪದ್ಮಮಾಲಾ ವಿವರಣೆ

೪ ಸ್ಕಂದಪುರಾಣ (೬- ನಾಗರಖಂಡ/೨೪೩/೫೭)

೫ ಸ್ಕಂದಪುರಾಣ (೬- ನಾಗರಖಂಡ/೨೪೮/೧೬)

೬ ಸ್ಕಂದಪುರಾಣ (೬- ನಾಗರಖಂಡ/೨೪೮/೧೩)

೭ ಸ್ಕಂದಪುರಾಣ (೬- ನಾಗರಖಂಡ/೨೪೮/೧೯)

ಮಹಾಲಕ್ಷ್ಮಿ ಎಂದು ತಿಳಿಯುವುದು .ಕ್ಷೀರೋದಮಥನೋದ್ಭೂತೇ ಎಂಬ ತುಲಸಿಪ್ರಾರ್ಥನೆಯಲ್ಲೂ ತುಲಸೀ ಮಹಾಲಕ್ಷ್ಮಿ ಎಂಬ ಧ್ವನಿ ಇದ್ದೇ ಇದೆ.

"ತುಲಸೀ ಜಾಂಬವತೀ ಪ್ರೋಕ್ತಾ"[೮] ಎಂಬ ಪುರಾಣವಾಕ್ಯವು ಶ್ರೀಸಂಕರ್ಷಣ ಒಡೆಯರಿಂದ ರಚಿತವಾದ ಹರಿಕಥಾಮೃತಸಾರ ವ್ಯಾಖ್ಯಾನದಲ್ಲಿ ಉದ್ಧೃತವಾಗಿದೆ. ಅದಕ್ಕೆ ಇದು ವಿರುದ್ಧವೇನೂ ಅಲ್ಲ. ಪುರಾಣಗಳಿಗಿಂತ ಸಪ್ತಮೂಲಶಾಸ್ತ್ರಗಳಲ್ಲಿ ಪರಿಗಣಿತವಾಗಿರುವ ಪಂಚರಾತ್ರವು ಪ್ರಧಾನವಾದ್ದರಿಂದ ಅದಕ್ಕನುಗುಣವಾಗಿಯೇ ಪುರಾಣವಾಕ್ಯವನ್ನು ಅರ್ಥೈಸುವುದು ವಿಹಿತ. ಮಹಾಲಕ್ಷ್ಮೀಯು ತುಲಸಿಗೆ ಮುಖ್ಯಾಭಿಮಾನಿನಿಯಾಗಿದ್ದು ಜಾಂಬವತಿ ಅವಾಂತರಾಭಿಮಾನಿನಿಯಾಗಿರುವಳು ಎಂದು ಭಾವಿಸಿದರೆ ಸಮನ್ವಯವು ಸಾಧ್ಯವಾಗುವುದು. ತುಲಸಿಗೆ ಅವರತ್ವ ಹೇಳುವ ವಚನಗಳು ಕ್ವಚಿತ್ ಕಂಡುಬಂದಾಗ ಅದು ಜಾಂಬವತೀಪರ ಎಂದು ತಿಳಿದರೆ ಸಾಕು. ವಿಷ್ಣುಚಕ್ರಕ್ಕೆ ದುರ್ಗೆ ಮುಖ್ಯಾಭಿಮಾನಿನಿ ಆದರೂ ಕಾಮ ಅವಾಂತರಾಭಿಮಾನಿ, ಶಂಖಕ್ಕೆ ಶ್ರೀದೇವಿ ಮುಖ್ಯಾಭಿಮಾನಿನಿಯಾದರೂ ಅನಿರುದ್ಧ ಅವಾಂತರಾಭಿಮಾನಿ ಇತ್ಯಾದಿ ಪ್ರಸಂಗಗಳಲ್ಲಿ ಹೇಗೋ ಹಾಗೆ ಎಂದು ಇದನ್ನು ತಿಳಿಯಬಹುದು. ಜಾಂಬವತಿಯಲ್ಲಿ ವಿಶೇಷ ರಮಾಸನ್ನಿಧಾನ ಎಂಬ ಮಾತು ಇದಕ್ಕೆ ಪೋಷಕವೇ ಆಗಿದೆ. ಉಡುಪಿಯ ಶ್ರೀಕೃಷ್ಣಮಠದಲ್ಲಿ ಮುಖ್ಯಪ್ರಾಣದೇವರಿಗಿಂತಲೂ ಮುಂಚಿತವಾಗಿಯೇ ಶ್ರೀತುಲಸಿಗೆ ಆರತಿಯೆತ್ತುವ ಸಂಪ್ರದಾಯವು ಇದನ್ನು ದೃಢಪಡಿಸುತ್ತದೆ. ಶ್ರೀ ರಾಘವೇಂದ್ರಸ್ವಾಮಿಗಳು ಪ್ರತಿನಿತ್ಯ ಪ್ರಾತಃಕಾಲದಲ್ಲಿ ತುಲಸೀವನಗಳಿಗೆ ತೆರಳಿ ಅಲ್ಲಿಯ ಮಹಾಲಕ್ಷ್ಮಿಯನ್ನು ವಂದಿಸಿ ಆ ಬಳಿಕ ಶ್ರೀಮುಖ್ಯಪ್ರಾಣನಿಗೆ ವಂದಿಸುತ್ತಿದ್ದರು ಎಂಬ [೯] ಶ್ರೀರಾಘವೇಂದ್ರವಿಜಯದ ಉಲ್ಲೇಖ ಇದಕ್ಕೆ ಸಂವಾದಿಯಾಗಿದೆ. ಎಲ್ಲಕ್ಕಿಂತ ಮುಖ್ಯವಾಗಿ ತುಲಸಿಗೆ ಸರ್ವಶ್ರೇಷ್ಠ ಪೂಜಾಸಾಧನ ದ್ರವ್ಯ ಎಂಬ ಹಿರಿಮೆಯು ಇದರಿಂದ ಅರ್ಥವತ್ತಾಗುವುದು.

ಶ್ರೀಮದ್ಭಾಗವತದಲ್ಲಿ ತುಲಸಿಯ ಮಹಿಮೆ ವಿಶೇಷವಾಗಿ ಬಂದಿದೆ. ನಮ್ಮ ಮಾತುಗಳು ಶ್ರೀತುಲಸಿಯಂತೆ, ಶ್ರೀಹರಿಯ ಪಾದಕಮಲವನ್ನು ಕೊಂಡಾಡುವ ಕಾರ್ಯದಲ್ಲಿ ತೊಡಗುವುದಾದಲ್ಲಿ ನರಕದಲ್ಲಿರಲು ಸಹ ಸಿದ್ಧ ಎಂಬ ಮಾತಿನಲ್ಲಿ ತುಲಸಿಯ ವಿಶೇಷ

---

೮ **ತುಲಸೀ** ಜಾಂಬವತೀತ್ಯುಕ್ತಾ ಲಕ್ಷ್ಮ್ಯಾವೇಶೇನ ಸಂಯುತಾ।
ತಯಾ ಸಂಪೂಜಯೇದ್ವಿಷ್ಣುಂ ವಿಷ್ಣುಲೋಕಮವಾಪ್ನುಯಾತ್ ॥ – (ಪಾದ್ಮೇ ಉತ್ತರಖಂಡೇ)

೯ ಸ ಪ್ರಣಮ್ಯ ತುಲಸೀವನಸ್ಥಿತಾಮಿಂದಿರಾಂ ತದನು ತತ್ಪದಾಶ್ರಿತಮ್।
ವಾಯುನಂದನಮವಂದತಾದರಾದಿಂದಿರೇಶಕರುಣೈಕಮಂದಿರಮ್ ॥
– ಶ್ರೀರಾಘವೇಂದ್ರವಿಜಯ (೧೦/೨೩)

ಭಗವತ್ಪರತ್ವವು ನಿರೂಪಿತವಾಗಿದೆ. ತುಲಸಿಯ ಗಂಧವನ್ನು ಆಘ್ರಾಣಿಸದವನು ಜೀವಚ್ಛವ, ಪರಮಾತ್ಮನ ಪಾದಾರವಿಂದದ ಸಂಪರ್ಕ ಪಡೆದ ತುಲಸಿಯ ಮೇಲೆ ಬೀಸಿ ಬರುವ ಗಾಳಿಯು ಮಹಾಲಕ್ಷ್ಮಿಯ ಮನಸ್ಸಿಗೂ ಮುದ ನೀಡುವಂತಹುದು[೧೦]

ಸುಮಧ್ವವಿಜಯದಲ್ಲೂ ತುಲಸಿಯ ಮಹಿಮೆ ಅನೇಕಪ್ರಸಂಗಗಳಲ್ಲಿ ನಿರೂಪಿತವಾಗಿದೆ. ಶ್ರೀವೇದವ್ಯಾಸರೂಪದ ಶ್ರೀಹರಿಯ ಕರ್ಣಗಳಲ್ಲಿ ಶೋಭಿಸುವ ತುಲಸಿಯು ಕಮಲ ಮೊದಲಾದ ಪುಷ್ಪಗಳು ತನ್ನ ಸ್ಥಾನಕ್ಕೆ ಚ್ಯುತಿ ತರದಿರಲಿ ಎಂದು ಅವರನ್ನು ಪ್ರಾರ್ಥಿಸಿಕೊಳ್ಳುವಂತಿದೆ; ಶ್ರೀಮದಾಚಾರ್ಯರ ಕೊರಳಲ್ಲಿ ಅವರ ಶಿಷ್ಯನೊಬ್ಬ ಶ್ರೀಹರಿಯ

---

೧೦ ಜೀವಚ್ಛವೋ ಭಾಗವತಾಂಘ್ರಿರೇಣುಂ ನ ಜಾತು ಮರ್ತ್ಯೋಽಭಿಲಷೇತ ಯಸ್ತು ।
ಶ್ರೀವಿಷ್ಣುಪದ್ಯಾ ಮನುಜಸ್ತುಲಸ್ಯಾಃ ಶ್ವಸಂಛವೋ ಯಸ್ತು ನ ವೇದ ಗಂಧಮ್ ॥
– ಭಾಗವತ (೨/೩/೨೩)

ತಸ್ಯಾರವಿಂದನಯನಸ್ಯ ಪದಾರವಿಂದಕಿಂಜಲ್ಕಮಿಶ್ರ**ತುಲಸೀ**ಮಕರಂದವಾಯುಃ ।
ಅಂತರ್ಗತಃ ಸ್ವವಿವರೇಣ ಚಕಾರ ತೇಷಾಂ ಸಂಕ್ಷೋಭಮಕ್ಷರಜುಷಾಮಪಿ ಚಿತ್ತತನ್ವೋಃ ॥
– ಭಾಗವತ (೩/೧೬/೪೩)

ಅಕ್ಷರಜುಷಾಮಪಿ– ತದ್ರೂಪಸೇವಾಭ್ಯಾಸಿನಾಮಪಿ – ಭಾಗವತತಾತ್ಪರ್ಯ

ಕಾಮಂ ಭವೇಮ ವೃಜಿನೈರ್ನಿರಯೇಷು ನಷ್ಟಾಶ್ಚೇತೋಽಲಿವದ್ಯದಿ ನು ತೇ ಪದಯೋ ರಮೇತ ।
ವಾಚಶ್ಚ ನಸ್ತುಲಸಿವದ್ಯದಿ ತೇಽಂಘ್ರಿಶೋಭಾಃ ಪೂರ್ಯೇತ ತೇ ಗುಣಗಣೈರ್ಯದಿ ಕರ್ಣರಂಧ್ರಃ ॥
– ಭಾಗವತ (೩/೧೬/೪೯)

ಮಂದಾರಕುಂದಕುರವೋತ್ಪಲಚಂಪಕಾರ್ಣಪುನ್ನಾಗನಾಗಬಕುಲಾಂಬುಜಪಾರಿಜಾತಾಃ ।
ಗಂಧೇಽರ್ಚಿತೇ **ತುಲಸಿ**ಕಾಭರಣೇನ ತಸ್ಯಾ ಯಸ್ಮಿಂಸ್ತಪಃ ಸುಮನಸೋ ಬಹುಮಾನಯಂತಿ ॥
– ಭಾಗವತ (೩/೧೬/೧೯)

– ಭಕ್ತೈರರ್ಚಿತೇ ಸತಿ ಭಗವತಾ ತುಲಸೀಕಾಭರಣೇ ಕೃತೇ ತಸ್ಯಾ ಗಂಧಾರ್ಥಂ ತಪೋ ಬಹುಮಾನಯಂತಿ । – ಭಾಗವತತಾತ್ಪರ್ಯ

ಯಂ ವೈ ವಿಭೂತಿರುಪಯಾತ್ಯನುವೇಲಮನ್ಯೈರರ್ಥಾರ್ಥಿಭಿಃ ಸ್ವಶಿರಸಾ ಧೃತಪಾದರೇಣುಃ ।
ಧನ್ಯಾಽರ್ಪಿತಾಂಘ್ರಿ**ತುಲಸೀ**ನವದಾಮಧಾಮ್ನೋ ಲೋಕಂ ಮಧುವ್ರತಪತೇರಿವ ಕಾಮಯಾನಾ॥
– ಭಾಗವತ (೩/೧೮/೨೦)

ಮಧುವ್ರತಪತೇಃ ಸಾರಗ್ರಾಹಿಣಾಂ ಪತೇಃ । ಅಂಘ್ರಿಸ್ಥ ತುಲಸೀಲೋಕಂ ಸ್ಥಾನಮುರಸಿಸ್ಥಾಽಪಿ ಸ್ಪರ್ಧಯೇವ ಕಾಮಯಾನಾ – ''ಲಬ್ಧ್ವಾಽಪಿ ವಕ್ಷಸಿ ಪದಮ್''
– ಇತಿ ಚ ಭಾಗವತತಾತ್ಪರ್ಯ

ಪರಿಜನಾನುರಾಗವಿರಚಿತಸ್ತವಲವಸಂಶಬ್ದಸಲಿಲಕಿಸಲಯ**ತುಲಸಿ**ಕಾದೂರ್ವಾಂಕುರೈ – ರಪಿ ಸಂಭೃತಯಾ ಸಪರ್ಯಯಾ ಕಿಲ ಪರಮ ಪರಿತುಷ್ಯಸಿ ॥ – ಭಾಗವತ (೫/೩/೬)

ತಸ್ಮಿನ್ ವಾವ ಕಿಲ ಸ ಏಕಲಃ ಪುಲಹಾಶ್ರಮೋಪವನೇ
ವಿವಿಧಕುಸುಮಕಿಸಲಯ**ತುಲಸಿ**ಕಾಂಬುಭಿಃ ..... ॥ – ಭಾಗವತ (೫/೭/೧೦)

ನಿರ್ಮಾಲ್ಯವೆಂಬ ಕಾರಣದಿಂದ ಧಾರಣೆಗೆ ಅತ್ಯಂತ ಯೋಗ್ಯವಾದ ತುಲಸಿಮಾಲೆಯನ್ನು ಸಮರ್ಪಿಸಿದ: ಇದೇ ಮೊದಲಾದ ಅಲ್ಲಿಯ ಮಾತುಗಳು ಅಲ್ಲಿಯ ಮಾತುಗಳು ಗಮನಾರ್ಹವಾದವು[೧೧].

ಶ್ರೀಟೀಕಾಕೃತ್ಪಾದರೆಂದು ಲೋಕವಿಖ್ಯಾತರಾದ ಶ್ರೀಜಯತೀರ್ಥರ ಪದ್ಯಮಾಲಾ ಕೃತಿಯಲ್ಲೂ ಪೂಜಾವಿಧಿಗೆ ಸಂಬಂಧಿಸಿದಂತೆ ತುಲಸಿಯ ಮಹತ್ತ್ವವು ನಿರೂಪಿತವಾಗಿದೆ[೧೨].

ಶ್ರೀವಾದಿರಾಜಸ್ವಾಮಿಗಳು ಸರಸಭಾರತೀವಿಲಾಸ ಹಾಗೂ ರುಗ್ಮಿಣೀಶವಿಜಯ ಕೃತಿಗಳಲ್ಲಿ ತುಲಸಿಯ ಮಹಿಮೆಯನ್ನು ಉಲ್ಲೇಖಿಸಿರುವರು. ಪುಣ್ಯಭೂಮಿಯಲ್ಲಿ ಜನಿಸುವ

---

೧೧ ಉಪಕರ್ಣಮಮುಷ್ಯ ಭಾಸಿತಾ ತುಲಸೀ ಮಂತ್ರಯತೀವ ಲಾಲಿತಾ।
ಮಮ ನಾಥ ಪದಂ ನ ಮತ್ಸರಾಜ್ಜಲಜಾದ್ಯಾನಿ ಹರೇಯುರಿತ್ಯಲಮ್ ॥ - ಮ. ವಿ. (೭/೪೨)

ಅವಧಾರ್ಯ ವಿಶೇಷಕಾರಿಶಂಖಪ್ರಕಟಾಂಕಾನ್ ಸುಧಿಯಾ ಗತಾರ್ದ್ರಭಾವಾನ್।
ಲಸಿತಾ ತುಲಸೀಸ್ರಗಸ್ಯ ಕಂಠೇ ಹರಿನಿರ್ಮಾಲ್ಯತಯೋಚಿತಾ ನ್ಯಧಾಯಿ॥ - ಮ. ವಿ. (೧೩/೧೨)

ಅತಿಭಾಸುರಕರ್ಣಭಾಸಿತಶ್ರೀತುಲಸೀಗುಚ್ಛಮತುಚ್ಛಕಾಂತಿಗಂಡಮ್।
ಭುವನತ್ರಯಭೂತ್ಯಭೂತಿದಾನೇ ಚತುರಭ್ರೂವರವಿಭ್ರಮಂ ಸುಮೌಲಿಮ್ ॥
- ಮ. ವಿ. (೧೩/೩೫)

ವಿಮಲಮಲಯಜಾಂಭೋಬಿಂದುಭಿಶ್ಚರ್ಚಿತಾರ್ಚೋ ನವಲಲಿತತುಲಸ್ಯಾ ಪುಷ್ಪರಾಜ್ಯಾಽಽರ್ಚಯತ್ಸಃ।
ಸ್ಥಲಜಜಲಜವಲ್ಲೀವೃಕ್ಷವೀರುತ್ಸಮಸ್ತಪ್ರಸವವಿಜಯಲಕ್ಷ್ಮ್ಯಾ ಮೂರ್ತಯೇವೇಂದಿರೇಶಮ್॥
- ಮ. ವಿ. (೧೪/೩೫)

ಸುರನಾಥಗುರುಃ ಸುರಭೀಕೃತದಿಙ್ಮುಖಯಾ ನವಚಂದನಮಿಶ್ರಿತಯಾ।
ಅತಿಕೋಮಲಯಾ ತುಲಸೀಪ್ರಸವಚ್ಛಟಯೈಕ್ಷ್ಯತ ಪುಂಭಿರಸೌ ಲಸಿತಃ॥
- ಸುಮಧ್ವವಿಜಯ ಭಾವಪ್ರಕಾಶಿಕಾ (೧೬/೫೮)

೧೨ ಆದೌ ದೇವಗೃಹೇ ನ್ಯಸ್ಯ ಕಲಶಾನ್ ಸಪ್ತ ಪಂಚ ವಾ।
ಆಹರೇತ್ ತುಲಸೀಂ ದೂರ್ವಾಂ ಪುಷ್ಪಾಣ್ಯದ್ಯತನಾನಿ ಚ॥
ಏಕಂ ಸ್ಯಾನ್ಮಧುಪರ್ಕೇಽನ್ಯತ್ ಪುನರಾಚಮನೇ ತಥಾ।
ನಿಕ್ಷಿಪೇದ್ಗಂಧತುಲಸೀಪುಷ್ಪಾದೀನಿ ಯಥಾವಿಧಿ॥
ತುಲಸೀದಲಯುಕ್ತೇನ ಶಂಖತೋಯೇನ ಪೂಜಕಃ।
ಪೂಜಾದ್ರವ್ಯಾಣಿ ಸರ್ವಾಣಿ ಪ್ರೋಕ್ಷ್ಯ ಪೀಠಂ ಪ್ರಪೂಜಯೇತ್॥
ತತ್ಕರ್ಣಿಕಾಸ್ಥಿತಂ ದೇವಂ ನಾರಾಯಣಮಜಂ ವಿಭುಮ್।
ಉದ್ಯದ್ಭಾಸ್ವದಿತಿ ಧ್ಯಾತ್ವಾ ಸಪುಷ್ಪತುಲಸೀಕರಃ॥
ಆಸನಸ್ಥಂ ಹರಿಂ ಸ್ಪೃಷ್ಟ್ವಾ ಮೂಲದ್ವಾದಶಕಂ ಜಪೇತ್।
ಅರ್ಪಯೇದ್ಗಂಧಪುಷ್ಪಾಣಿ ಮೂಲೇನ ತುಲಸೀಂ ತಥಾ॥
- ಪದ್ಯಮಾಲಾ (೨, ೫೫, ೫೬, ೬೦, ೭೮)

ತುಲಸಿಯು ಶ್ರೇಷ್ಠ ಯತಿಶೇಖರರಿಂದಲೂ ಪೂಜಿತಳಾದವಳು, ಗಣೇಶನಿಗೆ ತುಲಸಿಯಿಂದ ಪೂಜೆ ನಿಷಿದ್ಧ ಎಂಬುದು ರುಗ್ಮಿಣೀಶವಿಜಯದಲ್ಲಿನ ಉಲ್ಲೇಖವಾದರೆ[೧೩]. ಶ್ರೀರುದ್ರದೇವರು ತುಲಸಿ ಮಾಲೆಯನ್ನು ಶಿರಸಾ ಧರಿಸಿರುವರು ಎಂಬುದು ಸರಸಭಾರತೀ ವಿಲಾಸದಲ್ಲಿನ ಉಲ್ಲೇಖವಾಗಿದೆ.

ಶ್ರೀಜಗನ್ನಾಥದಾಸರ ಹರಿಕಥಾಮೃತಸಾರದಲ್ಲಿ ಅನೇಕ ಕಡೆಗಳಲ್ಲಿ ಶ್ರೀತುಲಸಿಯ ಹಿರಿಮೆಯ ಪ್ರಸ್ತಾಪ ಬಂದಿದೆ. ತುಲಸಿಯು ಶ್ರೀಹರಿಯ ಅಧಿಷ್ಠಾನ, ಅದರಲ್ಲಿ ಐದುಸಾವಿರದ ಮುನ್ನೂರಾ ಹದಿನೇಳು[೧೪] ಭಗವದ್ರೂಪಗಳು ಇವೆ. ಶಾಸ್ತ್ರಾಲಾಪನವೇ ಶ್ರೀತುಲಸಿ, ಶ್ರೀತುಲಸಿಯು ಪ್ರಧಾನ ಪೂಜಾ ಸಾಧನ. ಪ್ರತಿದಿವಸ ಶ್ರೀತುಲಸಿಯ ಸಮೇತವಾಗಿ ಶ್ರೀಹರಿಯನ್ನು ಪೂಜಿಸುವ ಶ್ರೀಹರಿಭಕ್ತರಿಗೆ ಅಭಿಮಾನಿದೇವತೆಗಳು ಪುರುಷಾರ್ಥಗಳನ್ನು ನೀಡುವರು. ಬಿಂಬರೂಪಿಯಾದ ಶ್ರೀಹರಿಯನ್ನು ಹೃದಯಕಮದಲ್ಲಿ ಆರಾಧಿಸಿದಾಗ ಮಾತ್ರವೇ ಶ್ರೀತುಲಸಿ ಮೊದಲಾದವುಗಳ ಸಮರ್ಪಣೆಯ ಪೂರ್ಣ ಫಲ ಲಭಿಸುವುದು. ಗೋಪಿಚಂದನ ಶ್ರೀಮುದ್ರೆಗಳೊಂದಿಗೆ ಶ್ರೀತುಲಸಿ ಕಮಲಾಕ್ಷ ಮೊದಲಾದ ಮಾಲೆಗಳನ್ನು ಕೊರಳಲ್ಲಿ ಧರಿಸುವುದು ಶ್ರೀಹರಿಯ ವಿಶೇಷ ಅನುಗ್ರಹಕ್ಕೆ ಸಾಧನ. ಸಾಲಿಗ್ರಾಮವನ್ನು ಇರಿಸಿಯೇ ಶ್ರೀತುಲಸಿಯನ್ನು ಪೂಜಿಸಬೇಕು. ತುಲಸಿಗೆ ಎರಡು ತಿಂಗಳುಗಳು ತುಂಬಿದ ಬಳಿಕವೇ ಅದು ಪೂಜೆಗೆ ಯೋಗ್ಯ[೧೫]. ದೇವರ್ಷಿಯಾದ ಶ್ರೀನಾರದರು ತುಲಸೀ

---

೧೩. ತುಲಸಿ ಮಿಲಸಿ ಕೃಷ್ಣಾಂಘ್ರ್ಯಂಬುಜೇ ಪುಣ್ಯಭೂಜೇ
ವರಯ ವರಯತೀಂದ್ರೈರ್ವಂದಿತೇಽಸ್ಮಾನ್ ವಯಸ್ಯಾಃ।
ಮನಸಿ ಮನಸಿಜಾದೇರ್ನಿರ್ವೃತಿಂ ನಿರ್ಮಿಮೀತೇ
ವನಜವನಜಗಂಧೋಽಪ್ಯಂತರೇಣಾಂಬ ನ ತ್ವಾಮ್ ॥ – ರುಗ್ಮಿಣೀಶ ವಿಜಯ (೭/೮)

ಶ್ರೀತುಲಸ್ಯಮತಾ ಹೇರಂಬಸ್ಯ ..... । – ರುಗ್ಮಿಣೀಶ ವಿಜಯ (೧೬/೪೨)

ಪದ್ಮಾಕ್ಷತುಲಸೀಮಾಲಾವಿದ್ಯೋತಿತಶಿರೋಧರಮ್ ।
ನೀಲಗ್ರೀವಂ ಲಸದ್ರತ್ನಭಾಸ್ವರಾಹೀಶಭೂಷಣಮ್ ॥ – ಸರಸಭಾರತೀವಿಲಾಸ (೨/೩.೭)

೧೪ ಶೃಣು ಪಂಚಸಹಸ್ರೈಶ್ಚ ತ್ರಿಶತೈಶ್ಚೈಕಷೋಡಶೈಃ।
ತುಲಸೀಗತರೂಪಾಣೀ ಜ್ಞೇಯಾನಿ ವಿಭುಧೈಃ ಸದಾ ॥ (ಪ್ರವೃತ್ತ)
– (ಶ್ರೀಕಮಲಾಪತಿದಾಸರ ಟೀಕೆ)

೧೫ ಶೈವಶೂದ್ರಾರ್ಚಿತಂ ಚೇಶಂ ವಾಯುಂ ತು ಹರಿಮೇವ ಚ।
ದ್ವಿಮಾಸಹೀನಾಂ ತುಸಲೀಮಪ್ರಸೂತಾಂ ಚ ಗಾಂಸ್ತೀಚ್ । ನಮಾಮ್
ವಿವಾಹಶೂನ್ಯಮಶ್ವತ್ಥಂ ನಮಂತೇ ಪೂಜಯಂತಿ ಚ ॥
– ಗರುಡಪುರಾಣ (ಬ್ರಹ್ಮಕಾಂಡ)

ಮಣಿಗಳಿಂದ ಮಾಡಿದ ಮಾಲೆಯನ್ನು ಕೊರಳಲ್ಲಿ ಧರಿಸುವರು ಮೊದಲಾದ ಉಲ್ಲೇಖ ತುಲಸಿಗೆ ಸಂಬಂಧಿಸಿದಂತೆ ಅದರಲ್ಲಿ ಬಂದಿದೆ[೧೬].

---

೧೬ ಪ್ರತಿಮೆ ಸಾಲಿಗ್ರಾಮ ಗೋsಭ್ಯಾ। ಗತ ಅತಿಥಿ ಶ್ರೀತುಲಸಿ ಪಿಪ್ಪಲ
ಯತಿ ವನಸ್ಥ ಗೃಹಸ್ಥ ವಟು ಯಜಮಾನ ಸ್ವಪರಜನ।
ಪೃಥಿವಿ ಜಲ ಶಿಖಿ ಪವನ ತಾರಾ। ಪಥ ನವಗ್ರಹ ಯೋಗ ಕರಣ ಭ
ತಿಥಿ ಸಿತಾಸಿತಪಕ್ಷ ಸಂಕ್ರಮ ಅವನಧಿಷ್ಠಾನ॥ - ಹರಿಕಥಾಮೃತಸಾರ (೫/೩)

ವಾರಿಯೊಳಗಿಪ್ಪತ್ತು ನಾಲಕು। ಮೂರೆರಡು ಸಾವಿರದ ಮೇಲ್ಮು-
ನ್ನೂರು ಹದಿನೇಳೆನಿಪ ರೂಪವು ಶ್ರೀತುಲಸಿದಳದಿ॥ - ಹರಿಕಥಾಮೃತಸಾರ (೫/೮)

ಪಾಪಕರ್ಮವು ಪಾದುಕೆಗಳನು। ಲೇಪನವು ಸತ್ಪುಣ್ಯ ಶಾಸ್ತ್ರಾ-
ಲಾಪನವೆ ಶ್ರೀತುಲಸಿ ಸುಮನೋವೃತ್ತಿಗಳೆ ಸುಮನ॥ - ಹರಿಕಥಾಮೃತಸಾರ (೫/೧೫)

ಸ್ಥಳಜಲಾದ್ರಿಗಳಲ್ಲಿ ಜನಿಸುವ। ಫಲಸುಪುಷ್ಪಜಗಂಧರಸ ಶ್ರೀ-
ತುಲಸಿ ಮೊದಲಾದಖಿಳಪೂಜಾಸಾಧನಪದಾರ್ಥ।
ಹಲವು ಬಗೆಯಿಂದರ್ಪಿಸುತ ಬಾಂ।ಬೊಳೆಯ ಜನಕಗೆ ನಿತ್ಯನಿತ್ಯದಿ
ತಿಳಿವದಿದು ವ್ಯತಿರೇಕಪೂಜೆಗಳೆಂದು ಕೋವಿದರು॥ - ಹರಿಕಥಾಮೃತಸಾರ (೧೧/೨೪)

ಪ್ರತಿದಿವಸ ಶ್ರೀತುಲಸಿ ಗಂಧಾ। ಕ್ಷತೆ ಕುಸುಮ ಫಲ ದೀಪ ಪಂಚಾ-
ಮೃತದಿ ಪೂಜಿಪ ಭಕ್ತರಿಗೆ ಕೊಡುತಿಹರು ಪುರುಷಾರ್ಥ॥ - ಹರಿಕಥಾಮೃತಸಾರ (೧೧/೩೦)

ಹಲವು ಕರ್ಮವ ಮಾಡಿ ದೇಹವ। ಬಳಲಿಸದೆ ದಿನದಿನದಿ ಹೃದಯಾ-
ಮಲಸದನದಿ ವಿರಾಜಿಸುವ ಹರಿಮೂರ್ತಿಯನೆ ಭಜಿಸು।
ತಿಳಿಯದೀ ಪೂಜಾಪ್ರಕರಣವ। ಫಲ ಸುಪುಷ್ಪಾಘ್ರ್ಯೋದಕ ಶ್ರೀ-
ತುಲಸಿಗಳನರ್ಪಿಸಲು ಒಪ್ಪನು ವಾಸುದೇವ ಸದಾ॥ - ಹರಿಕಥಾಮೃತಸಾರ (೧೩/೨೧)

ಮಂದನಾದರು ಸರಿಯೆ ಗೋಪೀಚಂದನ ಶ್ರೀಮುದ್ರೆಗಳ ನಲ-
ವಿಂದ ಧರಿಸುತ ಶ್ರೀತುಲಸಿ ಪದ್ಮಾಕ್ಷ ಸರಗಳನು।
ಕಂಧರದ ಮಧ್ಯದಲಿ ಧರಿಸಿ ಮುಕುಂದ ಶ್ರೀಭೂರಮಣ ತ್ರಿಜಗ-
ದ್ವಂದ್ಯ ಸರ್ವಸ್ವಾಮಿ ಮಮ ಕುಲದೈವವೆನೆ ಪೊರೆವ॥ - ಹರಿಕಥಾಮೃತಸಾರ (೧೭/೨೦)

ನೇಮದಿಂದಶ್ವತ್ಥ ತುಲಸೀಸೋಮಧರನಲಿ ವಿಮಲಸಾಲಿ-
ಗ್ರಾಮಗಳನಿಟ್ಟಭಿನಮಿಪ ನರ ಮುಕ್ತಿಯೋಗ್ಯ ಸದಾ॥ - ಹರಿಕಥಾಮೃತಸಾರ (೩೦/೬)

ಶೈವ ಶೂದ್ರ ಕರಾರ್ಚಿತ ಮಹಾದೇವ ವಾಯು ಹರಿಪ್ರತಿಮೆ ವೃಂ-
ದಾವನದಿ ಮಾಸದ್ವಯದೊಳಿಹ ತುಲಸಿ ಅಪ್ರಸವ-।
ಗೋ ವಿವಾಹವಿವರ್ಜಿತಾಶ್ವತ್ಥಾದಿವಿಟಪಿಗಳ ಭಕ್ತಿಪೂರ್ವಕ
ಸೇವಿಸುವ ನರ ದೈತ್ಯ ಶಾಶ್ವತದುಃಖವೈದುವನು - ಹರಿಕಥಾಮೃತಸಾರ (೩೦/೮)

ಪಣೆಯೊಳೊಪ್ಪುವ ತಿಲಕ ತುಲಸೀಮಣಿಗಣಾನ್ವಿತಕಂಠ ಕರದಲಿ
ಕ್ವಣಿತವೀಣಾಸುಸ್ವರದಿ ಬಹುತಾಳಗತಿಗಳಲಿ।
ಪ್ರಣವಪ್ರತಿಪಾದ್ಯನ ಗುಣಂಗಳ ಕುಣಿಕುಣಿದು ಅತಿಸಂಭ್ರಮದಿ ಗಾ-
ಯನವ ಮಾಡುವ ದೇವಋಷಿನಾರದರಿಗಭಿನಮಿಪೆ - ಹರಿಕಥಾಮೃತಸಾರ (೩೨/೨೬)

ಶ್ರೀವಿದ್ಯಾಧೀಶವಿಜಯದಲ್ಲಿ, ಶ್ರೀವಿದ್ಯಾಧೀಶರು ಕೋಟಿ ತುಲಸೀ ದಳಗಳಿಂದ ಶ್ರೀಹರಿಯನ್ನು ಪೂಜಿಸಿದರು ಹಾಗೂ ಅವರು ಕೇವಲ ತುಲಸೀದಳಗಳಿಂದ ಕೂಡಿದ ಅನ್ನವನ್ನಷ್ಟೇ ಸ್ವೀಕರಿಸುತ್ತಿದ್ದರು ಎಂಬ ಅಪೂರ್ವ ಉಲ್ಲೇಖ ಬಂದಿದೆ[೧೭].

ತುಲಸಿಯನ್ನು ಬೃಂದಾವನದಲ್ಲಿ ಪೂಜಿಸುವುದು ವಿಶೇಷ ಪುಣ್ಯಕರ. ತುಲಸಿಯೇ ಬೇರೆ, ಬೃಂದಾವನದ ದೇವತೆಯಾದ ಬೃಂದೆಯೇ ಬೇರೆ. ಇಬ್ಬರನ್ನೂ ಒಂದೇ ಎಂಬುದಾಗಿ ಸರ್ವಥಾ ತಿಳಿಯಕೂಡದು. ತುಲಸಿಯು ಮುಖ್ಯವಾಗಿ ಮಹಾಲಕ್ಷ್ಮಿಯಾದರೆ, ಬೃಂದೆಯು ಬೃಂದಾವನಕ್ಕೆ ಅಭಿಮಾನಿಯಾದ ಬೇರೊಬ್ಬ ದೇವತೆ. ಶ್ರೀಜಗನ್ನಾಥದಾಸರು ಬೃಂದೆಯನ್ನು ಪ್ರತ್ಯೇಕವಾಗಿಯೇ[೧೮] ಸ್ತುತಿಸಿರುವುದನ್ನು ಇಲ್ಲಿ ಗಮನಿಸಬೇಕು.

ಪ್ರಸ್ತುತ 'ಪವಿತ್ರತುಲಸೀ' ಕೃತಿಯು ಶ್ರೀಮದ್ಭಾಗವತ, ಪದ್ಮ, ಸ್ಕಂದ, ಬೃಹದ್ಧರ್ಮ ಮೊದಲಾದ ಪುರಾಣಗಳಲ್ಲಿ ಬಂದಿರುವ ತುಲಸಿಯ ಬಗೆಗಿನ ಮಾಹಿತಿಯ ಸಂಕಲನವಾಗಿದೆ. ತುಲಸಿಯ ಬಗೆಬಗೆಯ ಮಹಿಮೆಯನ್ನು ಪ್ರತ್ಯೇಕ ಶೀರ್ಷಿಕೆಗಳಲ್ಲಿ ಸಂಗ್ರಹಿಸಿ ಅಲ್ಲಿಯ ಶ್ಲೋಕಗಳಲ್ಲಿನ ಭಾವಾನುವಾದವನ್ನು ಕೊಡಲಾಗಿದೆ. ತುಲಸಿಯನ್ನು ಕುರಿತ ತುಲಸ್ಯುಪನಿಷತ್, ಸ್ತೋತ್ರಗಳು ಹಾಗೂ ಮಾಹಾತ್ಮ್ಯಪ್ರತಿಪಾದಕವಾದ ಕೃತಿಗಳನ್ನು ಶ್ರೀತುಲಸೀಸ್ತೋತ್ರಮಂಜರೀ (ಪರಿಶಿಷ್ಟ - ೨) ಎಂಬುದಾಗಿ ಸಂಗ್ರಹಿಸಿ ಕೊಡಲಾಗಿದೆ. ಶ್ರೀತುಲಸಿಯ ಮಹಿಮೆಯನ್ನು ತಿಳಿಸುವ ಪುರಾಣಗಳಲ್ಲಿನ ಉಪಾಖ್ಯಾನಗಳ ಸಾರವನ್ನು ಸಹ ಕೊಡಲಾಗಿದೆ. ಶ್ರೀತುಲಸಿಯನ್ನು ಕುರಿತಾದ ಹರಿದಾಸರ ಕೃತಿಗಳನ್ನು ಸಹ ಕೊಡಲಾಗಿದೆ. ತುಲಸಿಯೇ ಮಾಡಿದಂತಹ ಶ್ರೀಹರಿಯ ಸ್ತೋತ್ರವನ್ನು ಪ್ರತ್ಯೇಕವಾಗಿ ಅಳವಡಿಸಲಾಗಿದೆ. ಉತ್ಥಾನ ದ್ವಾದಶೀಯಂದು

---

೧೭ ತುಲಸೀದಲಕೋಟಿಭಿರ್ಮುದಾ ಕಲಶೇ ಸಂಭೃತಪಾವನಾಂಬುಭಿಃ।
ವಿಧಿವಚ್ಛುಚಿರೇಷ ವಿಗ್ರಹಂ ಯತಿರಾಡಾರ್ಚಿಚದಚ್ಯುತಾಸ್ಪದಮ್ ॥ - ವಿದ್ಯಾಧೀಶವಿಜಯ (೬.೩೧)
ಹರಿಪಾದಾರ್ಪಿತೈರ್ನಿತ್ಯಂ ತುಲಸೀದಲಮಾತ್ರಕೈಃ।
ಉಪದಂಶವದಂಧಾಶ್ನನ್ನಿಂಧೇ ಸ್ಮ ಯತಿಸಿಂಧುರಃ॥ - ವಿದ್ಯಾಧೀಶವಿಜಯ (೭.೫೭)

ಲಕ್ಷತುಲಸಿದಳಗಳಿಂದ ಅರ್ಚನೆಯೇ ಮಹಾಪುಣ್ಯಕರವೆನ್ನಿಸಿರುವಾಗ ಕೋಟಿತುಲಸಿದಳಗಳಿಂದ ಶ್ರೀಹರಿಯನ್ನು ಪೂಜಿಸಿದ ಶ್ರೀವಿದ್ಯಾಧೀಶತೀರ್ಥರ ಸಾಧನೆ ಎಷ್ಟು ಅಪೂರ್ವ ಎಂದು ತಿಳಿಯುವುದು

ತುಲಸೀದಲಲಕ್ಷೇಣ ಯೋಽರ್ಚಯೇದ್ರುಗ್ಮಿಣೀಪತಿಮ್।
ಜನ್ಮಾರ್ಜಿತಸಹಸ್ರಸ್ಯ ಪಾಪಸ್ಯ ಕುರುತೇ ಕ್ಷಯಮ್॥
ಸುಗಂಧಿತುಲಸೀಪತ್ರೈಃ ಪ್ರತಿಮಾಯಾಃ ಸಮಂತತಃ।
ನಿಶ್ಛಿದ್ರಮಾಚರೇದ್ಯಸ್ತು ಸೋಽನಂತಫಲಮಾಪ್ನುಯಾತ್॥ - ಪ.ಪು

೧೮ ಬೃಂದಾವನಿ ಜನನಿ ವಂದಿಸುವೆ ಸತತ ಜ-
ಲಂಧರನ ರಾಣಿ ಕಲ್ಯಾಣಿ। ಕಲ್ಯಾಣಿ ಶ್ರೀತುಲಸಿ
ಮಂದಿರೆ ಎಮಗೆ ದಯವಾಗೆ॥ - ತತ್ತ್ವಸುವ್ವಾಲಿ

ಅತ್ಯಗತ್ಯವೆನ್ನಿಸಿದ ಪ್ರಬೋಧೋತ್ಸವ ಹಾಗೂ ತುಲಸೀವಿವಾಹವಿಧಿಯನ್ನು ಪರಿಶಿಷ್ಟದಲ್ಲಿ ಕೊಡಲಾಗಿದೆ. ಮುದ್ರಿತವಾದ ಪುರಾಣಗಳ ಪ್ರತಿಗಳೊಂದಿಗೆ ಮುಖ್ಯವಾಗಿ ನನ್ನ ಹಸ್ತಪ್ರತಿ ಸಂಗ್ರಹ (ಶ್ರೀಜಯತೀರ್ಥಸಂಸ್ಕೃತಹಸ್ತಲಿಖಿತಗ್ರಂಥಾಲಯ, ವ್ಯಾಸನಕೆರೆ)ದಲ್ಲಿ ಉಪಲಬ್ಧವಿರುವ ಸಕಲಪುರಾಣೋಕ್ತ ತುಲಸಿಮಾಹಾತ್ಮ್ಯಸಂಗ್ರಹ ರೂಪವಾದ ಪ್ರಾಚೀನಹಸ್ತಪ್ರತಿಯೊಂದನ್ನು ಇದಕ್ಕೆ ಮುಖ್ಯ ಆಕರವನ್ನಾಗಿ ಉಪಯೋಗಿಸಿಕೊಂಡಿದ್ದೇನೆ. ಒಟ್ಟಾಗಿ ಶ್ರೀತುಲಸಿಯ ಬಗೆಗಿನ ಸಮಗ್ರವೆನ್ನಿಸುವಂತಹ ಅನೇಕ ವಿವರಗಳು ಇದರಲ್ಲಿ ಸಂಕಲಿತವಾಗಿವೆ ಎಂಬ ವಿಶ್ವಾಸ ನನಗಿದೆ.

ಧನ್ವಂತರಿನಿಘಂಟು, ರಾಜನಿಘಂಟು, ನಿಘಂಟುರತ್ನಾಕರ, ಅಷ್ಟಾಂಗಹೃದಯ, ಚರಕಸಂಹಿತಾ, ಸುಶ್ರುತಸಂಹಿತಾ ಮೊದಲಾದ ಗ್ರಂಥಗಳಲ್ಲಿ ಬಂದಿರುವಂತೆ ತುಲಸಿಯ ನಾಮಾಂತರಗಳು ಹೀಗಿವೆ[೧೯].

---

೧೯ ತುಲಸೀ ಸುರಸಾ ಗ್ರಾಮ್ಯಾ ಸುಲಭಾ ಬಹುಮಂಜರೀ।
ಅಪೇತರಾಕ್ಷಸೀ ಗೌರೀ ಶೂಲಘ್ನೀ ದೇವದುಂದುಭಿಃ॥ – ಭಾವಪ್ರಕಾಶ, ಪುಷ್ಪವರ್ಗ (೬೧)

ತುಲಸೀ ಸುಭಗಾ ತೀವ್ರಾ ಪಾವನೀ ವಿಷ್ಣುವಲ್ಲಭಾ।
ಸುರೇಜ್ಯಾ ಸುರಸಾ ಜ್ಞೇಯಾ ಕಾಯಸ್ಥಾ ಸುರದುಂದುಭಿಃ॥
ಸುರಭಿರ್ಬಹುಪತ್ರೀ ಚ ಮಂಜರೀ ಸಾ ಹರಿಪ್ರಿಯಾ।
ಅಪೇತರಾಕ್ಷಸೀ ಶ್ಯಾಮಾ ಗೌರೀ ತ್ರಿದಶಮಂಜರೀ।
ಭೂತಘ್ನೀ ಪೂತಪತ್ರೀ ಚ ಜ್ಞೇಯಾ ಚೈಕೋನವಿಂಶತಿಃ॥
– ರಾಜನಿಘಂಟು, ಕರವೀರಾದಿವರ್ಗ (೧೦/೧೫೦-೧೫೧)

ತುಲಸೀ ಸುರಸಾ ಗೌರೀ ಪಾಪಘ್ನೀ ವಿಷ್ಣುವಲ್ಲಭಾ।
ಮಯೂರಾ ಸರಲಾ ಕೃಷ್ಣಾ ಭೂತೇಷ್ಟಾ ದೇವದುಂದುಭಿಃ।
ಭೂತಪ್ರಿಯಾ ನಾಗಮಾತಾ ಚಕ್ರಪರ್ಣೀ ಸುಮಂಜರೀ॥
ಸ್ವಾದುಗಂಧಚ್ಛದಾ ಭೂತಪತಿಶ್ಚಾಪೇತರಾಕ್ಷಸೀ॥
– ಕೈಯದೇವನಿಘಂಟು – ಪುಷ್ಪವರ್ಗ(೧೧೨೪-೨೫)

ತುಲಸೀ ವೈಷ್ಣವೀವೃಂದಾ ಸುಗಂಧಾ ಗಂಧಹಾರಿಣೀ।
ಅಮೃತಾ ಪತ್ರಪುಷ್ಪಾ ಚ ಪವಿತ್ರಾ ಸುರವಲ್ಲರೀ॥
ಸುರವಲ್ಲೀ ಸುವಹಾ ಪ್ರೇತರಾಕ್ಷಸೀ ವಿಷ್ಣುಪತ್ನೀ
ಮಾಲಾಶ್ರೇಷ್ಠಾ ಪಾಪಘ್ನೀ ಲಕ್ಷ್ಮೀಃ ಶ್ರೀಕೃಷ್ಣವಲ್ಲಭಾ। – ಶಾಲಿಗ್ರಾಮನಿಘಂಟುಭೂಷಣ

ಕೃಷ್ಣಾ ತು ಕೃಷ್ಣತುಲಸೀ ಕೃಷ್ಣಪರ್ಣೀ ಕರಾಲಕಃ – ರಾಜವಲ್ಲಭಃ ಶ್ವೇತತುಲಸೀ

ಕೃಷ್ಣಾ ತು ಕೃಷ್ಣತುಲಸೀ ಶ್ವೇತಾ ಲಕ್ಷ್ಮೀಃ ಸಿತಾಹ್ವಯಾ। – ರಾಜನಿಘಂಟು (೧೦/೧೨೨)
'ನರಾ ನಾರ್ಯಶ್ಚ। ತಾಂ ದೃಷ್ಟ್ವಾ ತುಲನಾಂ ದಾತುಮಕ್ಷಮಾಃ।
ತೇನ ನಾಮ್ನಾ ಚ ತುಲಸೀ ತಾಂ ವಿದಂತಿ ಪುರಾವಿದಃ।–ಬ್ರಹ್ಮವೈವರ್ತಪುರಾಣಪ್ರಕೃತಿಖಂಡ (೧೫/೧೪)

[೨೦]ತುಲಸೀ, ಅಜಗಂಧಾ, ಕವರಾ, ಕವರೀ, ಕಾಕಮಲ್ಲಿ ಕಾಲಪರ್ಣ, ಕಾಲಮಲ್ಲಿಕಾ, ಕಾಲಮಾಲಾ, ಖರಪುಷ್ಪ ಗಂಧನಾಮಾ, ಗಂಧಹಾರಿಣಿ, ಗಂಧಾಹ್ವಾ, ತೀವ್ರಾ, ತುಂಗೀ,

---

೨೦ ಔಷಧೀಯ ಸಸ್ಯವಾಗಿ ತುಲಸಿಯ ಮಹತ್ವ ಅಪಾರ ಹಾಗೂ ಅಪೂರ್ವ:

He once called her his basil plant; and when she asked for an explanation, said that basil was a plant which had flourished wonderfully on a murdered man's brains, (George Eliot, Middlemarch, Finale) - Century Dictionary- 1890.

The ancients had a curious notion relative to the plant basil (Ocimum basilicum). viz., that there is a property in Basil to propagate scorpions, and that by the smell thereof they are bred in the brains of man (Quoted in N and Q., 1st Ser., VII, 40)
- Century Dictionary - 1890.

The French Physician, Dr. Victor Racine, currently on a visit to India, has stated in a lecture, one of a series arranged by the Department of Pharmacology, Benares Hindu University, that Tulsi is a wonder drug. regulating the digestive system and stimulating the production of red blood corpuscles, it has yielded extraordinary results in mental disorders as well. It has also been found highly effective in preventing malaria and other common intermittent and enteric fevers.
- (Gujarat Samachar Dt: 24.12.1988

ತುಲಸಿಯು ಮಲೇರಿಯಾ ಜ್ವರವನ್ನು, ಚರ್ಮರೋಗವನ್ನು, ಚೇಳುಸರ್ಪಗಳ ವಿಷವನ್ನು, ನಪುಂಸಕತ್ವವನ್ನು ಗುಣಪಡಿಸುವ ಅಪೂರ್ವ ಸಾಮರ್ಥ್ಯದ ಔಷಧಿ ಎಂಬುದು ಆಯುರ್ವೇದ ವೈದ್ಯ ಪದ್ಧತಿಯಿಂದ ಆವಿಷ್ಕಾರಗೊಂಡಿರುವ ವಿಷಯ; ಕ್ಷಯರೋಗವನ್ನು ನಿಯಂತ್ರಿಸುವ ಹಾಗೂ ಪರಹರಿಸುವ ಸಾಮರ್ಥ್ಯವು ತಿಲಸಿಯಲ್ಲಿರುವುದಾಗಿ ಸಂಶೋಧನೆಯಿಂದ ದೃಢಪಟ್ಟಿದೆ. ತುಲಸಿಯಲ್ಲಿ ೨೭ ಬಗೆಯ ದೇಹಕ್ಕೆ ಆವಶ್ಯಕವಾದ ವಿವಿಧ ಲೋಹಾಂಶಗಳು ಸೇರಿದ್ದು, ಅವುಗಳಿಂದ ಒಟ್ಟು ೩೦೦ಕ್ಕೂ ಹೆಚ್ಚು ಔಷಧಿಗಳು ತಯಾರಾಗುತ್ತಿವೆ ಎಂಬ ವಿಚಾರ ಮಾರ್ಚ್ ೧೯೭೧ರ 'ಸೈನ್ಸ್ ಟುಡೆ' ಪತ್ರಿಕೆಯಲ್ಲಿ ವರದಿಯಾಗಿದೆ. ತುಲಸಿಯ ಗಂಧವು ಸೊಳ್ಳೆಗಳನ್ನು ನಿವಾರಿಸುವುದು. ವಿದೇಶಗಳಲ್ಲೂ ತುಲಸಿಯಿಂದ ತಯಾರಾದ ಅನೇಕ ಔಷಧಿಗಳು ಬಳಕೆಯಲ್ಲಿವೆ. ಪರಿಸರ ಶುದ್ಧಿಯನ್ನು ಸಹ ತುಲಸಿಯ ಮೇಲಿಂದ ಬೀಸಿ ಬರುವ ಗಾಳಿಯು ಮಾಡುವುದು; ತುಲಸಿಯ ದಳವು ನೀರನ್ನು ಶುದ್ಧಗೊಳಿಸುವುದು. ಅದರಲ್ಲಿರುವ ಥೈಮಾಲ್ ಎಂಬ ಕ್ರಿಮಿನಾಶಕ ವಸ್ತು ಇದಕ್ಕೆ ಕಾರಣ. ಕೋಮಾ ಸ್ಥಿತಿಯಲ್ಲಿರುವವರಿಗೆ ಪ್ರಜ್ಞೆ ಮರಳಿಸುವ ಸಾಮರ್ಥ್ಯವು ತುಲಸಿಯಲ್ಲಿದೆ. ಹೀಗೆ ಅನೇಕ ಬಗೆಯ ವೈದ್ಯಕೀಯ ಉಪಯೋಗಗಳನ್ನು ತುಲಸಿಯಲ್ಲಿ ಗುರುತಿಸಲಾಗಿದೆ. (ವಿವರಗಳಿಗೆ GALA PUBLISHERS (BOMBAY) ಅವರ HOLY BASIL (A HERB) - A UNIQUE MEDICINAL PLANT, 1990 ಪುಸ್ತಕವನ್ನು ನೋಡಬಹುದು).

ನಾಗನಾಮಾ, ಪತ್ರಪುಷ್ಪ, ಪ್ರೇತರಾಕ್ಷಸೀ, ಭೂತಪತ್ರಿ, ಭೂರಿಮಂಜರೀ, ಲಕ್ಷ್ಮೀಃ, ಶ್ರೀಮಂಜರೀ, ಶ್ಯಾಮಾ, ಸುರಭಿಮಂಜರೀ, ಸುರಸಾಗ್ರಣೀಃ, ಸುಲಭಾ, ಹರಿಪ್ರಿಯಾ, ಸುರಸಾ, ಗ್ರಾಮ್ಯಾ ಸುಲಭಾ, ಬಹುಮಂಜರೀ, ಅಪೇತರಾಕ್ಷಸೀ, ಗೌರೀ, ಶೂಲಘ್ನೀ, ದೇವದುಂದುಭಿಃ, ಕೃಷ್ಣಾ, ಕೃಷ್ಣತುಲಸೀ, ಕೃಷ್ಣಪರ್ಣೀ, ಕರಾಲಕಃ, ಸುಭಗಾ, ತೀವ್ರಾ, ಪಾವನೀ, ವಿಷ್ಣುವಲ್ಲಭಾ, ಸುರೇಜ್ಯಾ, ಕಯಸ್ಥಾ ಸುರದುಂದುಭಿಃ, ಸುರಭಿಃ, ಬಹುಪತ್ರೀ, ಮಂಜರೀ, ಹರಿಪ್ರಿಯಾ, ಶ್ಯಾಮಾ, ತ್ರಿದಶಮಂಜರೀ, ಭೂತಘ್ನೀ, ಪೂಜಪತ್ರೀ, ಪಾಪಘ್ನೀ, ಮಯೂರಾ, ಸರಲಾ, ಭೂತೇಷ್ಟಾ, ಭೂತಪ್ರಿಯಾ, ನಾಗಮಾತಾ, ಚಕ್ರಪರ್ಣೀ, ಸುಮಂಜರೀ, ಸ್ವಾದುಗಂಧಾ, ಸ್ವಾದುಚ್ಛದಾ, ಭೂತಪತಿಃ, ಪರ್ಣಾಸಃ, ವೃಂದಾ, ಕಠಿಂಜರಃ, ಕುಠೇರಕಃ, ವೈಷ್ಣವೀ, ಪುಣ್ಯಾ, ಪವಿತ್ರಾ, ಮಾಧವೀ, ಅಮೃತಾ.

ಈ ಕೃತಿಯ ಪ್ರಕಾಶನವನ್ನು ಪ್ರಾಯೋಜಿಸಿದವರು ಶ್ರೀಹರಿವಾಯುಗುರುಗಳ ವಿಶೇಷ ಭಕ್ತರೂ, ತತ್ತ್ವಪ್ರಸಾರದಲ್ಲಿ ವಿಶೇಷ ಆಸಕ್ತರೂ, ಕಾಲಕಾಲಕ್ಕೆ ವಿದ್ವಾಂಸರ ಪ್ರವಚನಗಳನ್ನು ಅನೇಕ ಮಠಮಾನ್ಯಗಳಲ್ಲಿ ಪ್ರಾಯೋಜಿಸುವವರೂ ಆದ ಶ್ರೀ ಎಚ್. ಎಸ್. **ವಾಸುದೇವಮೂರ್ತಿ** ಅವರು; ಇದನ್ನು ಅವರು ತಮ್ಮ ಮಾತಾಪಿತೃಗಳಾದ **ದಿ. ಕಮಲಮ್ಮ ಹಾಗೂ ದಿ. ಎಚ್. ವಿ. ಸುಬ್ಬರಾವ್** ಅವರ ಸದ್ಗತಿಗಾಗಿ ಇದನ್ನು ಪ್ರಾಯೋಜಿಸಿರುವರು. ಇವರಿಗೆ ನಮ್ಮ ಪ್ರತಿಷ್ಠಾನವು ಋಣಿ. ಇದರ ಡಿ. ಟಿ. ಪಿ ಕಾರ್ಯ ಶ್ರೀಮತಿ ಕೆ. ಆರ್. ಭಾಗ್ಯಲಕ್ಷ್ಮೀ, ಶ್ರೀಮತಿ ವಿ. ವಿಜಯಲಕ್ಷ್ಮೀ ಹಾಗೂ ಶ್ರೀಪ್ರವೀಣ ಕಟ್ಟಿಯವರದು. ಕರಡು ತಿದ್ದುವ ಕಾರ್ಯ ಚಿ. ಆನಂದ ಪದ್ಮನಾಭ (ಸುದರ್ಶನ) ಹಾಗೂ ನನ್ನ ಪುತ್ರ ಡಾ. ಜಯಂತ ವ್ಯಾಸನಕೆರೆ ಇವರದು. ಮುದ್ರಣ ವಾಗರ್ಥ ಅವರದು.

ಅನಂತ ಚತುರ್ದಶೀ – ಜಯ ಸಂವತ್ಸರ ವ್ಯಾಸನಕೆರೆ ಪ್ರಭಂಜನಾಚಾರ್ಯ
೦೮.೦೯.೨೦೧೪, ಬೆಂಗಳೂರು

॥ ಶ್ರೀಃ ॥

# ಪವಿತ್ರತುಲಸೀ

## ತುಲಸೀಶಬ್ದದ ಅರ್ಥ

ತುಲಸಿಯ ಮಹತ್ತ್ವವನ್ನು ಅದರ ಹೆಸರೇ ತಿಳಿಸಿಕೊಡುವುದು. ತುಲನೆ ಇಲ್ಲದ ಎಂದರೆ ಸಾಟಿ ಇಲ್ಲದವಳು ಎಂಬುದು ಅದರ ಅರ್ಥ. ಇದು ಕೇವಲ ಪ್ರಶಂಸೆಯ ಮಾತಾಗಿರದೆ, ವಾಸ್ತವ ಸಂಗತಿಯಾಗಿರುವುದು ಗಮನಿಸಬೇಕಾದ ಅಂಶ. ಪ್ರಾಣಿಗಳಲ್ಲಿ ಗೋವಿನ ಸ್ಥಾನ, ಪೂಜಾ ಸಸ್ಯಗಳಲ್ಲಿ ತುಲಸಿಯದಾಗಿದೆ. ತೆಂಗು ಮೊದಲಾದವುಗಳಂತೆ ಇದು ದೊಡ್ಡ ವೃಕ್ಷವೂ ಅಲ್ಲ, ಮಲ್ಲಿಗೆ, ಸಂಪಿಗೆ ಮೊದಲಾದವುಗಳಂತೆ ಹೂವಿನ ಗಿಡವೂ ಅಲ್ಲ. ಮಾವು, ಹಲಸು ಮೊದಲಾದವುಗಳಂತೆ ಸವಿಯಾದ ಹಣ್ಣಿನ ಮರವೂ ಅಲ್ಲ. ಆಲ, ಅಶ್ವತ್ಥ ಮೊದಲಾದವುಗಳಂತೆ ನೆರಳು ನೀಡುವ ಗಿಡವೂ ಅಲ್ಲ. ಆದರೂ ಇದೊಂದಿಲ್ಲವಾದಲ್ಲಿ ಭಗವಂತನ ಪೂಜೆ ನಡೆಯುವಂತೆಯೇ ಇಲ್ಲ. ಮತ್ತೊಂದು ರೀತಿಯಲ್ಲೂ ತುಲಸಿಯದು ಅಗಾಧವಾದ ಮಹಿಮೆ. ಹಣ್ಣಿನ ಗಿಡದ ಹಿರಿಮೆ ಹಣ್ಣು ನೀಡಿದರೆ ತೀರಿತು, ನೆರಳು ಮೊದಲಾದವುಗಳ ಕೃತ್ಯವೂ ಅದೇ, ಅದರ ಇತರ ಭಾಗಗಳ ಉಪಯೋಗ ಸರ್ವತೋಮುಖವಾದುದೇನಲ್ಲ. ಆದರೆ ತುಲಸಿಯದು ಹಾಗಲ್ಲ; ಅದರ ದಳ, ಅದರ ಎಲೆ, ಅದರ ಬೀಜ, ಅದರ ಮಂಜರಿ, ಅದೇಕೆ! ಅದರ ಮಣ್ಣು ಸಹ ಅತ್ಯಂತ ಪವಿತ್ರ. ಅದರ ಮೇಲೆ ಬೀಸಿಬರುವ ಗಾಳಿಯು ಸಹ ಪಾವನವಾದುದು. ಮಾತ್ರವಲ್ಲದೆ, ಅದರ ಔಷಧೀಯ ಮಹತ್ತ್ವವು ಸಹ ಅಪಾರವಾದುದು. ಬಗೆಬಗೆಯ ರೋಗಗಳನ್ನು ಸಂಜೀವಿನಿಯಂತೆ ಪರಿಹರಿಸುವ ಅಪೂರ್ವ ಶಕ್ತಿ ಅದರದು. ದರ್ಶನ, ಸ್ಪರ್ಶನ, ನಮನ, ಲೇಪನ, ಹೀಗೆ ತುಲಸಿಗೆ ಸಂಬಂಧಿಸಿದ ಪ್ರತಿಯೊಂದು ಸಹ ತಾರಕ. ಚಿನ್ನ ಮೊದಲಾದ ದ್ರವ್ಯಗಳ ರಾಶಿಯೇ ಇದ್ದರೂ ತುಲಸಿವೊಂದಿಲ್ಲವಾದರೆ ಆ ಪೂಜೆ ಶ್ರೀಹರಿಗೆ ಪ್ರಿಯವೆನ್ನಿಸದು. ಹೆಸರಿಗೆ ತಕ್ಕಂತೆ ಅನುಪಮ ಎನ್ನಿಸಿರುವ ತುಲಸಿ ಲೋಕಮಾನ್ಯ. ಬೇರೆ ಸಸ್ಯಗಳ ಹಿರಿಮೆ ಒಂದು ಲೋಕಕ್ಕೆ ಮಾತ್ರ ಸಂಬಂಧಿಸಿದರೆ, ತುಲಸಿಯ ಹಿರಿಮೆ ಮೂರು ಲೋಕಗಳಿಗೂ ಸಂಬಂಧಿಸಿದ್ದಾಗಿದೆ. ಗಂಗೆಯಂತೆ ಮೂರು ಲೋಕಗಳಲ್ಲೂ ಮಾನ್ಯವಾದ ಪಾವನತ್ವ ಇದರದು.

**[೧]ಯಸ್ಯಾ ದೇವ್ಯಾಸ್ತುಲಾ ನಾಸ್ತಿ ವಿಶ್ವೇಷು ನಿಖಿಲೇಷು ಚ।**
**ತುಲಸೀ ತೇನ ವಿಖ್ಯಾತಾ ತಾಂ ಯಾಮಿ ಶರಣಂ ಪ್ರಿಯೇ॥**

– ಬ್ರಹ್ಮವೈವರ್ತಪುರಾಣ (೧/೨೨/೨೪)

---

೧ ದೇವೀಭಾಗವತ, ಶಬ್ದಾರ್ಥಚಿಂತಾಮಣಿ.

ವಿಶ್ವದ ಸಕಲ ವೃಕ್ಷಗಳಲ್ಲೂ ಇದಕ್ಕೆ ಸಮನಾದ ಮತ್ತೊಂದು ವೃಕ್ಷವಿಲ್ಲ. ಆದಕ್ಕೆಂದೇ ಇದಕ್ಕೆ 'ತುಲಸಿ' ಎಂದು ಹೆಸರು.

**ನರಾ ನಾರ್ಯಶ್ಚ ತಾಂ ದೃಷ್ಟ್ವಾ ತುಲನಾಂ ದಾತುಮಕ್ಷಮಾಃ।**
**ತೇನ ನಾಮ್ನಾ ಚ ತುಲಸೀಂ ತಾಂ ವಿದಂತಿ ಪುರಾವಿದಃ॥**

– ಬ್ರಹ್ಮವೈವರ್ತಪುರಾಣ, ಪ್ರಕೃತಿ (೧೫/೧೪)

ಸಕಲ ಪುರುಷರು ಹಾಗೂ ಸ್ತ್ರೀಯರು ಇದಕ್ಕೆ ಹೋಲಿಕೆಯಾಗುವ ಮತ್ತೊಂದನ್ನು ನೀಡಲು ಅಸಮರ್ಥರಾಗಿ ತುಲಸಿ ಎಂದು ಕರೆದರು ಎಂದು ಹಿಂದಿನ ಜ್ಞಾನಿಗಳು ಹೇಳುವರು.

**ಪುಷ್ಪೇಷು ತುಲನಾಽಪ್ಯಸ್ಯಾ ನಾಸೀದ್ದೇವೀಷು ವಾ ಮುನೇ।**
**ಪವಿತ್ರರೂಪಾ ಸರ್ವಾಸು ತುಲಸೀ ಸಾ ಚ ಕೀರ್ತಿತಾ॥**

– ಬ್ರಹ್ಮವೈವರ್ತಪುರಾಣ, ಪ್ರಕೃತಿ (೨೨/೪೨)

. ದೇವತೆಗಳಲ್ಲು ಸಹ ಇವಳಿಗೆ ಸರಿಗಟ್ಟುವವರು ಇಲ್ಲ ಅಂತಹ ಪವಿತ್ರಗಳಲ್ಲೂ ಪವಿತ್ರಳೆನ್ನಿಸಿದ ಕಾರಣದಿಂದ ಇದಕ್ಕೆ ತುಲಸಿ ಎಂದು ಹೆಸರು.

**ತಕಾರೋ ಮರಣಂ ಪ್ರೋಕ್ತಂ ತದ್ಯೋಗಃ ಸ್ಯಾದುಕಾರತಃ।**
**ಮೃತಾ ಲಸತಿ ಸೇತ್ಯೇವಂ ತುಲಸೀತ್ಯೇವ ಗೀಯತೇ॥**

– ಬ್ರಹ್ಮವೈವರ್ತಪುರಾಣ (೧/೭/೬೩)

ತ ಎಂದರೆ ಮರಣ, ಉಕಾರ ಎಂದರೆ ಅದರೊಂದಿಗೆ ಯೋಗ, ಒಣಗಿದ್ದರೂ ಸಹ ಪವಿತ್ರಳಾಗಿಯೇ ಶೋಭಿಸುವುದರಿಂದ ತುಲಸಿ ಎಂದು ಕರೆಯಲ್ಪಡುವಳು.

**ನಾನ್ಯೇನೇತಿ ಸುವಿಜ್ಞೇಯಂ ಮಣಿಮುಕ್ತಾದಿನಾಽಪಿ ಚ।**
**ನಾಮಾಸ್ಯಾಸ್ತುಲಸೀತ್ಯಸ್ತು ಪವಿತ್ರಾಯಾ ಸುಪಾಪವನಮ್॥**

– ಬ್ರಹ್ಮವೈವರ್ತಪುರಾಣ (೧/೭/೬೨)

ಬೇರೆ ಮಣಿಗಳು, ಮುತ್ತುಗಳು ಮೊದಲಾದವುಗಳು ಎಲ್ಲವೂ ಇದಕ್ಕೆ ಸಾಟಿ ಎನ್ನಿಸಲಾರವು ಅದಕ್ಕಾಗಿಯೇ ಇವಳಿಗೆ ತುಲಸಿ ಎಂದು ಹೆಸರು.

**ಸ್ಥಿತಃ ಪ್ರತಿದಲೇಷ್ವಸ್ಯಾ ಮಂತ್ರೋ ದ್ವಾದಶವರ್ಣಕಃ।**
**ಅಧಿಷ್ಠಾತ್ರೀ ದೇವತಾಽಸ್ಯಾಮಾವಾಂ ದೇವೀಮಹೇಶ್ವರೌ।**
**ನಾರಾಯಣ ಉಪಾಸ್ಯೋಽಸ್ಯಾಃ ಪ್ರಿಯೇಯಂ ವೈಷ್ಣವೀ ಮತಾ॥**

– ಬೃಹದ್ಧರ್ಮಪುರಾಣ (೧/೭/೬೪)

ತುಲಸಿಯ ಪ್ರತಿದಳಗಳಲ್ಲಿಯೂ ದ್ವಾದಶಾಕ್ಷರಮಂತ್ರ ನೆಲೆಸಿದೆ, ಮಹಾಲಕ್ಷ್ಮಿಯು ಇದರಲ್ಲಿ ನೆಲೆಸಿರುವಳು, ಇದರ ಅಭಿಮಾನಿಗಳಾಗಿ ಪಾರ್ವತೀಪರಮೇಶ್ವರರು ಇರುವರು, ಉಪಾಸ್ಯಮೂರ್ತಿ ಸಾಕ್ಷಾತ್ ನಾರಾಯಣ, ಅವನಿಗೆ ಅತ್ಯಂತ ಪ್ರಿಯಳಾದ ಭಕ್ತೆ ಇವಳು.

**ಯದಿ ನಾರಾಯಣಾರ್ಥೇಽಯಂ ಬಭೂವ ತುಲಸೀತರುಃ।**
**ತರುಮೂಲಮಹಂ ಚ ಸ್ಯಾಂ ಪ್ರಿಯಾಯಾಃ ಪ್ರಿಯಕಾಮ್ಯಯಾ ॥**

– ಬೃಹದ್ಧರ್ಮಪುರಾಣ (೧/೭/೬೯)

ನಾರಾಯಣನಿಗೋಸ್ಕರವಾಗಿ ತುಲಸೀವೃಕ್ಷರೂಪದಲ್ಲಿ ಪ್ರಾದುರ್ಭವಿಸಿರುವುದರಿಂದ, ಶ್ರೀಹರಿಯ ಪ್ರೀತಿಗಾಗಿ ಅದರ ಮೂಲದಲ್ಲಿ ತಾನೇ ನೆಲೆಸುವುದಾಗಿ ಮಹಾಲಕ್ಷ್ಮಿಯು ತಿಳಿಸಿದಳು.



**ಇಯಂ ತನುರ್ನದೀರೂಪಾ ಗಂಡಕೀತಿ ಚ ವಿಶ್ರುತಾ।**
**ಪೂತಾ ಸುಪುಣ್ಯದಾ ನೃಣಾಂ ಪುಣ್ಯಾ ಭವತು ಭಾರತೇ ॥**

– ಬ್ರಹ್ಮವೈವರ್ತಪುರಾಣ, ಪ್ರಕೃತಿಖಂಡ (೨/೨೧/೩೩)

ಇವಳ ದೇಹವು ನದಿಯ ರೂಪವನ್ನು ತಳೆದು ಗಂಡಕೀ ಎಂದು ಪ್ರಸಿದ್ಧವಾಗುವುದು, ಇದು ಅತ್ಯಂತ ಪವಿತ್ರವೂ ಮನುಷ್ಯರಿಗೆ ಮಹಾಪುಣ್ಯಪ್ರದವೂ ಆದ ಪುಣ್ಯನದಿಯಾಗಿ ಆಗಲಿ.

**ತವ ಕೇಶಸಮೂಹಾಶ್ಚ ಪುಣ್ಯವೃಕ್ಷಾ ಭವಂತ್ವಿತಿ।**
**ತುಲಸೀಕೇಶಸಂಭೂತಾ ತುಲಸೀತಿ ಚ ವಿಶ್ರುತಾ ॥**

– ಬ್ರಹ್ಮವೈವರ್ತಪುರಾಣ, ಪ್ರಕೃತಿಖಂಡ (೨/೨೧/೩೪)

ನಿನ್ನ ಕೇಶಸಮೂಹಗಳು ಪುಣ್ಯವೃಕ್ಷಗಳಾಗಲಿ, ತುಲಸಿಯ ಕೇಶಗಳಿಂದ ಉದ್ಭವಿಸುವ ಕಾರಣದಿಂದ ತುಲಸಿ ಎಂದು ವಿಖ್ಯಾತವಾಗಲಿ.

**ತ್ರಿಲೋಕೇಷು ಚ ಪುಷ್ಪಾಣಾಂ ಪತ್ರಾಣಾಂ ದೇವಪೂಜನೇ।**
**ಪ್ರಧಾನರೂಪಾ ತುಲಸೀ ಭವಿಷ್ಯತಿ ವರಾನನೇ ॥**

– ಬ್ರಹ್ಮವೈವರ್ತಪುರಾಣ, ಪ್ರಕೃತಿಖಂಡ (೨/೨೧/೩೫)

ಮೂರುಲೋಕಗಳಲ್ಲೂ ದೇವಪೂಜೆಯಲ್ಲಿ ಸಕಲ ಪುಷ್ಪಗಳಿಗೂ ಪತ್ರಗಳಿಗೂ ಪ್ರಧಾನರೂಪವಾಗಿ ತುಲಸಿಯು ಆಗುವುದು.

**ಸ್ವರ್ಗೇ ಮರ್ತ್ಯೇ ಚ ಪಾತಾಲೇ ವೈಕುಂಠೇ ಮಮ ಸನ್ನಿಧೌ ।**
**ಭವಂತು ತುಲಸೀವೃಕ್ಷಾ ವರಾಃ ಪುಷ್ಪೇಷು ಸುಂದರಿ ॥**

– ಬ್ರಹ್ಮವೈವರ್ತಪುರಾಣ, ಪ್ರಕೃತಿಖಂಡ (೨/೨೧/೩೬)

ಸ್ವರ್ಗದಲ್ಲಿ, ಭೂಮಿಯಲ್ಲಿ, ಪಾತಾಳದಲ್ಲಿ ಹಾಗೂ ವೈಕುಂಠದಲ್ಲಿ ನನ್ನ ಸನ್ನಿಧಿಯಲ್ಲಿ ಸಕಲ ಪುಷ್ಪಗಳಿಗೂ ಸಹ ತುಲಸಿಯು ಮಿಗಿಲೆನ್ನಿಸಲಿ.

ವಿ : ಗಂಗಾನದಿಯು ತ್ರಿಪಥಗಾ ಎನ್ನಿಸಿ ಸಕಲ ಲೋಕಗಳಲ್ಲೂ ಸಹ ಪುಣ್ಯನದಿ ಎನ್ನಿಸಿರುವಂತೆ ತುಲಸಿಯು ಸಕಲ ಲೋಕಗಳಲ್ಲೂ ಶ್ರೇಷ್ಠಳೆನ್ನಿಸಿರುವಳು ಎಂದು ಭಾವ.

**ಗೋಲೋಕೇ ವಿರಜಾತೀರೇ ರಾಸೇ ವೃಂದಾವನೇ ಭುವಿ ।**
**ಭಾಂಡೀರೇ ಚಂಪಕವನೇ ರಮ್ಯೇ ಚಂದನಕಾನನೇ ॥**

**ಮಾಧವೀ ಕೇತಕೀ ಕುಂದಮಲ್ಲಿಕಾಮಾಲತೀವನೇ ।**
**ಭವಂತು ತರವಸ್ತತ್ರ ಪುಣ್ಯಸ್ಥಾನೇಷು ಪುಣ್ಯದಾಃ ॥**

– ಬ್ರಹ್ಮವೈವರ್ತಪುರಾಣ, ಪ್ರಕೃತಿಖಂಡ (೨/೨೧/೩೭, ೩೮)

ಗೋಲೋಕದಲ್ಲಿ ಮತ್ತು ಇತರ ಸ್ಥಾನಗಳಲ್ಲಿ ಮಾಧವೀ, ಕೇದಿಗೆ, ಜಾಜಿ, ಮಲ್ಲಿಗೆ, ಮಾಲತಿ ಮೊದಲಾದ ಪುಷ್ಪಗಳು ಪುಣ್ಯಕರವೆನ್ನಿಸಲಿ.

**ತುಲಸೀತರುಮೂಲೇ ಚ ಪುಣ್ಯದೇಶೇ ಸುಪುಣ್ಯದೇ ।**
**ಅಧಿಷ್ಠಾನಂ ತು ತೀರ್ಥಾನಾಂ ಸರ್ವೇಷಾಂ ಚ ಭವಿಷ್ಯತಿ ॥**

–ಬ್ರಹ್ಮವೈವರ್ತಪುರಾಣ, ಪ್ರಕೃತಿಖಂಡ (೨/೨೧/೩೯)

ಆದರೆ ತುಲಸೀವೃಕ್ಷದ ಮೂಲವೆನ್ನಿಸುವ ಮಹಾಪುಣ್ಯಕರವಾದ ಪುಣ್ಯದೇಶದಲ್ಲಿ ಸಕಲ ತೀರ್ಥಗಳು ಸಹ ನೆಲೆಸುವಂತಾಗಲಿ.

**ತತ್ರೈವ ಸರ್ವದೇವಾನಾಂ ಸಮಧಿಷ್ಠಾನಮೇವ ಚ ।**
**ತುಲಸೀಪತ್ರಪತನಪ್ರಾಯಂ ವನ್ಯಂ ವರಾನನೇ ॥**

–ಬ್ರಹ್ಮವೈವರ್ತಪುರಾಣ, ಪ್ರಕೃತಿಖಂಡ (೨/೨೧/೪೦)

ತುಲಸಿಯ ಎಲೆಗಳು ಬೀಳುವಂತಹ ಕಾಡಿನ ಪ್ರದೇಶವು ಸಹ ಸರ್ವದೇವತೆಗಳಿಗೂ ಸಹ ಮುಖ್ಯ ಅಧಿಷ್ಠಾನವೆನ್ನಿಸಲಿ.

**ಯಸ್ಯಾ ದೇವ್ಯಾಸ್ತುಲಾ ನಾಸ್ತಿ ವಿಶ್ವೇಷು ನಿಖಿಲೇಷು ಚ ।**
**ತುಲಸೀ ತೇನ ವಿಖ್ಯಾತಾ ತಾಂ ಯಾಮಿ ಶರಣಂ ಪ್ರಿಯೇ ॥**

–ಬ್ರಹ್ಮವೈವರ್ತಪುರಾಣ (೧/೨೨/೨೪)

ಸಕಲ ಲೋಕಗಳಲ್ಲೂ ಸಾಟಿ ಎನ್ನಿಸುವ ಬೇರೊಂದು ವೃಕ್ಷವಿಲ್ಲವಾದ್ದರಿಂದ ತುಲಸಿಗೆ ತುಲಸಿ ಎಂದು ಹೆಸರಾಗಲಿ; ಅಂತಹ ತುಲಸಿಯನ್ನು ನಾನು ಶರಣುಹೊಂದುವೆನು.

★★★

## ತುಲಸಿಯ ಉತ್ಪತ್ತಿ

ತುಲಸಿಯ ಉತ್ಪತ್ತಿಯು ತುಂಬಾ ರೋಚಕವಾದುದು. ಸಮುದ್ರಮಥನದ ಕಥೆ ಪುರಾಣಗಳಲ್ಲಿ ಸುಪ್ರಸಿದ್ಧವಾದುದು. ಬಗೆಬಗೆಯ ಅಪೂರ್ವ ವಸ್ತುಗಳ ರಾಶಿ ಅದರಲ್ಲಿ ಹುಟ್ಟಿಬಂದಿತು. ಐರಾವತಾದಿ ಆನೆಗಳು, ಉಚ್ಚೈಃಶ್ರವಸ್ ಎಂಬ ಕುದುರೆ, ಪಾರಿಜಾತಾದಿ ವೃಕ್ಷಗಳು, ಕಾಣಿಸಿಕೊಂಡದ್ದು ಆ ಕಾಲದಲ್ಲಿಯೇ. ಅದೇಕೆ ! ಸಾಕ್ಷಾತ್ ಮಹಾಲಕ್ಷ್ಮಿಯೇ ಪ್ರಾದುರ್ಭವಿಸಿ ಬಂದದ್ದು ಸಹ ಅಮೃತಮಥನಕಾಲದಲ್ಲಿ. ಆ ಸಮಯದಲ್ಲಿಯೇ ತುಲಸಿಯು ಪ್ರಾದುರ್ಭವಿಸಿತು. ಧನ್ವಂತರಿರೂಪದ ಶ್ರೀಹರಿಯ ಆನಂದಾಶ್ರುವು ಅಮೃತ ಕಲಶದಲ್ಲಿ ಬಿದ್ದಾಗ ತುಲಸಿಯು ಪ್ರಾದುರ್ಭವಿಸಿದಳು. ಶ್ರೀಹರಿಯ ಆನಂದಾಶ್ರುವಿನಿಂದ ಉತ್ಪತ್ತಿಯಿಂದಾಗಿ ಲೋಕಕ್ಕೆ ಆನಂದ ನೀಡುವಂತಹ ಶ್ರೀಹರಿಯ ಪೂಜೆಗೆ ಸಾಧನವೆನ್ನಿಸುವ ಸುಯೋಗ. ಅಮೃತದಿಂದ ಪ್ರಾದುರ್ಭವಿಸಿದ್ದರಿಂದಾಗಿ ಸಕಲ ರೋಗಗಳ ಪರಿಹಾರದ ಅಸಾಧಾರಣ ಸಾಮರ್ಥ್ಯ, ಕೊನೆಗೆ ಶ್ರೀಹರಿಯ ಪ್ರಸಾದದ ಮೂಲಕವಾಗಿ ಮುಕ್ತಿಗೂ ಕಾರಣವಾಗುವ ಹಿರಿಮೆ. ಗಂಗೆ ವಿಷ್ಣುಪಾದೋದಕವಾಗಿ ಮಾನ್ಯವಾದರೆ, ತುಲಸಿ ವಿಷ್ಣುವಿನ ಆನಂದಾಶ್ರುವಿನ ಕಾರಣದಿಂದಾಗಿ ಮಾನ್ಯವಾದಳು. ಉತ್ಪತ್ತಿಯಲ್ಲೂ ಮಹತ್ತ್ವವಿದೆ ಎಂಬುದು "ಶುಚೀನಾಂ ಶ್ರೀಮತಾಂ ಗೇಹೇ ಯೋಗಭ್ರಷ್ಟೋಽಭಿಜಾಯತೇ" ಎಂಬ ಗೀತಾವಾಕ್ಯದಿಂದ ತಿಳಿಯುವುದು. ತುಲಸಿಯು ಅವತರಿಸಿದ್ದು ಸಮುದ್ರಮಥನ ಕಾರ್ಯದಂತಹ ಲೋಕೋತ್ತರ ಸಮಯದಲ್ಲಿ. ಅವತರಿಸಿದ ಸ್ಥಳ ಕ್ಷೀರಸಾಗರ. ಅದಕ್ಕೆ ನಿಮಿತ್ತವಾದದ್ದು ಭಗವಂತನಾದ ಶ್ರೀಹರಿಯ ಆನಂದಾಶ್ರು. ಹೀಗೆ ಹುಟ್ಟಿನಿಂದಲೂ ಸಹ ಸಕಲ ಬಗೆಯ ಹಿರಿಮೆಯನ್ನು ಪಡೆದ ಮಹಾತ್ಮ್ಯ ತುಲಸಿಯದು. ಹುಟ್ಟಿನಲ್ಲಿಯೂ ಸಹ ಶ್ರೀಹರಿಯ ಸ್ಮರಣೆ ಹಾಗೂ ಹಿರಿಮೆಯ ಅನುಸಂಧಾನ ಗಮನಕ್ಕೆ ಬರುವುದರಿಂದ ಇದಕ್ಕೆ ವಿಶೇಷ ಮಹತ್ತ್ವ ಎಂದು ತಿಳಿಯುವುದು.



**ಅಮೃತಸ್ಯೋದ್ಭವಂ ದೃಷ್ಟ್ವಾ ಕೃಪಯಾ ಮುದಿತೋ ಹರಿಃ ।**
**ಹರೇರಾನಂದಬಾಷ್ಪಂ ತು ಕಲಶೇ ನ್ಯಪತತ್ ತದಾ ॥** - ಪದ್ಮಪುರಾಣ

ಅಮೃತವು ಉದ್ಭವಿಸಿದ್ದನ್ನು ಕಂಡು ಕರುಣೆಯಿಂದ ಶ್ರೀಹರಿಯು ಮುದಹೊಂದಿದನು. ಆಗ ಅವನ ಆನಂದಬಾಷ್ಪವು ಕಲಶದಲ್ಲಿ ಬಿದ್ದಿತು.



**ತತ್ರೋತ್ಪನ್ನಾ ಚ ತುಲಸೀ ಶ್ಯಾಮಲಾ ಹರಿವಲ್ಲಭಾ ।**
**ಯದಾ ತು ಪುಂಡರೀಕಾಕ್ಷಃ ಸರ್ವೇಷಾಂ ಚ ದಿವೌಕಸಾಮ್ ॥**



ಕ್ಷೀರೋದಮಥನೋದ್ಭೂತಾನ್ ಕಲ್ಯಾದೀನ್ ವ್ಯಭಜನ್ ದದೌ ।
ತುಲಸೀಂ ಕೌಸ್ತುಭಂ ಲಕ್ಷ್ಮೀಂ ಸ್ವಯಮೇವ ಗೃಹೀತವಾನ್ ॥
ಶ್ರಿಯಂ ಚ ಕೌಸ್ತುಭಂ ರತ್ನಂ ಹರಿರ್ವಕ್ಷಸಿ ಸಂದಧೇ ।
ಆಪಾದಮೌಲಿಪರ್ಯಂತಂ ತುಲಸೀಮಾವಹಚ್ಛುಭಾಮ್ ॥ -ಪದ್ಮಪುರಾಣ

ಆಗ ಹರಿಗೆ ಪ್ರಿಯಳಾದ ತುಲಸಿಯು ಅಲ್ಲಿ ಉತ್ಪನ್ನಳಾದಳು. ಕ್ಷೀರಸಮುದ್ರದ ಮಥನಕಾಲದಲ್ಲಿ ಹುಟ್ಟಿದ ವಸ್ತುಗಳನ್ನು ಶ್ರೀಹರಿಯು ದೇವತೆಗಳಿಗೂ ಕಲಿ ಮೊದಲಾದ ಅಸುರರಿಗೂ ನೀಡಿದ; ಆದರೆ ತುಲಸಿ, ಕೌಸ್ತುಭಮಣಿ ಹಾಗೂ ಲಕ್ಷ್ಮಿ- ಈ ಮೂವರನ್ನು ಮಾತ್ರ ತಾನೇ ಸ್ವೀಕರಿಸಿದ. ಮಹಾಲಕ್ಷ್ಮಿ ಮತ್ತು ಕೌಸ್ತುಭಮಣಿಗಳು ಶ್ರೀಹರಿಯ ವಕ್ಷಸ್ಥಳದಲ್ಲಿ ನೆಲೆಸಿದವು. ತುಲಸಿಯನ್ನು ಶ್ರೀಹರಿಯು ತನ್ನ ಆಪಾದಮೌಲಿಪರ್ಯಂತ ಸರ್ವಾಂಗಗಳಲ್ಲಿ ನೆಲೆಗೊಳಿಸಿದ.

ತತ್ರೋತ್ಪನ್ನಾಂ ತಥಾ ಲಕ್ಷ್ಮೀಂ ತುಲಸೀಂ ಚ ದದುರ್ಹರೇಃ ।
ದೇವಾ ಬ್ರಹ್ಮಾದಯಸ್ತೇ ಹಿ ಜಗೃಹೇ ಭಗವಾನ್ ಹರಿಃ ॥
ತತೋಽತೀವ ಪ್ರಿಯಕರಾ ತುಲಸೀ ಜಗತಾಂ ಪತೇಃ ॥
ಸಾ ತು ದೇವಗಣೈಃ ಸರ್ವೈರ್ವಿಷ್ಣುವತ್ ಪೂಜ್ಯತೇ ಪ್ರಿಯಾ ।
ನಾರಾಯಣೋ ಜಗತ್ರಾತ್ರಾ ತುಲಸೀ ತಸ್ಯ ವಲ್ಲಭಾ ॥
- ಸ್ಕಂದಂ (೨/೪/೮/೩೬-೩೮)

ಅಲ್ಲಿ ಪ್ರಾದುರ್ಭವಿಸಿದ ಮಹಾಲಕ್ಷ್ಮಿಯನ್ನು ಬ್ರಹ್ಮಾದಿದೇವತೆಗಳು ಶ್ರೀಹರಿಗೆ ಸಮರ್ಪಿಸಿದರು; ಅವನು ಅವರನ್ನು ಸ್ವೀಕರಿಸಿದ. ಆದ್ದರಿಂದ ಜಗತ್ಪತಿಯಾದ ಶ್ರೀಹರಿಗೆ ತುಲಸಿಯು ಅತ್ಯಂತ ಪ್ರಿಯಕರಳು. ಶ್ರೀಹರಿಗೆ ಪ್ರಿಯಳಾದವಳು. ಅವಳು ಸಕಲ ದೇವವೃಂದ-ದಿಂದ ವಿಷ್ಣುವಿನಂತೆಯೇ ಪೂಜಿಸಲ್ಪಡುವಳು. ನಾರಾಯಣನು ಜಗದ್ರಕ್ಷಕ. ತುಲಸಿಯು ಅವನಿಗೆ ಪ್ರಿಯತಮ.



ಕಲ್ಹಾರಂ ಚಾಪಿ ಪತ್ರಂ ವಾ ಮಾಲತೀ ಚಂಪಕಾದಿಕಮ್ ।
ಕೈರವಂ ಮಲ್ಲಿಕಾಂ ಚಾಪಿ ಶತಪತ್ರೋತ್ಪಲಾದಿಕಮ್ ॥ - ಪದ್ಮಪುರಾಣ

ಕಮಲ, ಜಾಜಿ, ಮಲ್ಲಿಗೆ ಮೊದಲಾದ ಯಾವುದೇ ಪುಷ್ಪಗಳ ಪೂಜೆಯು ಸಹ ಶ್ರೀಹರಿಗೆ ಗ್ರಾಹ್ಯವೆನ್ನಿಸುವುದು ತುಲಸಿಯ ಸಂಪರ್ಕವಿದ್ದಾಗ ಮಾತ್ರ. ಸುವರ್ಣಪುಷ್ಪ, ರಜತಪುಷ್ಪ ರತ್ನನಿರ್ಮಿತಪುಷ್ಪ ಮುತ್ತಿನ ಹೂವುಗಳು ಮೊದಲಾಗಿ ಸಕಲವೂ ಸಹ ಶ್ರೀತುಲಸಿರಹಿತವಾದಾಗ ಶ್ರೀಹರಿಯು ಸ್ವೀಕರಿಸಲಾರನು. ಸಕಲ ಪುಷ್ಪಗಳಿಗಿಂತಲೂ ಪತ್ರಗಳಿಗಿಂತಲೂ ತುಲಸಿಯೇ ಮಿಗಿಲು.

ತ್ವತ್ಪತ್ರರಹಿತಂ ಯತ್ ತು ಪತ್ರಂ ವಾ ಪುಷ್ಪಮೇವ ವಾ।
ಸುವರ್ಣೇನ ಕೃತಂ ಪುಷ್ಪಂ ರಾಜತಂ ರತ್ನನಿರ್ಮಿತಮ್ ॥

ಮೌಕ್ತಿಕಂ ವಾಽಪಿ ಪೂಜಾಯಾಂ ಮಮಾನರ್ಹಂ ಭವೇತ್ ಸದಾ।
ಸರ್ವೇಷಾಮೇವ ಪುಷ್ಪಾಣಾಂ ಪತ್ರಾಣಾಂ ತ್ವದ್ದಲಂ ವರಮ್ ॥

ಮತ್ಪೂಜಾಯಾಂ ಮಹಾದೇವಿ ಪ್ರೀತೋಽಸ್ಮಿ ತವ ದರ್ಶನಾತ್।
ಶುಷ್ಕಂ ಪರ್ಯುಷಿತಂ ವಾಽಪಿ ಶುದ್ಧಂ ತ್ವದ್ದಲಮರ್ಚನೇ ॥

ದೇವೋ ವಾ ಮಾನುಷೋ ವಾಽಪಿ ಕಿನ್ನರೋ ವಾಽಪಿ ಸುಂದರಿ।

– ಪದ್ಮಪುರಾಣ

ತುಲಸಿಯು ಒಣಗಿದ್ದರೂ, ಹಳೆಯದಾಗಿದ್ದರೂ ಸಹ ಪೂಜೆಗೆ ಗ್ರಾಹ್ಯವೆನ್ನಿಸುವುದು. ದೇವತೆ, ಮನುಷ್ಯ, ಕಿನ್ನರ, ಮೊದಲಾದ ಯಾರೇ ಆಗಿದ್ದರೂ ತುಲಸಿಯನ್ನು ಗೌರವಿಸದಿದ್ದಲ್ಲಿ ಶ್ರೀಹರಿಗೆ ಶತ್ರು ಎನ್ನಿಸುವನು. ಹೀಗೆ ತುಲಸಿಗೆ ವರನೀಡಿ, ಅವಳನ್ನು ಗಾಢವಾಗಿ ಆಲಿಂಗಿಸಿಕೊಂಡು ಅಂತರ್ಧಾನ ಹೊಂದಿದನು.

ತ್ವಯಿ ಭಕ್ತಿವಿಹೀನಶ್ಚೇತ್ ಸ ಶತ್ರುರ್ಮಮ ಸರ್ವದಾ।
ಇತ್ಯುಕ್ತ್ವಾ ಪುಂಡರೀಕಾಕ್ಷಃ ಸರ್ವೇಷಾಂ ಮಧ್ಯವರ್ತಿನಾಮ್।
ತುಲಸೀಂ ಸಂಪರಿಷ್ವಜ್ಯ ತತ್ರೈವಾಂತರ್ದಧೇ ಹರಿಃ ॥

ತಸ್ಮಾತ್ ಸರ್ವಪ್ರಯತ್ನೇನ ತುಲಸೀಸೇವಯಾ ನರಃ।
ವಿಮುಕ್ತಃ ಸರ್ವಪಾಪೇಭ್ಯೋ ವಿಷ್ಣುಸಾಯುಜ್ಯಮಾಪ್ನುಯಾತ್ ॥

– ಪದ್ಮಪುರಾಣ (೧/೨೬-೨೮)

ಆದ್ದರಿಂದ ಸರ್ವಪ್ರಯತ್ನದಿಂದಲೂ ಮನುಷ್ಯನು ತುಲಸಿಯನ್ನು ಸೇವಿಸಲೇ ಬೇಕು. ಅದರಿಂದ ಸಕಲ ಪಾಪಗಳಿಂದ ಬಿಡುಗಡೆಹೊಂದಿ, ವಿಷ್ಣುವಿನ ಸಾಯುಜ್ಯವನ್ನು ಪಡೆಯುವನು.

ಪುರಾ ದುರ್ವಾಸಸಃ ಶಾಪಾತ್ ಗತೈಶ್ವರ್ಯಃ ಪುರಂದರಃ।
ಮಮಂಥ ಕ್ಷೀರಜಲಧಿಂ ಬ್ರಹ್ಮಾದ್ಯಾಃ ಸಸುರಾಸುರಾಃ ॥ – ಪದ್ಮಪುರಾಣ

ಹಿಂದೆ ದುರ್ವಾಸ ಮುನಿಯ ಶಾಪದಿಂದ ಇಂದ್ರ ಐಶ್ವರ್ಯ ಹೀನನಾದ. ಶ್ರೀಹರಿಯ ಆದೇಶದಂತೆ ಕ್ಷೀರಸಾಗರವನ್ನು ಮಥಿಸಿದ.

ಐರಾವತಃ ಕಲ್ಪತರುಃ ಚಂದ್ರಮಾಃ ಕಮಲಾಲಯಾ।
ಉಚ್ಚೈಶ್ರವಾಃ ಕೌಸ್ತುಭಶ್ಚ ತಥಾ ಧನ್ವಂತರಿಃ ಸ್ವಯಮ್ ॥

– ಪದ್ಮಪುರಾಣ (೪೪)

ಐರಾವತ, ಕಲ್ಪವೃಕ್ಷ, ಚಂದ್ರ, ಮಹಾಲಕ್ಷ್ಮಿ, ಉಚ್ಚೈಶ್ರವಸ್ಸು ಕೌಸ್ತುಭ ಅದರಂತೆ ಸ್ವತಃ ಧನ್ವಂತರೀರೂಪದ ಶ್ರೀಹರಿ ಅದರಿಂದ ಪ್ರಾದುರ್ಭೂತರಾದರು.

**ಕರಾಭ್ಯಾಂ ಕಲಶಂ ವಿಷ್ಣುಃ ಧಾರಯನ್ ಅಮೃತಂ ಪರಮ್ ।**
**ಹರೀತಕ್ಯಾದಯಶ್ಚಾನ್ಯದ್ರವ್ಯಾಣ್ಯೌಷಧಯಸ್ತಥಾ ॥**

– ಪದ್ಮಪುರಾಣ (೪೫ )

ಧನ್ವಂತರಿರೂಪದ ಶ್ರೀಹರಿಯು ಕೈಗಳಲ್ಲಿ ಅಮೃತವನ್ನು ಹಿಡಿದುಕೊಂಡು ಪ್ರಾದುರ್ಭವಿಸಿದ; ಲೋಕಕ್ಕೆ ಶ್ರೇಯಸ್ಸನ್ನು ನೀಡುವಂತಹ ಹರೀತಕೀ ಮೊದಲಾದ ದ್ರವ್ಯಗಳು, ಓಷಧಿಗಳು ಹುಟ್ಟಿದವು. ಆ ಬಳಿಕ ಧನ್ವಂತರಿರೂಪದಿಂದ ನೀಡಲ್ಪಟ್ಟ ಅಮೃತಕಲಶವನ್ನು ತನ್ನ ಕೈಯಲ್ಲಿ ಹಿಡಿದುಕೊಂಡು ಬಹಳವಾಗಿ ಸಂತೋಷಿಸಿದ.

**ಅಜಾಯಂತ ದ್ವಿಜಶ್ರೇಷ್ಠ ಲೋಕಶ್ರೇಯೋವಿಧಾಯಕಾಃ ।**
**ತತಃ ಪೀಯೂಷಕಲಶಮಜರಾಮರದಾಯಕಮ್ ॥**

**ಪ್ರಣಮ್ಯ ಶಿರಸಾ ವಿಷ್ಣುಂ ದಧೌ ಧನ್ವಂತರಿಃ ಸ್ವಯಮ್ ।**
**ಕರಾಭ್ಯಾಂ ಕಲಶಂ ವಿಷ್ಣುಂ ಧಾರಯನ್ನಮೃತಂ ಪರಮ್ ॥**

**ಅವೇಕ್ಷ್ಯ ಮನಸಾ ಸದ್ಯಃ ಪರಾಂ ನಿರ್ವೃತಿಮಾಪ ಹ ।**
**ತಸ್ಮಿನ್ ಪೀಯೂಷಕಲಶೇ ತದಾನಂದಾಶ್ರುಬಿಂದವಃ ॥**

**ನ್ಯಪತತ್ ತುಲಸೀ ಸದ್ಯಃ ಸಮಜಾಯತ ಮಂಗಲಮ್ ।**
**ಸರ್ವಲಕ್ಷಣಸಂಪನ್ನಾಂ ಸರ್ವಾಭರಣಭೂಷಿತಾಮ್ ॥**

**ಹರೇರ್ಲಕ್ಷ್ಮೀಂ ದದುರ್ದೇವಾಃ ತುಲಸೀಮಮೃತೋದ್ಭವಾಮ್ ।**
**ತುಲಸೀಮಂಕಮಾರೋಪ್ಯ ಪ್ರಸನ್ನವದನೋ ಹರಿಃ ।**
**ಪುನೀಹಿ ಲೋಕಾನಖಿಲಾನಿತಿ ತಸ್ಯೈ ವರಂ ದದೌ ॥**

–ಪದ್ಮಪುರಾಣ (೧೫/೪೬–೫೦)

ಆಗ ಆ ಅಮೃತಕಲಶದಲ್ಲಿ ಅವನ ಆನಂದಾಶ್ರುಗಳ ಬಿಂದುಗಳು ಸುರಿದವು. ಕೂಡಲೇ ಮಂಗಲಕರವಾದ ತುಲಸಿಯು ಪ್ರಾದುರ್ಭವಿಸಿದಳು. ಸರ್ವಲಕ್ಷಣಸಂಪನ್ನೆಯಾದ ಸರ್ವಾಭರಣಭೂಷಿತೆಯಾದ ಲಕ್ಷ್ಮಿಯನ್ನು ತುಲಸಿಯನ್ನು ದೇವತೆಗಳು ಶ್ರೀಹರಿಗೆ ಸಮರ್ಪಿಸಿದರು. ಪ್ರಸನ್ನವದನನಾದ ಶ್ರೀಹರಿಯು ತುಲಸಿಯನ್ನು ತೊಡೆಯ ಮೇಲೆ ಕೂಡಿಸಿಕೊಂಡು ಸಕಲ ಲೋಕಗಳನ್ನು ಪಾವನಗೊಳಿಸು ಎಂಬ ವರವನ್ನು ಅವಳಿಗೆ ನೀಡಿದ.

ಪುರಾ ದುರ್ವಾಸಸಃ ಶಾಪಾದ್ಗತೈಶ್ವರ್ಯೇ ಪುರಂದರೇ ।
ಮಮಂಥುಃ ಕ್ಷೀರಜಲಧಿಂ ಬ್ರಹ್ಮಾದ್ಯಾಃ ಸಸುರಾಸುರಾಃ ॥
ಐರಾವತಃ ಕಲ್ಪತರುಶ್ಚಂದ್ರಮಾಃ ಕಮಲಾ ತಥಾ ।
ಉಚ್ಚೈಃಶ್ರವಾಃ ಕೌಸ್ತುಭಶ್ಚ ತಥಾ ಧನ್ವಂತರಿರ್ಹರಿಃ ॥
ಹರೀತಕ್ಯಾದಯಶ್ಚಾಪಿ ದಿವ್ಯಾ ಔಷಧಯಸ್ತಥಾ ।
ಅಜಾಯಂತ ದ್ವಿಜಶ್ರೇಷ್ಠ ಲೋಕಶ್ರೇಯೋವಿಧಾಯಕಾಃ ॥
ತತಃ ಪೀಯೂಷಕಲಶಮಜರಾಮರದಾಯಕಮ್ ।
ಕರಾಭ್ಯಾಂ ಕಲಶಂ ವಿಷ್ಣುರ್ಧಾರಯನ್ ಸುತಲಂ ಪರಮ್ ॥
ಅವೇಕ್ಷ್ಯ ಮನಸಾ ಸದ್ಯಃ ಪರಾಂ ನಿರ್ವೃತಿಮಾಪ ಹ ॥
ತಸ್ಮಿನ್ ಪೀಯೂಷಕಲಶ ಆನಂದಾಸ್ರೋದಬಿಂದವಃ ।
ವ್ಯಪತಂಸ್ತುಲಸೀ ಸದ್ಯಃ ಸಮಜಾಯತ ಮಂಗಲಾ ॥
ಸರ್ವಲಕ್ಷಣಸಂಪನ್ನಾ ಸರ್ವಾಭರಣಭೂಷಿತಾ ॥

– ಸ್ಕಂದಪುರಾಣ (೨/೪/೮/೩೦-೩೫)

ಹಿಂದೆ ದುರ್ವಾಸರ ಶಾಪದಿಂದ ದೇವೇಂದ್ರನು ಐಶ್ವರ್ಯಭ್ರಷ್ಟನಾದಾಗ ಬ್ರಹ್ಮಾದಿಗಳು ಸುರಾಸುರರೊಂದಿಗೆ ಕೂಡಿ ಕ್ಷೀರಸಾಗರವನ್ನು ಮಥನ ಮಾಡಿದರು. ಲೋಕಗಳಿಗೆ ಶ್ರೇಯಸ್ಸನ್ನು ನೀಡುವಂತಹ ಐರಾವತ, ಕಲ್ಪವೃಕ್ಷ, ಚಂದ್ರ ಹಾಗೆಯೇ ಮಹಾಲಕ್ಷ್ಮೀ ಉಚ್ಚೈಶ್ರವಸ್, ಕೌಸ್ತುಭಮಣಿ ಹಾಗೂ ಧನ್ವಂತರಿರೂಪದ ಶ್ರೀಹರಿ, ಹರೀತಕೀ ಮೊದಲಾದ ದಿವ್ಯೌಷಧಿಗಳು ಅದರಿಂದ ಪ್ರಾದುರ್ಭವಿಸಿದರು. ಆ ಬಳಿಕ ಮುಪ್ಪು, ಸಾವುಗಳನ್ನು ನೀಗಿಸುವಂತಹ ಅಮೃತಕಲಶವನ್ನು ಕೈಯಲ್ಲಿ ಹಿಡಿದುಕೊಂಡು ಧನ್ವಂತರಿರೂಪದ ಶ್ರೀಹರಿ ಪ್ರಾದುರ್ಭವಿಸಿದ. ತನ್ನ ಭಕ್ತವೃಂದವನ್ನು ನೋಡಿ ಶ್ರೀಹರಿ ಪರಮಾನಂದಭರಿತನಾದ. ಆಗ ಅವನ ಆನಂದಾಶ್ರುಗಳ ಬಿಂದುಗಳು ಆ ಅಮೃತಕಲಶದಲ್ಲಿ ಬಿದ್ದವು. ಆ ಕೂಡಲೇ ಸರ್ವಲಕ್ಷಣಗಳಿಂದ ಕೂಡಿದ, ಸರ್ವಾಭರಣಗಳಿಂದ ಭೂಷಿತಳಾದ, ಮಂಗಲಕರೆಯಾದ ತುಲಸಿಯು ಪ್ರಾದುರ್ಭವಿಸಿದಳು.

★★★

## ತುಲಸಿಯ ಮಹತ್ತ್ವ

ತುಲಸಿಯು ಶ್ರೀಹರಿಗೆ ಅತ್ಯಂತ ಪ್ರಿಯಳು. ತುಲಸಿಯನ್ನು ಪೂಜಿಸುವವರಿಗೆ ಮುಕ್ತಿಮಾರ್ಗವು ಗೋಚರಿಸುವುದು. ತುಲಸಿಯ ಅನುಗ್ರಹಕ್ಕೆ ಪಾತ್ರನಾಗುವವನು ಜಗತ್ತಿನಲ್ಲಿ ಶ್ಲಾಘ್ಯನೆನ್ನಿಸುವನು. ನೆಲ್ಲಿ ಹಾಗೂ ತುಲಸಿಯರ ಮಾಹಾತ್ಮ್ಯವನ್ನು ಶ್ರೀಹರಿಯ

ಹಿರಿಮೆಯನ್ನು ವರ್ಣಿಸಲು ಚತುರ್ಮುಖಬ್ರಹ್ಮದೇವರು ಸಹ ಪೂರ್ಣವಾಗಿ ಸಮರ್ಥರಲ್ಲ ಎಂಬ ವಿಶೇಷ ಹಿರಿಮೆ ತುಲಸಿಗೆ ಇದೆ. ಒಂದೊಂದು ವಸ್ತುವಿಗೆ, ತೀರ್ಥಕ್ಕೆ, ಕ್ಷೇತ್ರಕ್ಕೆ ಒಂದೊಂದು ಬಗೆಯ ಮಹತ್ತ್ವವಿದ್ದರೆ, ತುಲಸಿಗೆ ಸಕಲ ಬಗೆಯ ಮಹತ್ತ್ವವೂ ಇರುವುದು ವಿಶೇಷ. ದರ್ಶನ, ಸ್ಪರ್ಶನ, ನಮನ, ಸೇಚನ, ರೋಪಣ, ಮೊದಲಾಗಿ ಸಕಲ ಕಾರಣಗಳಿಂದಲೂ ಸಹ ತುಲಸಿಯು ಸರ್ವಶ್ರೇಷ್ಠವಾದಂತಹ ಸ್ಥಾನವನ್ನು ಪಡೆದಿರುವುದು ಅತ್ಯಂತ ಮಹತ್ತ್ವಪೂರ್ಣವಾದ ಅಂಶ.

ಜಗದ್ಧಾತ್ರಿ ನಮಸ್ತುಭ್ಯಂ ವಿಷ್ಣೋಶ್ಚ ಪ್ರಿಯವಲ್ಲಭೇ ।
ಯೇ ಚ ಬ್ರಹ್ಮಾದಯೋ ದೇವಾಃ ಸೃಷ್ಟಿಸ್ಥಿತ್ಯಂತಕಾರಿಣಃ ॥

ತ್ವನ್ನಾಮಯಾಜ್ಯಂಭಣಮಿದಂ ಜಗತ್ ಸ್ಥಾವರಜಂಗಮಮ್ ।
ತ್ವತ್ಪೂಜಾಸಕ್ತಮನಸಾಂ ನಿಕಟೇ ಮುಕ್ತಿಪದ್ಧತಿಃ ॥

ತ್ವತ್ಪಾದಪೂಜಾಯುಕ್ತಾನಾಂ ದುರ್ಲಭಂ ಕಿಂ ಸುರೇಶ್ವರಿ ।
ಯಸ್ಮೈ ಪ್ರಸನ್ನಾ ತ್ವಂ ದೇವಿ ಸ ಶ್ಲಾಘ್ಯೋ ಜಗತೀತಲೇ ॥

– ಪದ್ಮಪುರಾಣ, ಸೂತ್ರಸಂಹಿತೆ (೮/೪೧-೪೩)

ಜಗತ್ತನ್ನು ಧರಿಸಿರುವ ವಿಷ್ಣುವಿಗೆ ಪ್ರಿಯವಲ್ಲಭೆಯಾದ ತುಲಸೀ ನಿನಗೆ ನಮಸ್ಕಾರ. ಜಗತ್ತಿನ ಸೃಷ್ಟಿ ಸ್ಥಿತಿ, ಲಯಗಳನ್ನು ಮಾಡುವಂತಹ ಬ್ರಹ್ಮಾದಿದೇವತೆಗಳು ನಿನ್ನ ಅನುಗ್ರಹವನ್ನು ಬಯಸುವವರು. ಸ್ಥಾವರ ಜಂಗಮಾತ್ಮಕವಾದ ಈ ಜಗತ್ತು ನಿನ್ನ ಇಚ್ಛೆಯನ್ನು ಆಧರಿಸಿದೆ. ನಿನ್ನ ಪಾದಪೂಜೆಯಲ್ಲಿ ನಿರತರಾದ ಜನರಿಗೆ ಮುಕ್ತಿಯ ಹಾದಿ ಸನಿಹದಲ್ಲೇ ಇರುವುದು. ಅಮ್ಮ! ನಿನ್ನ ಪಾದಪೂಜೆಯಲ್ಲಿ ತೊಡಗಿದವರಿಗೆ ಯಾವುದು ತಾನೇ ದುರ್ಲಭ. ನೀನು ಒಲಿದವನು ಜಗತ್ತಿನಲ್ಲಿಯೇ ಮಾನ್ಯನೆನಿಸಿಬಿಡುವನು.

ಸರ್ವೇಭ್ಯಃ ಪತ್ರಪುಷ್ಪೇಭ್ಯಃ ಸತ್ತಮಾ ತುಲಸೀ ಶಿವಾ ।
ಸರ್ವಕಾಮಪ್ರದಾ ಶುದ್ಧಾ ವೈಷ್ಣವೀ ವಿಷ್ಣುಸುಪ್ರಿಯಾ ॥

ಭಕ್ತಿಮುಕ್ತಿಪ್ರದಾ ಮುಖ್ಯಾ ಸರ್ವಲೋಕಪರಾ ಶುಭಾ ।
ತುಲಸೀಪತ್ರಪುಷ್ಪಂ ಚ ಸರ್ವಧರ್ಮಪ್ರತಿಷ್ಠಿತಮ್ ॥

ಯಥಾ ವಿಷ್ಣೋಃ ಪ್ರಿಯಾ ಲಕ್ಷ್ಮೀರ್ಯಥಾಽಹಂ ಶಿವ ಏವ ಚ ।
ತಥೇಯಂ ತುಲಸೀ ದೇವೀ ಚತುರ್ಥೋ ನೋಪಪದ್ಯತೇ ।
ತುಲಸೀ ಪತ್ರಮೇಕಂ ತು ಶತಹೇಮಫಲಪ್ರದಮ್ ॥

– ಪದ್ಮಪುರಾಣ (೫/೫೮/೧೦೬-೧೧೬)

ಸಕಲ ಪತ್ರಗಳಿಗಿಂತಲೂ, ಪುಷ್ಪಗಳಿಗಿಂತಲೂ ತುಲಸಿಯು ಶ್ರೇಷ್ಠ, ಮಂಗಳಕರ, ಶ್ರೀವಿಷ್ಣುವಿಗೆ ಪ್ರಿಯಳಾದ ತುಲಸಿಯು ಸಕಲ ಬಯಕೆಗಳನ್ನು ಸಹ ಈಡೇರಿಸಿಕೊಡುವಳು. ಭಕ್ತಿ-ಮುಕ್ತಿಯನ್ನು ಸಹ ನೀಡುವಳು. ಸಕಲ ಲೋಕಗಳಲ್ಲೂ ಮೇಲೆನ್ನಿಸಿದವಳು. ತುಲಸಿಯ ಎಲೆಗಳಲ್ಲಿ ಸಕಲ ಧರ್ಮಗಳೂ ನೆಲೆಗೊಂಡಿವೆ. ವಿಷ್ಣುವಿಗೆ ಲಕ್ಷ್ಮಿಯು ಹೇಗೆ ಪ್ರಿಯಳೋ ಹಾಗೆ ತುಲಸಿಯು ಪ್ರಿಯಳು. ತುಲಸಿಯ ಒಂದು ಎಲೆಯು ಸಹ ನೂರು ಚಿನ್ನದ ಹೂವುಗಳ ಸಮರ್ಪಣೆಯ ಫಲವನ್ನು ನೀಡುವುದು.

**ಯಥಾ ಗಂಗಾ ಪವಿತ್ರಾಂಗೀ ಸುರಲೋಕೇ ವಿಮೋಕ್ಷದಾ ।**
**ಯಥಾ ಭಾಗೀರಥೀ ಪುಣ್ಯಾ ತಥೇಯಂ ತುಲಸೀ ಶಿವಾ ॥**

– ಪದ್ಮಪುರಾಣ (೫/೫೮/೧೧೮)

**ತ್ರೈಲೋಕ್ಯವ್ಯಾಪಿನೀ ಗಂಗಾ ಯಥಾ ಶಾಸ್ತ್ರೇಷು ಗೀಯತೇ ।**
**ತಥೈವ ತುಲಸೀ ದೇವೀ ದೃಶ್ಯತೇ ಸಚರಾಚರೇ ॥** – ಪದ್ಮಪುರಾಣ (೫/೫೯/೮)

**ಲಕ್ಷ್ಮೀಃ ಸರಸ್ವತೀ ಗಂಗಾ ತುಲಸೀ ಲೋಕಪಾವನೀ ।**
**ಏತಾ ನಾರಾಯಣಸ್ಯೈವ ಚತಸ್ರಶ್ಚ ಪ್ರಿಯಾ ಇತಿ ॥**

– ಬ್ರಹ್ಮವೈವರ್ತಪುರಾಣ (೨/೧೨/೧)

**ತುಲಸೀ ಚ ಜಗತ್ಪೂಜ್ಯಾ ಪೂತಾ ನಾರಾಯಣಪ್ರಿಯಾ ।**

– ಬ್ರಹ್ಮವೈವರ್ತಪುರಾಣ (೨/೨೨/೧)

**ಲಕ್ಷ್ಮೀಃ ಸರಸ್ವತೀ ಗಂಗಾ ತುಲಸೀ ಚಾಪಿ ನಾರದ ।**
**ಹರೇಃ ಪ್ರಿಯಾಶ್ಚತಸ್ರಶ್ಚ ಬಭೂವುರೀಶ್ವರಸ್ಯ ಚ ॥**

– ಬ್ರಹ್ಮವೈವರ್ತಪುರಾಣ (೨/೨೧/೧೦೨)

ಗಂಗೆಯು ಹೇಗೆ ಪವಿತ್ರಾಂಗಿಯಾಗಿರುವಳೋ ಹಾಗೆಯೇ ತುಲಸಿಯು ಮಂಗಳಕರೆಯಾಗಿರುವಳು. ಮೂರುಲೋಕಗಳನ್ನು ವ್ಯಾಪಿಸಿರುವ ಗಂಗೆಯು ಶಾಸ್ತ್ರಗಳಲ್ಲಿ ಕೊಂಡಾಡಲ್ಪಟ್ಟಿರುವಂತೆ ತುಲಸಿಯು ಕೊಂಡಾಡಲ್ಪಟ್ಟಿರುವಳು. ಲಕ್ಷ್ಮಿ, ಸರಸ್ವತಿ, ಗಂಗಾ ಹಾಗೂ ತುಲಸಿ ಈ ನಾಲ್ವರು ಶ್ರೀಹರಿಗೆ ಅತ್ಯಂತ ಪ್ರಿಯರು. ಮಹಾಲಕ್ಷ್ಮಿಯು ವಿಷ್ಣುಪತ್ನಿ ಸರಸ್ವತಿಯು ಶ್ರೀವಿಷ್ಣುವನ್ನು ಕೊಂಡಾಡುವ ಶಾಸ್ತ್ರಗಳ ಅಭಿಮಾನಿದೇವತೆ, ಗಂಗೆಯು ವಿಷ್ಣುಪಾದೋದಕ, ತುಲಸಿಯು ಅವನ ಆನಂದಾಶ್ರುವಿನಿಂದ ಜನಿಸಿದವಳು.

**ದರ್ಶನಂ ನರ್ಮದಾಯಾಸ್ತು ಗಂಗಾಸ್ನಾನಂ ವಿಶಾಂವರ ।**
**ತುಲಸೀದಲಸಂಸ್ಪರ್ಶಃ ಸಮಮೇತತ್ ತ್ರಯಂ ಸ್ಮೃತಮ್ ॥**

– ಪದ್ಮಪುರಾಣ (೬/೨೪೪/೫)

ನರ್ಮದಾ ನದಿಯ ದರ್ಶನ, ಗಂಗೆಯಲ್ಲಿ ಸ್ನಾನ ಹಾಗೂ ತುಲಸೀದಳಗಳ ಸ್ಪರ್ಶನ ಈ ಮೂರೂ ಸಹ ಸಮಾನ ಎಂಬುದಾಗಿ ಸ್ಮೃತಿಗಳಲ್ಲಿ ಉಕ್ತವಾಗಿದೆ.

**ತುಲಸೀನಾಮಮಾತ್ರೇಣ ದೇವಾ ಯಚ್ಛಂತಿ ವಾಂಛಿತಮ್ ।**
**ಗರ್ಹ್ಯಾಣಾಮಪಿ ದೇವೇಶೋ ಮುಕ್ತಿಂ ಯಚ್ಛತಿ ದೇಹಿನಾಮ್ ॥**

– ಪದ್ಮಪುರಾಣ (೫/೫೯/೩೭)

ತುಲಸಿ ಎಂಬ ಹೆಸರಿನಿಂದಲೇ ದೇವತೆಗಳು ಪ್ರೀತರಾಗಿ ವಾಂಛಿತವನ್ನು ಪೂರೈಸುವರು. ಲೋಕದಲ್ಲಿ ನಿಂದಿತರಾದ ಜನರು ಸಹ ತುಲಸಿಯ ಆರಾಧನೆಯಿಂದ ಮುಕ್ತಿಯನ್ನು ಪಡೆಯುವರು.

**ಯತ್ರೈಕಸ್ತುಲಸೀವೃಕ್ಷಸ್ತಿಷ್ಠತಿ ದ್ವಿಜಸತ್ತಮ ।**
**ತತ್ರೈವ ತ್ರಿದಶಾಃ ಸರ್ವೇ ಬ್ರಹ್ಮವಿಷ್ಣುಶಿವಾದಯಃ ॥**

– ಪದ್ಮಪುರಾಣ, ಕ್ರಿಯಾಯೋಗಸಾರಖಂಡ

ಒಂದೇ ಒಂದು ತುಲಸೀವೃಕ್ಷವು ಇರುವ ಸ್ಥಳದಲ್ಲೂ ಸಹ ಬ್ರಹ್ಮ, ವಿಷ್ಣು ಶಿವ ಮೊದಲಾದ ಸಕಲ ದೇವತೆಗಳು ನೆಲೆಸಿಬಿಡುವರು.

**ಪುಷ್ಕರಾದ್ಯಾನಿ ತೀರ್ಥಾನಿ ಗಂಗಾದ್ಯಾಃ ಸರಿತಸ್ತಥಾ ।**
**ವಾಸುದೇವಾದಯೋ ದೇವಾ ವಸಂತಿ ತುಲಸೀವನೇ[1] ॥**

– ಪದ್ಮಪುರಾಣ (ಸೂತ್ರಸಂಹಿತೆ) (೧೫/೩೫)

ಪುಷ್ಕರ ಮೊದಲಾದ ತೀರ್ಥಗಳು, ಹಾಗೆಯೇ ಗಂಗಾ ಮೊದಲಾದ ನದಿಗಳು, ವಾಸುದೇವ ಮೊದಲಾದ ದೇವತೆಗಳು ತುಲಸೀವನದಲ್ಲಿ ನೆಲೆಸಿರುವರು.

★★★

## ತುಲಸಿಯನ್ನು ಸೇವಿಸುವ ಅನೇಕ ಬಗೆಗಳು

ಕೆಲವು ಪದಾರ್ಥಗಳು ಫಲ ನೀಡಲು ಅವುಗಳಿಗೆ ನಿರ್ದಿಷ್ಟವಾದ ಸೇವೆಯು ವಿಹಿತ–ವಾಗಿರುತ್ತದೆ. ಕೆಲವಕ್ಕೆ ದರ್ಶನವು ವಿಹಿತವಾದರೆ, ಕೆಲವಕ್ಕೆ ಸ್ಪರ್ಶನವು ವಿಹಿತ. ಚಂದ್ರನ ದರ್ಶನ ದರ್ಶನಕ್ಕೆ ನಿದರ್ಶನ. ಜಲದ ಸ್ಪರ್ಶನ, ಅಗ್ನಿಯ ಸ್ಪರ್ಶನ ಸ್ಪರ್ಶನಕ್ಕೆ ನಿದರ್ಶನ. ಮತ್ತೆ ಕೆಲವು ಸ್ನಾನ, ಪಾನ, ಮೊದಲಾದವುಗಳಿಗೆ ವಿಹಿತ. ಕೆಲವನ್ನು ಬೆಳೆಸುವುದರಲ್ಲಿ

೨ ತುಲಸೀದಲೇ (ಪಾ.) : ಈ ಪಾಠದಂತೆ ಆ ದೇವತೆಗಳೆಲ್ಲರೂ ತುಲಸೀದಲದಲ್ಲಿ ನೆಲೆಸಿರುವರು ಎಂದಾಗುವುದು.

ಪುಣ್ಯವಿದ್ದರೆ, ಕೆಲವನ್ನು ಭಕ್ಷಿಸುವುದರಲ್ಲಿ ಫಲವಿದೆ. ಕೆಲವದರ ಧ್ಯಾನವೂ ತಾರಕ. ಮತ್ತೆ ಕೆಲವಕ್ಕೆ ಕಾಲವೂ ವಿಹಿತ. ನಿಷಿದ್ಧ ಕಾಲದಲ್ಲಿ ಮಾಡುವ ಸ್ಮರಣೆ ಸೂಕ್ತ ಫಲ ನೀಡದು. ಆದರೆ, ತುಲಸಿಯ ವಿಷಯ ಹಾಗಲ್ಲ. ಪೂಜೆ, ಸ್ಮರಣೆ, ಕೀರ್ತನೆ, ಧ್ಯಾನ, ರೋಪಣ, ಧಾರಣ, ಮೊದಲಾಗಿ ಯಾವುದೇ ಬಗೆಯಲ್ಲಿ ಸೇವಿಸಿದರೂ ಸಹ ತುಲಸಿಯು ವಿಶೇಷ ಫಲ ನೀಡುವಂತಹುದು. ಅಂತಹ ಫಲವೂ ಸಹ ಸಾಮಾನ್ಯವಾದ ಫಲವಾಗಿರದೆ, ಸಕಲ ಪಾಪಗಳ ನಾಶ ಅಕ್ಷಯ ಪುಣ್ಯಗಳ ಪ್ರಾಪ್ತಿ ಬಹಳ ಮುಖ್ಯವಾಗಿ ಶ್ರೀಹರಿಯ ಒಲುಮೆ ಮೊದಲಾದ ಅತ್ಯಂತ ಶ್ರೇಷ್ಠವಾದ ಫಲವೇ ಆಗಿರುವುದು ಎಂಬುದು ಇನ್ನೊಂದು ರೀತಿಯ ವಿಶೇಷ.

**ಪೂಜನೇ ಕೀರ್ತನೇ ಧ್ಯಾನೇ ರೋಪಣೇ ಧಾರಣೇ ಕಲೌ ।**
**ತುಲಸೀ ದಹತೇ ಪಾಪಂ ಸ್ವರ್ಗಂ ಮೋಕ್ಷಂ ದದಾತಿ ಚ ॥**

– ಪದ್ಮಪುರಾಣ (ಸೃಷ್ಟಿಖಂಡ – ೫/೫೮/೧೩೧)

ಪೂಜಿಸುವುದು, ಕೀರ್ತಿಸುವುದು, ಧ್ಯಾನಿಸುವುದು, ಬೆಳೆಸುವುದು, ಧರಿಸುವುದು, ಇದರಿಂದ ತುಲಸಿಯು ಪಾಪವನ್ನು ಸುಟ್ಟುಹಾಕುವಳು; ಸ್ವರ್ಗವನ್ನು ಹಾಗೂ ಮೋಕ್ಷವನ್ನು ನೀಡುವಳು.

**ಸ್ನಾನೇ ದಾನೇ ತಥಾ ಧ್ಯಾನೇ ಪ್ರಾಶನೇ ಕೇಶವಾರ್ಚನೇ ।**
**ತುಲಸೀ ದಹತೇ ಪಾಪಂ ಕೀರ್ತನೇ ರೋಪಣೇ ಕಲೌ ॥**

– ಪದ್ಮಪುರಾಣ (ಸೃಷ್ಟಿಖಂಡ – ೫/೫೬/೧೧)

ಕಲಿಯುಗದಲ್ಲಿ – ಸ್ನಾನ, ದಾನ, ಧ್ಯಾನ, ಪ್ರಾಶನ, ವಿಷ್ಣುಪೂಜೆ, ಕೀರ್ತನ, ರೋಪಣ – ಇವುಗಳಿಂದ ತುಲಸಿಯು ಪಾಪವನ್ನು ಭಸ್ಮಮಾಡುವಳು.

**ರೋಪಣಾತ್ ಪಾಲನಾತ್ ಸೇಕಾದ್ದರ್ಶನಾತ್ ಸ್ಪರ್ಶನಾನ್ನೃಣಾಮ್ ।**
**ತುಲಸೀ ದಹತೇ ಪಾಪಂ ವಾಙ್ಮನಃಕಾಯಸಂಚಿತಮ್ ॥**

– ಸ್ಕಂದಪುರಾಣ (೨/೪/೨೩/೧೨), ಪದ್ಮ (೬/೧೦೭/೧೨), (೬/೨೪೪/೬) ಇತ್ಯಾದಿ

ನೆಡುವುದು, ಪಾಲಿಸುವುದು, ನೀರೆರೆಯುವುದು, ನೋಡುವುದು, ಮುಟ್ಟುವುದು, ಇವುಗಳಿಂದ ತುಲಸಿಯು ಮಾತು, ಮನಸ್ಸು ಹಾಗೂ ದೇಹಗಳಿಂದ ಮಾಡಿದ ಪಾಪಗಳನ್ನು ಸುಟ್ಟುಹಾಕುವಳು.

**ರೋಪಣಂ ಪಾಲನಂ ಸೇವಾ ದರ್ಶನಂ ಸ್ಪರ್ಶನಂ ತು ಯಃ ।**
**ಕುರ್ಯಾತ್ ತಸ್ಯ ಪ್ರನಷ್ಟಂ ಸ್ಯಾತ್ ಸರ್ವಪಾಪಂ ದ್ವಿಜೋತ್ತಮ ॥**

– ಪದ್ಮಪುರಾಣ, ಬ್ರಹ್ಮಖಂಡ (೩/೨೨/೪)

ರೋಪಣ, ಪಾಲನ, ಸೇವನ, ದರ್ಶನ ಹಾಗೂ ಸ್ಪರ್ಶನ – ಇವುಗಳನ್ನು ಮಾಡುವವನ ಎಲ್ಲ ಪಾಪಗಳೂ ಸಂಪೂರ್ಣವಾಗಿ ನಾಶಹೊಂದುವವು.

**ಶ್ರಾದ್ಧಂ ದಾನಂ ತಪೋ ಹೋಮಃ ಸಂಧ್ಯೌಪಾಸನಪೂಜನೇ ।**
**ಪುರಾಣಪಠನಂ ಚಾಪಿ ತುಲಸೀಸನ್ನಿಧೌ ಚರೇತ್ ॥**

– ಬೃಹದ್ಧರ್ಮಪುರಾಣ (೧/೮/೫೪)

**ಇತಿ ಧ್ಯಾತ್ವಾ ಚ ಸಂಪೂಜ್ಯ ಸ್ತುತ್ವಾ ಚ ಪ್ರಣಮೇದ್ಬುಧಃ ।**

– ಬ್ರಹ್ಮವೈವರ್ತಪುರಾಣ (೨/೨೨/೪೪)

ತುಲಸಿಯ ಸನ್ನಿಧಾನದಲ್ಲಿ ಶ್ರಾದ್ಧ, ದಾನ, ತಪಸ್ಸು, ಹೋಮ, ಸಂಧ್ಯಾವಂದನೆ, ಔಪಾಸನ, ಪೂಜೆ, ಪುರಾಣಪಠಣ – ಇವುಗಳನ್ನು ಆಚರಿಸಬೇಕು.

**ಯೋ ನರಸ್ತುಲಸೀಸಸ್ಯಂ ಸಂಸ್ಥಾಪ್ಯಾಪಿ ಪ್ರವರ್ಧತೇ ।**
**ಸ ಸಪ್ತಕುಲಸಂಯುಕ್ತೋ ವಿಷ್ಣುಸಾಯುಜ್ಯಮಾಪ್ನುಯಾತ್ ॥**

– ಪದ್ಮಪುರಾಣ-೭

ಯಾವ ಮನುಷ್ಯನು ತುಲಸೀಸಸ್ಯವನ್ನು ನೆಟ್ಟು ಬೆಳೆಸುವನೋ ಅವನು ಏಳುಕುಲದವರೊಂದಿಗೆ ಕೂಡಿಕೊಂಡು ವಿಷ್ಣುಸಾಯುಜ್ಯವನ್ನು ಪಡೆಯುವನು.

***

## ತುಲಸೀದಳದ ಮಹಿಮೆ

ಭಗವಂತನಿಗೆ ವಿಹಿತವಾದ ಷೋಡಶೋಪಚಾರ ಪೂಜೆಗೆ ಅಗತ್ಯವಾದ ದ್ರವ್ಯಗಳಲ್ಲಿ ತುಲಸಿಗೆ ಅಗ್ರಸ್ಥಾನ. ಅರ್ಘ್ಯ, ಪಾದ್ಯ ಮೊದಲಾದ ಸಕಲ ಉಪಚಾರಗಳನ್ನು ಸಹ ತುಲಸೀಸಮೇತವಾಗಿಯೇ ಸಮರ್ಪಿಸಬೇಕು ಎಂಬುದು ಶಾಸ್ತ್ರಗಳ ವಿಧಿ. ಬೇರೆ ಯಾವುದೇ ದ್ರವ್ಯವು ಅಲಭ್ಯವೆನ್ನಿಸಿದಾಗಲೂ ತುಲಸಿಯು ಅವೆಲ್ಲಕ್ಕೂ ಪ್ರತಿನಿಧಿ ಎನ್ನಿಸಿ ಶ್ರೀಹರಿಗೆ ಪ್ರಿಯವೆನ್ನಿಸುವುದು. ಆದರೆ ಸಕಲ ಸಾಧನಗಳೂ ಸಹ ಸಂಪೂರ್ಣ ಲಭ್ಯವಿದ್ದಾಗಲೂ ತುಲಸಿಯು ಮಾತ್ರ ಇಲ್ಲವಾದಲ್ಲಿ ಅವು ಸಾರ್ಥಕಪೂಜೆಗೆ ಕಾರಣವಾಗವು. ಇಂತಹ ಅಸಾಧಾರಣವಾದ ಹಿರಿಮೆ ಬೇರಾವ ಪೂಜಾದ್ರವ್ಯಕ್ಕೂ ಇಲ್ಲ ಎಂಬಲ್ಲಿ ತುಲಸಿಯ ಮಹತ್ತ್ವವು ಅಡಗಿದೆ. ಇತರ ವೃಕ್ಷಗಳಿಗೆ ಅಥವಾ ಸಸ್ಯಗಳಿಗೆ ಸಂಬಂಧಿಸಿದಂತೆ ಫಲ, ಎಲೆ, ಹೂವು, ಮೊದಲಾದವುಗಳ ಮಹತ್ತ್ವ ನಿರೂಪಿತವಾಗಿರುವುದುಂಟು. ಆದರೆ, ದಳಗಳ ಮಹತ್ತ್ವ ತುಲಸಿಯ ಮಹಿಮೆಗಳಲ್ಲೊಂದು. ತುಲಸೀ ಎಲೆಗಳಿಗೆ ಮಹತ್ತ್ವವಿರುವಂತೆ

ಅದರ ದಳಕ್ಕೂ ಸಹ ವಿಶೇಷವಾದ ಮಹತ್ತ್ವವಿದೆ. ತೀರ್ಥಯಾತ್ರೆ ಮೊದಲಾದ ಅನೇಕ ಪುಣ್ಯಕಾರ್ಯಗಳಿಗಿಂತ ಮಿಗಿಲಾದುದು. ಇತರ ಯಾವುದೇ ವಸ್ತುವಿನ ಸಮರ್ಪಣೆಯೂ ಸಹ ತುಲಸೀದಳದ ಯೋಗ ಅತ್ಯಂತ ಅಗತ್ಯ. ''ಒಲ್ಲನೋ ಹರಿ ಕೊಳ್ಳನೋ ಎಲ್ಲ ಸಾಧನವಿದ್ದು ತುಲಸಿ ಇಲ್ಲದ ಪೂಜೆ'' ಎಂಬ ಮಾತಿನಲ್ಲಿ ತುಲಸಿಯ ದಳದ ಮಹತ್ತ್ವ ನಿರೂಪಿತವಾಗಿದೆ. ಚಿನ್ನ ಅಥವಾ ವಜ್ರಗಳ ಆಭರಣವನ್ನು ಭಗವಂತನಿಗೆ ಸಮರ್ಪಿಸುವಾಗಲೂ ಅವು ವಿಹಿತವೆನ್ನಿಸಲು ತುಲಸಿಯ ದಳದ ಜೊತೆ ಅತ್ಯಂತ ಅಗತ್ಯ. ಎಂದರೆ ಚಿನ್ನ, ವಜ್ರ ಮೊದಲಾದವುಗಳಿಗಿಂತಲೂ ಸಹ ತುಲಸಿಯ ಮಹತ್ತ್ವ ಹೆಚ್ಚಿನದು ಎಂದರ್ಥ.

**ತುಲಸೀದಲಮಾಹಾತ್ಮ್ಯಂ ಶ್ರುಣುಷ್ವಾದ್ಯ ಸಮಾಹಿತಃ।**
**ತೇನಾಧೀತಂ ಶ್ರುತಂ ತೇನ ತೇನ ಸರ್ವಮನುಷ್ಠಿತಮ್ ॥**

– ವಿಷ್ಣುಧರ್ಮೋತ್ತರ (೧೪/೪)

ತುಲಸಿದಳದ ಮಾಹಾತ್ಮ್ಯ ಅಪಾರವಾದುದು. ಅದನ್ನು ತಿಳಿಯುವುದು ಸಹ ಸಕಲ ಶಾಸ್ತ್ರಗಳ ಅಧ್ಯಯನ, ಶ್ರವಣಗಳ ಹಾಗೂ ಸಕಲ ಸತ್ಕಾರ್ಯಗಳ ಅನುಷ್ಠಾನದ ಫಲಕ್ಕೆ ಸಮವೆನ್ನಿಸುವುದು.

**ತುಲಸೀಪಕ್ವಪತ್ರೈಶ್ಚ ಶ್ರೀಹರೇಃ ಪಾದಪಂಕಜೇ।**
**ಪೂಜನಂ ಯೇ ಚ ಕುರ್ವಂತಿ ತೇ ಕೃತಾರ್ಥಾಃ ಕಲೌ ನರಾಃ ॥** – ಸ್ಕಂದಪುರಾಣ

ತುಲಸಿಯ ಪಕ್ವವಾದ ಎಲೆಗಳಿಂದ ಶ್ರೀಹರಿಯ ಪಾದಕಮಲಗಳನ್ನು ಅರ್ಚಿಸುವ ಮಾನವರು ಕೃತಾರ್ಥರೇ ಸರಿ; ಕಲಿಯುಗದಲ್ಲಂತೂ ಇದು ಇನ್ನೂ ಹೆಚ್ಚು ಪುಣ್ಯಕರ.

**ತುಲಸೀದಲೇನ ದೇವೇಶೋ ಪೂಜಿತೋ ಯೇನ ದೈತ್ಯಹಾ।**
**ತೀರ್ಥಯಾತ್ರಾದಿಗಮನೈಃ ಕಿಂ ಫಲಂ ಶತಧಾ ಜಪೈಃ ॥** – ಸ್ಕಂದಪುರಾಣ

ತುಲಸೀದಳಗಳಿಂದ ದೇವದೇವನೂ, ದೈತ್ಯಹಂತಕನೂ ಆದ ಶ್ರೀಹರಿಯನ್ನು ಪೂಜಿಸು– ವವನಿಗೆ ತೀರ್ಥಯಾತ್ರಾದಿಗಳನ್ನು ಕೈಗೊಳ್ಳುವುದಾಗಲಿ, ನೂರಾರು ಜಪಗಳನ್ನು ಮಾಡುವುದಾಗಲಿ ಅಗತ್ಯವೆನ್ನಿಸದು.

**ಯೋ ದದ್ಯಾತ್ ತುಲಸೀಪತ್ರಂ ಪಾದಯೋಶ್ಚಕ್ರಪಾಣಿನಃ।**
**ಕುಲಕೋಟಿಸಮಾಯುಕ್ತೋ ವಿಷ್ಣುಲೋಕೇ ಮಹೀಯತೇ ॥** – ಸ್ಕಂದಪುರಾಣ

ಚಕ್ರಪಾಣಿಯಾದ ಶ್ರೀಹರಿಯ ಪಾದಗಳ ಮೇಲೆ ತುಲಸೀಪತ್ರವನ್ನು ಸಮರ್ಪಿಸುವವನು ತನ್ನ ಕುಲಕೋಟಿಯೊಂದಿಗೆ ಕೂಡಿಕೊಂಡು ವಿಷ್ಣುಲೋಕದಲ್ಲಿ ಆದರಿಸಲ್ಪಡುವನು.

**[1]ಹೇಮಪುಷ್ಪಸಹಸ್ರೇಣ ಯೋಽರ್ಚಯೇದ್ವತ್ಸರಂ ಹರಿಮ್ ।**
**ತುಲಸೀಪತ್ರಮಾತ್ರಸ್ಯ ಕಲಾಂ ನಾರ್ಹಂತಿ ಷೋಡಶೀಮ್ ॥** - ಸ್ಕಂದಪುರಾಣ

ಸಾವಿರಾರು ಸುವರ್ಣಪುಷ್ಪಗಳಿಂದ ಒಂದು ವರ್ಷಕಾಲ ಶ್ರೀಹರಿಯನ್ನು ಪೂಜಿಸುವ ಪುಣ್ಯವು ಸಹ ಒಂದೇ ದಳ ಶ್ರೀತುಲಸಿಯಿಂದ ಅರ್ಚಿಸುವವನ ಪುಣ್ಯದ ಹದಿನಾರನೇ ಒಂದಂಶಕ್ಕೂ ಸಾಟಿ ಎನ್ನಿಸದು. (ಇದರಿಂದ ಸುವರ್ಣಪುಷ್ಪಗಳ ಪೂಜೆ ಅನಗತ್ಯ ಎಂದಲ್ಲ. ಆದರೆ ತುಲಸಿದಳಗಳು ಅವುಗಳಿಗಿಂತಲೂ ಶ್ರೇಷ್ಠ ಎಂದೂ ಸುವರ್ಣಪುಷ್ಪಗಳನ್ನು ಸಹ ತುಲಸೀದಳಗಳೊಂದಿಗೆ ಸಮರ್ಪಿಸಬೇಕು ಎಂದು ಭಾವ).

**ಅರ್ಪಿತೇ ತುಲಸೀಪತ್ರೇ ಮಾಧವೋ ಭಕ್ತವತ್ಸಲಃ ।**
**ಅಪರಾಧಸಹಸ್ರಂ ವಾ ಸಹತೇ ನಾತ್ರ ಸಂಶಯಃ ॥** - ಸ್ಕಂದಪುರಾಣ

ಭಕ್ತವತ್ಸಲನಾದ ಮಾಧವನು ಒಂದು ತುಲಸೀದಳವನ್ನು ಸಮರ್ಪಿಸುವವರ ಸಾವಿರ ಅಪರಾಧಗಳನ್ನು ಸಹ ಮನ್ನಿಸುವನು. ಈ ಬಗ್ಗೆ ಸಂಶಯ ಬೇಕಿಲ್ಲ.

**ಯಸ್ತುಲಸ್ಯಾಃ ಪತ್ರಶತಂ ವಿಷ್ಣವೇ ಪರಮಾತ್ಮನೇ ।**
**ಸಮರ್ಪಯತಿ ತತ್ಪುಣ್ಯಂ ವಕ್ತುಂ ಶಕ್ತೋ ನ ವಿದ್ಯತೇ ॥** - ಸ್ಕಂದಪುರಾಣ

ಪರಮಾತ್ಮನಾದ ವಿಷ್ಣುವಿಗೆ ನೂರು ತುಲಸೀದಳಗಳನ್ನು ಸಮರ್ಪಿಸುವವನಿಗೆ ಒದಗುವ ಪುಣ್ಯವನ್ನು ಬಣ್ಣಿಸುವ ಸಾಮರ್ಥ್ಯ ಯಾರಿಗೂ ಇಲ್ಲವೇ ಇಲ್ಲ.

★★★

# ತುಲಸಿಯಲ್ಲಿ ದೇವತೆಗಳು

ಪ್ರಾತಃಕಾಲ ಸ್ನಾನಾನಂತರ ತುಲಸೀದಳಗಳನ್ನು ಬಿಡಿಸಿಟ್ಟುಕೊಳ್ಳಬೇಕು; ಸ್ನಾನಕ್ಕಿಂತ ಮುಂಚೆಯೇ ತುಲಸಿಯನ್ನು ಬಿಡಿಸುವುದು ನಿಷಿದ್ಧ. ತುಲಸಿಯನ್ನು ಬಿಡಿಸುವಾಗ ಈ ಕೆಳಗಿನ ಮಂತ್ರಗಳನ್ನು ಪಠಿಸಬೇಕು.

ತುಲಸ್ಯಾಹರಣ ಮಂತ್ರ :

**ತುಲಸ್ಯಮೃತಜನ್ಮಾಽಸಿ ಸದಾ ತ್ವಂ ಕೇಶವಪ್ರಿಯೇ ।**
**ಕೇಶವಾರ್ಥಂ ಚಿನೋಮಿ ತ್ವಾಂ ಕ್ಷಮಸ್ವ ಹರಿವಲ್ಲಭೇ ॥** - ಸ್ಕಂದಪುರಾಣ

ತುಲಸೀ ನೀನು ಅಮೃತಮಥನಕಾಲಕ್ಕೆ ಜನಿಸಿದವಳು. ಸದಾ ಕೇಶವನಿಗೆ ಪ್ರಿಯ-ಳಾದವಳು. ಹರಿವಲ್ಲಭಳಾದ ನಿನ್ನನ್ನು ನಾನು ಅವನ ಪೂಜೆಗೋಸ್ಕರ ಬಿಡಿಸುವೆನು.

---

೧. ಹೇಮಪುಷ್ಪಸಹಸ್ರೇಣ ಯೋಽರ್ಚಯೇದ್ವತ್ಸರಂ ಹರಿಮ್ ।
ತುಲಸೀಪತ್ರಮಾತ್ರಸ್ಯ ಕಲಾಂ ನಾರ್ಹಂತಿ ಷೋಡಶೀಮ್ ॥

**ಪ್ರಭಾತೇ ತುಲಸೀಪತ್ರಂ ಯೇ ಛಿಂದಂತಿ ದ್ವಿಜೋತ್ತಮಾಃ।**
**ಯಮಲೋಕಂ ನ ಪಶ್ಯಂತಿ ಗಚ್ಛಂತಿ ಪರಮಂ ಪದಮ್ ॥** - ಸ್ಕಂದಪುರಾಣ

ಪ್ರಾತಃಕಾಲದಲ್ಲಿ ತುಲಸಿಯನ್ನು ಬಿಡಿಸುವಂತಹ ಬ್ರಾಹ್ಮಣೋತ್ತಮರು ಯಮ-ಲೋಕವನ್ನು ನೋಡಲಾರರು. ಅಲ್ಲದೆ, ಪರಮಪದವನ್ನು ಹೊಂದುವರು.

**[೪]ಅಸ್ನಾತ್ವಾ ತುಲಸೀಂ ಛಿತ್ವಾ ದೇವಾರ್ಚಾ ಪಿತೃಕರ್ಮಣಿ।**
**ತತ್ಸರ್ವಂ ನಿಷ್ಫಲಂ ಯಾತಿ ಪಂಚಗವ್ಯೇನ ಶುದ್ಧ್ಯತಿ ॥** - ಸ್ಕಂದಪುರಾಣ

ಸ್ನಾನಮಾಡದೇ ತುಲಸಿಯನ್ನು ಬಿಡಿಸಿ ದೇವಪೂಜೆ, ಪಿತೃಕಾರ್ಯಗಳನ್ನು ಮಾಡಿದಲ್ಲಿ ಅದೆಲ್ಲವೂ ನಿಷ್ಫಲವೆನ್ನಿಸುವುದು. ಆ ತಪ್ಪಿನ ಪ್ರಾಯಶ್ಚಿತ್ತಕ್ಕೆ ಪಂಚಗವ್ಯವನ್ನು ಪ್ರಾಶನ ಮಾಡಬೇಕು.

★★★

## ತುಲಸಿಯ ದಳಗಳಲ್ಲಿಯ ದೇವತೆಗಳು

ದೇವತೆಗಳ ಸನ್ನಿಧಾನವಿಲ್ಲದ ವಸ್ತುವೇ ಇಲ್ಲ. ಶ್ರೀಹರಿಯಂತೂ ಸರ್ವತ್ರ ವ್ಯಾಪ್ತನಾದವನು. ಅದರಂತೆ ವೃಕ್ಷಗಳಲ್ಲೂ ಸಸ್ಯಗಳಲ್ಲೂ ಶ್ರೀಹರಿಯ ಸನ್ನಿಧಾನ ಇದ್ದೇ ಇರುವುದು. ಇತರ ಯಾವುದೇ ವೃಕ್ಷಗಳಿಗಿಂತ ಮಿಗಿಲಾದ ಸನ್ನಿಧಾನವು ತುಲಸಿಯಲ್ಲಿರುವುದು ಮುಖ್ಯವಾದ ಅಂಶ. ಪ್ರಾಣಿಗಳಲ್ಲಿ ಸಕಲ ದೇವತಾಸನ್ನಿಧಾನಯುಕ್ತವಾದ ಪ್ರಾಣಿ ಎಂಬುದು ಗೋವಿನ ಹಿರಿಮೆ. ಸಸ್ಯಗಳಲ್ಲಿ ಅಂತಹ ಹಿರಿಮೆ ಸಲ್ಲುವುದು ತುಲಸಿಗೆ. ಹೀಗಾಗಿ ತುಲಸಿಯ ದಳ, ಎಲೆ, ಮಂಜರಿ, ತುದಿ, ಮಧ್ಯಭಾಗ, ಬೇರು, ಮೃತ್ತಿಕೆ, ಮೊದಲಾಗಿ ಪ್ರತಿಯೊಂದು ಸ್ಥಳದಲ್ಲೂ ದೇವತೆಗಳು ನೆಲೆಸಿರುವುದರಿಂದಾಗಿ ತುಲಸಿಯ ಮಹತ್ತ್ವ ಅತ್ಯಂತ ಪೂಜ್ಯವೆನ್ನಿಸುವುದು. ಇತರ ವೃಕ್ಷಗಳಲ್ಲಿ ಇರುವ ಸನ್ನಿಧಾನಕ್ಕಿಂತ ತುಲಸಿಯಲ್ಲಿ ಭಗವತ್ಸನ್ನಿಧಾನವು ಸಹಜವಾಗಿಯೇ ಹೆಚ್ಚಿರುವಂತೆ ಇದರ ಪ್ರತಿಯೊಂದು ಭಾಗದಲ್ಲಿಯೂ ಸಹ ಅಂತಹ ಸನ್ನಿಧಾನ ತುಂಬಿರುವುದು. ಅದರಲ್ಲೂ ದಳಗಳಲ್ಲಿ ಇನ್ನೂ ಹೆಚ್ಚಿನ ಸನ್ನಿಧಾನವಿರುವುದು ಗಮನಿಸಬೇಕಾದ ಅಂಶ. ಪುಷ್ಕರಾದಿತೀರ್ಥಗಳು ಗಂಗಾದಿನದಿಗಳು ವಿಶೇಷವಾದ ಭಗವತ್ಸನ್ನಿಧಾನಕ್ಕೆ ಪ್ರಸಿದ್ಧ. ಅವೆಲ್ಲವುಗಳೂ ಸಹ ತುಲಸೀದಳದಲ್ಲಿ ನೆಲೆಸಿರುವುದರಿಂದ ತುಲಸಿಯಲ್ಲಿ ಭಗವತ್ಸನ್ನಿಧಾನವು ಇತರ ಸಕಲ ವೃಕ್ಷ ಮೊದಲಾದವುಗಳಿಗಿಂತ ಅತ್ಯಂತ ಹೆಚ್ಚಾದುದು ಎಂದು ತಿಳಿಯುವುದು.

---

೪ ಅಸ್ನಾತ್ವಾ ತುಲಸೀಂ ಛಿತ್ವಾ ದೇವಾರ್ಚನಪರಾಯಣಃ।
ತತ್ಸರ್ವಂ ನಿಷ್ಫಲಂ ಚೈವ ಪಂಚಗವ್ಯೇನ ಶುದ್ಧ್ಯತಿ ॥ (ಪಾಠಾಂತರ)

**[೫]ಪುಷ್ಕರಾದ್ಯಾನಿ ತೀರ್ಥಾನಿ ಗಂಗಾದ್ಯಾಃ ಸರಿತಸ್ತಥಾ ।**
**ವಾಸುದೇವಾದಯೋ ದೇವಾಸ್ತಿಷ್ಠಂತಿ ತುಲಸೀದಲೇ ॥**

– ಪದ್ಮಪುರಾಣ (೬/೧೦೭/೧೪); ಸ್ಕಂದ (೨/೪/೨೩,೨೪)

ಪುಷ್ಕರ ಮೊದಲಾದ ತೀರ್ಥಗಳು, ಗಂಗೆ ಮೊದಲಾದ ನದಿಗಳು ಹಾಗೆಯೇ ವಾಸುದೇವ ಮೊದಲಾದ ದೇವತೆಗಳು ತುಲಸೀದಳದಲ್ಲಿ ನೆಲೆಸಿರುವರು.

**ಗಂಗಾದ್ಯಾಃ ಸರಿತಃ ಸರ್ವಾ ಬ್ರಹ್ಮವಿಷ್ಣುಮಹೇಶ್ವರಾಃ ।**
**ದೇವೈಸ್ತೀರ್ಥೈಃ ಪುಷ್ಕರಾದ್ಯೈಸ್ತಿಷ್ಠಂತಿ ತುಲಸೀದಲೇ ॥**

– ಪದ್ಮಪುರಾಣ (೬/೨೪೪/೧೨)

ಗಂಗಾ ಮೊದಲಾದ ಸಕಲ ನದಿಗಳು, ಬ್ರಹ್ಮವಿಷ್ಣುಮಹೇಶ್ವರರು ಸಕಲ ದೇವತೆಗಳಿಂದಲೂ ಪುಷ್ಕರ ಮೊದಲಾದ ತೀರ್ಥಗಳಿಂದಲೂ ಸಮೇತರಾಗಿ ತುಲಸೀದಳದಲ್ಲಿ ನೆಲೆಸಿರುವರು.

**ಯತ್ರೈಕಸ್ತುಲಸೀವೃಕ್ಷಸ್ತಿಷ್ಠತಿ ದ್ವಿಜಸತ್ತಮ ।**
**ತತ್ರೈವ ತ್ರಿದಶಾಃ ಸರ್ವೇ ಬ್ರಹ್ಮವಿಷ್ಣುಶಿವಾದಯಃ ॥**

– ಪದ್ಮಪುರಾಣ, ಕ್ರಿಯಾಖಂಡ (೨೪/೫)

ಎಲ್ಲಿ ಒಂದೇ ಒಂದಾದರೂ ತುಲಸಿಯ ವೃಕ್ಷವು ಇರುವುದೋ ಅಲ್ಲಿಯೇ ಬ್ರಹ್ಮ, ವಿಷ್ಣು ಶಿವ ಮೊದಲಾದ ಸಕಲ ದೇವತೆಗಳೂ ನೆಲೆಸಿರುವರು.

**ಆದಿತ್ಯಾದಿಗ್ರಹಾಃ ಸರ್ವೇ ವಿಶ್ವೇ ದೇವಾಶ್ಚ ಸರ್ವದಾ ।**
**ವಸವೋ ಮನವಶ್ಚೈವ ತಥಾ ದೇವರ್ಷಯೋಽಖಿಲಾಃ ॥**

**ವಿದ್ಯಾಧರಾಶ್ಚ ಗಂಧರ್ವಾಃ ಸಿದ್ಧಾಶ್ಚಾಪ್ಸರಸಸ್ತಥಾ ।**
**ತುಲಸೀಪತ್ರಮಾಶ್ರಿತ್ಯ ಸರ್ವದಾ ನಿವಸಂತಿ ವೈ ॥**

– ಪದ್ಮಪುರಾಣ, ಕ್ರಿಯಾಯೋಗಸಾರಖಂಡ (೨೪/೯, ೧೦)

ಸೂರ್ಯ ಮೊದಲಾದ ಸಕಲ ಗ್ರಹಗಳು, ವಿಶ್ವೇದೇವತೆಗಳು, ವಸುಗಳು, ಮನುಗಳು ಹಾಗೆಯೇ ಸಕಲ ದೇವತೆಗಳು, ಋಷಿಗಳು, ವಿದ್ಯಾಧರರು, ಗಂಧರ್ವರು, ಸಿದ್ಧರು ಹಾಗೆಯೇ ಅಪ್ಸರೆಯರು ಸದಾ ತುಲಸಿಯ ಎಲೆಯಲ್ಲಿ ಪೂರ್ಣವಾಗಿ ಸನ್ನಿಹಿತರಾಗಿರುವರು.

---

೫ ಪುಷ್ಕರಾದೀನಿ ತೀರ್ಥಾನಿ ಗಂಗಾದ್ಯಾಃ ಸರಿತಸ್ತಥಾ ।
ವಾಸುದೇವಾದಯೋ ದೇವಾ ವಸಂತಿ ತುಲಸೀದಲೇ ॥ – ಪದ್ಮಪುರಾಣ (೬/೨೪೪/೧೨)

**ಕೇಶವಃ ಪತ್ರಮಧ್ಯೇಷು ಪತ್ರಾಗ್ರೇಷು ಪ್ರಜಾಪತಿಃ।**
**ಪತ್ರವೃಂದೇ ಶಿವಸ್ತಿಷ್ಠೇತ್ ತುಲಸ್ಯಾಃ ಸರ್ವದೈವ ಹಿ ॥**

– ಪದ್ಮಪುರಾಣ, ಕ್ರಿಯಾಖಂಡ (೨೪/೬)

ತುಲಸಿಯ ಎಲೆಗಳ ಮಧ್ಯದಲ್ಲಿ ಕೇಶವನಾದ ಶ್ರೀಹರಿಯು, ಎಲೆಗಳ ತುದಿಗಳಲ್ಲಿ ಬ್ರಹ್ಮದೇವರು, ಎಲೆಗಳಲ್ಲಿ ಶಿವನು, ಸದಾ ನೆಲೆಸಿರುವರು.

**ಲಕ್ಷ್ಮೀಃ ಸರಸ್ವತೀ ಚೈವ ಗಾಯತ್ರೀ ಚಂಡಿಕಾ ತಥಾ।**
**ಶಚೀ ಚಾನ್ಯಾ ದೇವಪತ್ನ್ಯಃ ತತ್ಪುಷ್ಪೇಷು ವಸಂತಿ ವೈ ॥**

– ಪದ್ಮಪುರಾಣ, ಕ್ರಿಯಾಖಂಡ (೨೪/೭)

ಮಹಾಲಕ್ಷ್ಮಿ, ಸರಸ್ವತೀ, ಗಾಯತ್ರೀ, ಶಚೀ ಹಾಗೆಯೇ ಇತರ ಸಕಲ ದೇವಪತ್ನಿಯರು ತುಲಸಿಯ ಪುಷ್ಪಗಳಲ್ಲಿ ನೆಲೆಸಿರುವರು.

**ಇಂದ್ರೋಽಗ್ನಿಃ ಶಮನಶ್ಚೈವ ನೈರ್ಋತೋ ವರುಣಸ್ತಥಾ।**
**ಪವನಶ್ಚ ಕುಬೇರಶ್ಚ ತಚ್ಛಾಖಾಯಾಂ ವಸಂತ್ಯಮೀ ॥**

– ಪದ್ಮಪುರಾಣ, ಕ್ರಿಯಾಖಂಡ (೨೪/೮)

ಇಂದ್ರ, ಅಗ್ನಿ, ಯಮ, ನಿರ್ಋತಿ, ವರುಣ, ವಾಯು ಹಾಗೂ ಕುಬೇರ – ಇವರೆಲ್ಲರೂ ತುಲಸಿಯ ರೆಂಬೆಗಳಲ್ಲಿ ನೆಲೆಸಿರುವರು.

**ಯನ್ಮೂಲೇ ಸರ್ವತೀರ್ಥಾನಿ ಯನ್ಮಧ್ಯೇ ಸರ್ವದೇವತಾಃ।**
**ಯದಗ್ರೇ ಸರ್ವವೇದಾಶ್ಚ ತುಲಸಿ ತ್ವಾಂ ನಮಾಮ್ಯಹಮ್ ॥** – ಪದ್ಮಪುರಾಣ

ತುಲಸಿಯ ಬೇರಿನಲ್ಲಿ ಸಕಲ ತೀರ್ಥಗಳೂ, ಮಧ್ಯದಲ್ಲಿ ಸಕಲ ದೇವತೆಗಳೂ, ತುದಿಯಲ್ಲಿ ಸಕಲ ವೇದಗಳೂ ನೆಲೆಸಿರುವಂತಹ ತುಲಸಿಯೇ ನಿನ್ನನ್ನು ನಾನು ನಮಸ್ಕರಿಸುವೆನು.

**ತಸ್ಯಾ ಮೂಲೇ ಸ್ಥಿತೋ ಬ್ರಹ್ಮಾ ಮಧ್ಯೇ ದೇವೋ ಜನಾರ್ದನಃ।**
**ಮಂಜರ್ಯಾಂ ವಸತೇ ರುದ್ರಸ್ತುಲಸೀ ತೇನ ಪಾವನೀ ॥**

– ಪದ್ಮಪುರಾಣ (೬/೨೪/೩೩)

ತುಲಸಿಯ ಬೇರಿನಲ್ಲಿ ಬ್ರಹ್ಮದೇವರು, ಮಧ್ಯದಲ್ಲಿ ದೇವನಾದ ಶ್ರೀಹರಿ, ಮಂಜರಿಗಳಲ್ಲಿ ರುದ್ರದೇವರು, ನೆಲೆಸಿರುವುದರಿಂದ ತುಲಸಿಯು ಪಾವನೆ ಎನ್ನಿಸಿರುವಳು.

★★★

# ತುಲಸಿಯ ಪಂಚಾಂಗಗಳ ಪಾವಿತ್ರ್ಯ

ತುಲಸಿಯು ಒಟ್ಟಾಗಿಯೇ ವಿಶೇಷವಾಗಿ ಭಗವತ್ಸನ್ನಿಧಾನದ ನೆಲೆ. ಅದರಲ್ಲೂ ಸಹ ಅದರ ಐದೂ ಅಂಗಗಳಲ್ಲಿ ಇನ್ನೂ ಹೆಚ್ಚು ಸನ್ನಿಧಾನ. ತುಲಸಿಯ ಸಕಲ ಅಂಗಗಳೂ ಪವಿತ್ರವೇ ಆದರೂ ಎಲೆ, ಹೂವು, ಫಲ, ತೊಗಟೆ ಹಾಗೂ ಮೃತ್ತಿಕೆಗಳು ಇನ್ನೂ ಅತಿಶಯವಾಗಿ ಪವಿತ್ರವಾಗಿವೆ. ಇತರ ಯಾವ ವೃಕ್ಷ, ಸಸ್ಯಗಳಲ್ಲೂ ಈ ರೀತಿಯಾದ ಅಂಗಗಳಲ್ಲಿಯೂ ಸಹ ವಿಶೇಷ ಭಗವತ್ಸನ್ನಿಧಾನ ಎಂಬುದು ಅಷ್ಟಾಗಿ ಪ್ರಮಿತವಾಗಿಲ್ಲ. ಹೀಗೆ ತುಲಸಿಯು ಯಾವುದೇ ದೃಷ್ಟಿಯಲ್ಲಿ ಗಮನಿಸಿದಾಗಲೂ ಹೆಚ್ಚು ಭಗವತ್ಸನ್ನಿಧಾನಯುಕ್ತವಾಗಿರುವುದು ಗಮನಾರ್ಹ-ವೆನ್ನಿಸುವುದು.

**ಪತ್ರಂ ಪುಷ್ಪಂ ಫಲಂ ಮೂಲಂ ಶಾಖಾ ತ್ವಕ್ಸ್ಕಂಧಸಂಜ್ಞಿತಮ್ ।**
**ತುಲಸೀಸಂಭವಂ ಸರ್ವಂ ಪಾವನಂ ಮೃತ್ತಿಕಾದಿಕಾಃ ॥**

- ಪದ್ಮಪುರಾಣ (೬/೨೪/೨)

ಎಲೆ, ಹೂವು, ಫಲ, ಬೇರು, ರೆಂಬೆಗಳು, ತೊಗಟೆ, ಪರ್ವಗಳು ಹಾಗೂ ಮೃತ್ತಿಕೆ ಮೊದಲಾಗಿ ತುಲಸಿಗೆ ಸಂಬಂಧಿಸಿದ ಸಕಲವು ಸಹ ಪವಿತ್ರವೇ ಆಗಿದೆ.

★★★

# ತುಲಸೀಸೇವೆಯ ಫಲ

ಹರಿಸೇವೆ, ಗುರುಸೇವೆಗಳು ತಾರಕ ಎಂಬುದು ಸರ್ವವಿದಿತ. ಅದರಂತೆ, ತುಲಸೀ ಸೇವೆಯೂ ಸಹ ಅತ್ಯಂತ ತಾರಕ. ಗಂಗೆಯು ಮೂರು ಲೋಕಗಳಲ್ಲಿ ಹರಿಯುತ್ತಾ ತ್ರಿಪಥಗೆ ಎನ್ನಿಸಿರುವಂತೆ, ತುಲಸಿಯು ಲೋಕತ್ರಯಗಳಲ್ಲೂ ಸಹ ಮಾನ್ಯಳಾಗಿರುವಳು. ಸುಗ್ರೀವ ತುಲಸಿಯನ್ನು ಪೂಜಿಸಿದ್ದ. ಜೀವೋತ್ತಮನಾದ ಹನುಮಂತನೂ ಸಹ ತುಲಸಿಯನ್ನು ಪೂಜಿಸಲು ಅವಳಲ್ಲಿಯ ಲಕ್ಷ್ಮೀ ಸನ್ನಿಧಾನವೇ ಕಾರಣ. ದೇವಪೂಜೆಗೆಂದು ತುಲಸಿಯನ್ನು ಸಂಗ್ರಹಿಸಿಟ್ಟುಕೊಳ್ಳುವುದೂ ಸಹ ತುಂಬಾ ಪುಣ್ಯಕರವಾದ ಸಕಲಪಾಪಪರಿಹಾರಕವಾದ ಶ್ರೇಷ್ಠ ಕಾರ್ಯ. ತುಲಸಿಯ ಎಲೆಯಿಂದ ಕೆಳಕ್ಕೆ ಬೀಳುವ ನೀರೂ ಸಹ ಪವಿತ್ರ. ಅದನ್ನು ಶಿರಸಾ ಧರಿಸುವವನೂ ಸಹ ಗಂಗಾಸ್ನಾನದ ಫಲವನ್ನು ಪಡೆಯುವನು.

**ತ್ರೈಲೋಕ್ಯವ್ಯಾಪಿನೀ ಗಂಗಾ ಯಥಾ ಶಾಸ್ತ್ರೇಷು ಗೀಯತೇ ।**
**ತಥೈವ ತುಲಸೀ ದೇವೀ ದೃಶ್ಯತೇ ಸಚರಾಚರೇ ॥**

- ಪದ್ಮಪುರಾಣ (೫/೫೬/೧೬)

ಗಂಗೆಯು ಮೂರು ಲೋಕದಲ್ಲಿ ವ್ಯಾಪಿಸಿರುವಳು ಎಂದು ಶಾಸ್ತ್ರದಲ್ಲಿ ಹೇಗೆ ವರ್ಣಿಸಲ್ಪಟ್ಟಿರುವಳೋ ಅದರಂತೆ ತುಲಸೀದೇವಿಯೂ ಸಹ ಸ್ಥಾವರಜಂಗಮಾತ್ಮಕವಾದ ಜಗತ್ತಿನಲ್ಲಿ ಪೂಜ್ಯ ಎಂಬುದಾಗಿ ವರ್ಣಿಸಲ್ಪಟ್ಟಿರುವಳು.

**ಋಷ್ಯಮೂಕೇ ಚ ವಸತಾ ಕಪಿರಾಜೇನ ಸೇವಿತಾ ।**
**ತುಲಸೀ ವಾಲಿನಾಶಾಯ ತಾರಾಸಂಗಮಹೇತವೇ ॥**

– ಪದ್ಮಪುರಾಣ (೫/೫೬/೧೭)

ಋಷ್ಯಮೂಕಪರ್ವತದಲ್ಲಿ ನೆಲೆಸಿದ್ದ ಕಪಿರಾಜನಾದ ಸುಗ್ರೀವ ವಾಲಿಯ ವಧೆಗೋಸ್ಕರ ತುಲಸಿಯನ್ನು ಪೂಜಿಸಿದ್ದ.

**ಪ್ರಣಮ್ಯ ತುಲಸೀಂ ದೇವೀಂ ಸಾಗರೋತ್ಕ್ರಮಣಂ ಕೃತಮ್ ।**
**ಕೃತಕಾರ್ಯಃ ಪ್ರಹೃಷ್ಟಶ್ಚ ಹನೂಮಾನ್ ಪುನರಾಗತಃ ॥**

– ಪದ್ಮಪುರಾಣ (೫/೫೬/೧೮)

ಹನುಮಂತನು ತುಲಸೀದೇವಿಗೆ ನಮಸ್ಕರಿಸಿಯೇ ಸಾಗರವನ್ನು ಉಲ್ಲಂಘಿಸಿದ, ತನ್ನ ಕಾರ್ಯವನ್ನು ಯಶಸ್ವಿಯಾಗಿ ಪೂರೈಸಿ ಆನಂದದಿಂದ ಹಿಂದಿರುಗಿದ.

**ತುಲಸೀಗ್ರಹಣಂ ಕೃತ್ವಾ ವಿಮುಕ್ತೋ ಯಾತಿ ಪಾತಕೈಃ**
**ಅಥವಾ ಮುನಿಶಾರ್ದೂಲಾ ಬ್ರಹ್ಮಹತ್ಯಾಂ ವ್ಯಪೋಹತಿ ॥**

– ಪದ್ಮಪುರಾಣ (೫/೫೯/೩೧)

ತುಲಸಿಯನ್ನು ಸಂಗ್ರಹಿಸುವುದರಿಂದ ಸಕಲ ಪಾತಕಗಳಿಂದ ಮುಕ್ತನಾಗುವನು. ಅದರಂತೆ ಬ್ರಹ್ಮಹತ್ಯಾದೋಷವನ್ನು ಕಳೆದುಕೊಳ್ಳುವನು.

**ತುಲಸೀಪತ್ರಗಲಿತಂ ಯಸ್ತೋಯಂ ಶಿರಸಾ ವಹೇತ್ ।**
**ಗಂಗಾಸ್ನಾನಮವಾಪ್ನೋತಿ ದಶಧೇನುಫಲಪ್ರದಮ್ ॥**

– ಪದ್ಮಪುರಾಣ (೫/೫೬/೨೦)

ತುಲಸೀಪತ್ರದಿಂದ ಬೀಳುವ ನೀರನ್ನು ಯಾವನು ಶಿರಸಾ ಧರಿಸುವನೋ ಅವನು ಹತ್ತು ಗೋದಾನಕ್ಕೆ ಸಮನಾದಂತಹ ಗಂಗಾಸ್ನಾನದ ಪುಣ್ಯವನ್ನು ಗಳಿಸುವನು.

**ನಾಡೀದ್ವಯಾವಶಿಷ್ಟಾಯಾಂ ರಾತ್ರ್ಯಾಂ ಗಚ್ಛೇಜ್ಜಲಾಶಯಮ್ ।**
**ತುಲಸೀಮೃತ್ತಿಕಾಯುಕ್ತಃ ಸವಸ್ತ್ರಕಲಶೋ ಮುನೇ ॥**

– ಸ್ಕಂದಪುರಾಣ (೨/೪/೪/೧)

ಸೂರ್ಯೋದಯಕ್ಕೆ ಇನ್ನೂ ಎರಡು ನಾಡಿಗಳಷ್ಟು ಅವಕಾಶ ಇರುವಾಗಲೇ ರಾತ್ರಿಯಲ್ಲಿ ಸ್ನಾನಕ್ಕೆಂದು, ತುಲಸೀಮೃತ್ತಿಕೆಯನ್ನೂ ಹಿಡಿದುಕೊಂಡು ವಸ್ತ್ರ ಕಲಶಗಳೊಂದಿಗೆ ಜಲಾಶಯಕ್ಕೆ ತೆರಳಬೇಕು.

**ತುಲಸೀಮೂಲಮೃತ್ಸ್ನೈವ ಸ್ನಾನಂ ಕುರ್ಯಾದ್ ವಿಶೇಷತಃ ।**
**ತೇನ ತೀರ್ಥೇ ಕೃತಂ ಸ್ನಾನಂ ಯಾವಚ್ಚಾಂಗೇ ಚ ಮೃತ್ತಿಕಾ ॥**

– ಪದ್ಮಪುರಾಣ (೬/೨೪/೨೬)

ತುಲಸೀಯ ಬೇರಿನ ಬಳಿಯ ಮಣ್ಣಿನಿಂದಲೇ ಸ್ನಾನವನ್ನು ತೀರ್ಥಗಳಲ್ಲಿ ಆಚರಿಸಬೇಕು. ಅದರಿಂದಾಗಿ ತೀರ್ಥವು ಇನ್ನೂ ಪವಿತ್ರವೆನ್ನಿಸುವುದು.

★★★

## ತುಲಸೀಜಯಂತಿ (ಕಾರ್ತಿಕಪೂರ್ಣಿಮಾ)

**ಕಾರ್ತಿಕೀಪೂರ್ಣಿಮಾಯಾಂ ತು ತುಲಸ್ಯಾ ಜನ್ಮ ಮಂಗಲಮ್ ।**
**ತತ್ರ ತಸ್ಯಾಶ್ಚ ಪೂಜಾ ಚ ವಿಹಿತಾ ಹರಿಣಾ ಪುರಾ ।**
**ತಸ್ಯಾಂ ಯಃ ಪೂಜಯೇತ್ ತಾಂ ಚ ಭಕ್ತ್ಯಾ ಚ ವಿಶ್ವಪಾವನೀಮ್ ।**
**ಸರ್ವಪಾಪಾದ್ವಿನಿರ್ಮುಕ್ತೋ ವಿಷ್ಣುಲೋಕಂ ಸ ಗಚ್ಛತಿ ।**

– ಬ್ರಹ್ಮವೈವರ್ತಪುರಾಣ (೨/೨೨/೩೪,೩೫)

ಕಾರ್ತೀಕಹುಣ್ಣಿಮೆಯಂದು ಪಾವನಕರವಾದ ತುಲಸಿಯ ಪ್ರಾದುರ್ಭಾವವಾಯಿತು. ಆದ್ದರಿಂದ ಆ ದಿನದಂದು ತುಲಸೀಪೂಜೆಯು ಶ್ರೀಹರಿಯಿಂದ ವಿಧಿಸಲ್ಪಟ್ಟಿದೆ. ಅಂದು ವಿಶ್ವಪಾವನಿಯಾದ ತುಲಸಿಯನ್ನು ಭಕ್ತಿಯಿಂದ ಪೂಜಿಸುವವನು ಸಕಲ ಪಾಪಗಳಿಂದ ಮುಕ್ತನಾಗಿ ವಿಷ್ಣುಲೋಕವನ್ನು ಹೊಂದುವನು.

**ಅಥ ಸಖ್ಯೌ ಕಾರ್ತಿಕೇ ವೈ ಮಾಸಿ ದಾಮೋದರಪ್ರಿಯೇ ।**
**ಅಮಾವಾಸ್ಯಾತಿಥೌ ಪೃಥ್ವ್ಯಾಂ ಪ್ರಾತಃ ಪ್ರಾದುರ್ಬಭೂವ ಸಾ ।**

– ಬೃಹದ್ಧರ್ಮಪುರಾಣ (೧/೮/೧)

ದಾಮೋದರನಿಗೆ ಪ್ರಿಯವಾದಂತಹ ಕಾರ್ತಿಕಮಾಸದ ಹುಣ್ಣಿಮೆಯಂದು ಪ್ರಾತಃ ಕಾಲದಲ್ಲಿ ದಾಮೋದರನಿಗೆ ಪ್ರಿಯವಾದ ತುಲಸಿಯು ಪ್ರಾದುರ್ಭವಿಸಿದಳು.

★★★

# ತುಲಸಿಯ ಸೇವೆಯ ಫಲ

ತುಲಸಿಯ ಸೇವೆಯ ಫಲ ಅಪೂರ್ವವಾದುದು. ಪಾಪಹರ ಹಾಗೂ ಪುಣ್ಯಕರ-ವಾಗಿರುವಂತೆ ಅಪಾರ ಸಿದ್ಧಿ ಹಾಗೂ ಸದ್ಗತಿಗಳ ಪ್ರಾಪ್ತಿಗೂ ತುಲಸಿಯ ಸೇವೆ ಖಚಿತಸಾಧನ. ಇತಿಹಾಸ ಪುರಾಣಗಳಲ್ಲೂ ತುಲಸಿಯ ಸೇವನೆಯಿಂದ ಸಿದ್ಧಿಪಡೆದ ದೇವತೆಗಳಮ, ಋಷಿಮುನಿಗಳ ಉಲ್ಲೇಖ ಕಂಡುಬರುವುದು.

**ಸೀತಯಾ ಸೇವಿತಾ ಭಕ್ತ್ಯಾ ತುಲಸೀ ದಂಡಕಾನನೇ ।**
**ತ್ರೈಲೋಕ್ಯಪಾವನೀ ಗಂಗಾ ಯಥಾ ಶಾಸ್ತ್ರೇಷು ಗೀಯತೇ ॥** – ಪದ್ಮಪುರಾಣ

ಸೀತೆಯು ಪ್ರೀತಿಯಿಂದ ದಂಡಕಾರಣ್ಯದಲ್ಲಿ ತುಲಸಿಯನ್ನು ಸೇವಿಸಿದಳು. ಗಂಗೆಯು ತ್ರೈಲೋಕ್ಯಪಾವನೀ ಎಂಬುದಾಗಿ ಶಾಸ್ತ್ರಗಳಲ್ಲಿ ಉಲ್ಲೇಖಿಸಲ್ಪಟ್ಟಿರುವಂತೆ ತುಲಸಿಯ ಸೇವನೆಯು ಸಹ ಉಲ್ಲೇಖಿಸಲ್ಪಟ್ಟಿದೆ.

**ಋಷ್ಯಮೂಕೇ ತು ವಸತಾ ಕಪಿರಾಜೇನ ಸೇವಿತಾ ।**
**ಧರ್ಮಾರಣ್ಯೇ ಗಯಾಯಾಂ ಚ ಸೇವಿತಾ ಪಿತೃಭಿಃ ಸ್ವಯಮ್ ।**
**ಸೇವಿತಾ ತುಲಸೀ ಪುಣ್ಯಾ ಆತ್ಮನೋ ಹಿತಕಾಮ್ಯಯಾ ॥**
– ಪದ್ಮಪುರಾಣ (೫/೫೬/೧೮)

ಋಷ್ಯಮೂಕದಲ್ಲಿ ನೆಲೆಸಿದ್ದ ಕಪಿರಾಜನಾದ ಸುಗ್ರೀವ ತುಲಸಿಯನ್ನು ಸೇವಿಸಿದ್ದ. ಧರ್ಮಾರಣ್ಯದಲ್ಲಿ ಗಯಾ ಕ್ಷೇತ್ರದಲ್ಲಿ ಪಿತೃಗಳು ಸಹ ತುಲಸಿಯನ್ನು ಸೇವಿಸುವರು.

**ತುಲಸೀಸೇವನಾದೇವ ಹೇರಂಬೋ ವಿಜಿತೇಂದ್ರಿಯಃ ।**
**ತಾರಕಂ ಸಮರೇ ಹತ್ವಾ ದೇವಸೇನಾಧಿಪೋಽಭವತ್ ॥** – ಪದ್ಮಪುರಾಣ

ತುಂಬಾ ಜಿತೇಂದ್ರಿಯನಾದ ಸ್ಕಂದನೂ ಸಹ ತುಲಸಿಯನ್ನು ಸೇವಿಸಿಯೇ ಯುದ್ಧದಲ್ಲಿ ತಾರಕಾಸುರನನ್ನು ಸಂಹರಿಸಿ, ದೇವಸೇನಾಧಿಪತಿ ಎನ್ನಿಸಿದ.

**ತುಲಸೀಸೇವನಾದೇವ ಪಕ್ಷಿರಾಜೋ ಮಹಾಬಲಃ ।**
**ವಿಷ್ಣುವಾಹನತಾಂ ಪ್ರಾಪ್ತೋ ಜಹಾರಾಮೃತಮುತ್ತಮಮ್ ॥** – ಪದ್ಮಪುರಾಣ

ತುಲಸಿಯನ್ನು ಸೇವಿಸಿದ್ದರಿಂದಾಗಿಯೇ ಗರುಡನು ಮಹಾ ಬಲಶಾಲಿ ಎನ್ನಿಸಿ, ವಿಷ್ಣುವಿಗೆ ವಾಹನವೆನ್ನಿಸಿದನು; ಉತ್ತಮವಾದ ಅಮೃತವನ್ನು ತಂದನು.

**ಆರಾಧ್ಯ ನಂದೀ ದೇವೇಶೀಂ ಶಂಭೋರಾರಾಧನಕ್ಷಮಃ ।**
**ಅಚಲಾ ಚಲಾಶ್ಚ ದಿಗ್ನಾಗಾಃ ತುಲಸೀಸೇವಯಾಽನಘ ।**
**ಬಭೂವುರ್ಭೂಮಿಧರಣೇ ಪಟೀಯಾಂಸಃ ಸುರಾಯುಷಃ ॥** – ಪದ್ಮಪುರಾಣ

ದೇವಶ್ರೇಷ್ಠಳಾದ ತುಲಸಿಯನ್ನು ಆರಾಧಿಸಿಯೇ ನಂದೀಶ್ವರನು ರುದ್ರದೇವರ ಸೇವೆಯ ಅವಕಾಶವನ್ನು ಪಡೆದ; ಸ್ಥಾವರ, ಜಂಗಮರೂಪದ ದಿಕ್ಕಿನ ಭಾಗಗಳು ಸಹ ತುಲಸಿಯ ಸೇವನೆಯಿಂದಾಗಿಯೇ ಭೂಮಿಯನ್ನು ಧರಿಸುವ ಸಾಮರ್ಥ್ಯವನ್ನು ಹೊಂದಿದವು.

**ಸರ್ವೇಷಾಮಪಿ ಜಂತೂನಾಂ ಋಷೀಣಾಮಪಿ ಯೋಗಿನಾಮ್ ।**
**ಪತಿವ್ರತಾನಾಂ ನಾರೀಣಾಂ ಸಾ ಪೂಜ್ಯಾ ಕಾರ್ಯಸಿದ್ಧಯೇ ॥** – ಪದ್ಮಪುರಾಣ

ಸಕಲ ಪ್ರಾಣಿಗಳಿಗೂ, ಋಷಿಗಳಿಗೂ, ಯೋಗಿಗಳಿಗೂ, ಪತಿವ್ರತೆಯರಿಗೂ, ಸಕಲ ಸ್ತ್ರೀಯರಿಗೂ ಕಾರ್ಯಸಿದ್ಧಿಗೋಸ್ಕರ ತುಲಸಿಯು ಪೂಜನೀಯಳೆನ್ನಿಸಿರುವಳು.

**ರಂಭಾ ವಾಽಪ್ಸರಸಾಂ ಮಧ್ಯೇ ತುಲಸೀಸೇವಯಾ ಪುರಾ ।**
**ದೇವೈರ್ದತ್ತಂ ವರಂ ಲಬ್ಧ್ವಾ ದೇವೇಂದ್ರಪ್ರಿಯತಾಮಗಾತ್ ।**
**ಅತಶ್ಚ ತುಲಸೀ ಪೂಜ್ಯಾ ವಿಶೇಷೇಣ ಹರೇರ್ದಿನೇ ॥........** – ಪದ್ಮಪುರಾಣ

ಅಪ್ಸರೆಯರ ಮಧ್ಯದಲ್ಲಿ ರಂಭೆ ಎಂಬುವವಳು ಹಿಂದೆ ತುಲಸಿಯ ಸೇವನೆಯಿಂದಲೇ ದೇವತೆಗಳು ನೀಡಿದ ವರವನ್ನು ಪಡೆದು ದೇವೇಂದ್ರನಿಗೆ ಪ್ರಿಯಳೆನ್ನಿಸಿದಳು. ಆದ್ದರಿಂದ ತುಲಸಿಯು ವಿಶೇಷವಾಗಿ ಹರಿದಿನದಂದು ಪೂಜ್ಯಳೆನ್ನಿಸಿರುವಳು.

**ಪ್ರಾತಃ ಸಂಧ್ಯಾವಿಧಿಂ ಕೃತ್ವಾ ಸ್ನಾನಪೂರ್ವಂ ದಿನೇ ದಿನೇ ।**
**ಗಾಯತ್ರ್ಯಷ್ಟಶತಂ ಜಪ್ತ್ವಾ ತುಲಸೀಂ ಪೂಜಯೇತ್ ತತಃ ।**
**ಪ್ರಾಙ್ಮುಖೋದಙ್ಮುಖೋ ವಾಽಪಿ ಸ್ಥಿತ್ವಾ ಪ್ರಯತಮಾನಸಃ ॥** – ಪದ್ಮಪುರಾಣ

ಪ್ರತಿದಿನದಲ್ಲೂ ಪ್ರಾತಃಕಾಲದಲ್ಲಿ ಸ್ನಾನದ ಬಳಿಕ ಸಂಧ್ಯಾವಂದನೆಯನ್ನು ಪೂರೈಸಿ, ೮೦೦ ಗಾಯತ್ರೀಮಂತ್ರವನ್ನು ಜಪಿಸಿ, ಆ ಬಳಿಕ ಪೂರ್ವಕ್ಕೆ ಅಥವಾ ಉತ್ತರಕ್ಕೆ ಮುಖಮಾಡಿ ಏಕಾಗ್ರತೆಯಿಂದ ತುಲಸಿಯನ್ನು ಪೂಜಿಸಬೇಕು.

**ರಾಜಸೂಯಾದಿಭಿರ್ಯಜ್ಞೈರ್ವ್ರತೈಶ್ಚ ವಿವಿಧೈರ್ಯಮೈಃ ।**
**ಸಾ ಗತಿಃ ಪ್ರಾಪ್ಯತೇ ಧೀರೈಸ್ತುಲಸೀಸೇವಯಾ ವ್ರಜೇತ್ ॥**

– ಪದ್ಮಪುರಾಣ (೫/೫೮/೧೩೭)

ರಾಜಸೂಯ ಮೊದಲಾದ ಯಜ್ಞಗಳಿಂದ ವಿವಿಧವ್ರತಗಳಿಂದ, ಯಮಗಳಿಂದ ಲಭಿಸುವ ಫಲವು ಧೀರರಾದವರಿಗೆ ತುಲಸೀಸೇವನೆಯಿಂದಲೇ ಲಭಿಸುವುದು.

**ತುಲಸೀಸೇವಯಾ ದೇವೀ ಸಾವಿತ್ರೀ ಶುಭಮಂಗಲಾ ।**
**ಪಾತಿವ್ರತ್ಯಮವಾಪ್ಯೈವ ಭರ್ತೃಸಂಜೀವನಕ್ಷಮಾ ॥**

– ವಿಷ್ಣುಧರ್ಮೋತ್ತರ (೧೫/೧೬)

ತುಲಸಿಯ ಸೇವನೆಯಿಂದಲೇ ಸಾವಿತ್ರಿಯು ಶುಭಮಂಗಲೆ ಎನ್ನಿಸಿ, ಪಾತಿವ್ರತ್ಯವನ್ನು ಪಡೆದು ಪತಿಯನ್ನು ಬದುಕಿಸಿಕೊಳ್ಳಲು ಸಮರ್ಥಳಾದಳು.

**ತುಲಸೀಸೇವನಾದೇವ ವಾಗ್ದೇವೀ ಕಾಮದಾಯಿನೀ ।**
**ಸರ್ವವಿದ್ಯಾನಿಧಿರ್ಭೂತ್ವಾ ಬ್ರಹ್ಮಪತ್ನೀತ್ವಮಾಪ ಸಾ ॥**

-ವಿಷ್ಣುಧರ್ಮೋತ್ತರ (೧೫/೧೭)

ತುಲಸಿಯ ಸೇವನೆಯಿಂದಲೇ ವಾಗ್ದೇವಿಯು ಕಾಮಪ್ರದಾಯಿನಿ ಎನ್ನಿಸಿ, ಸಕಲ ವಿದ್ಯೆಗಳಿಗೂ ನಿಧಿ ಎನ್ನಿಸಿ, ಬ್ರಹ್ಮನ ಪತ್ನಿ ಎನ್ನಿಸಿದಳು.

**ತುಲಸೀಸೇವಿತಾ ಯೇನ ತೇನ ಸರ್ವಂ ಸುಸೇವಿತಮ್ ।**
**ಗುರುವಿಪ್ರದೇವತೀರ್ಥಂ ತಸ್ಮಾತ್ ಸೇವಯ ಷಣ್ಮುಖ ॥**

- ಪದ್ಮಪುರಾಣ, ಸೃಷ್ಟಿಖಂಡ (೫/೫೬/೧೩೫)

ತುಲಸಿಯನ್ನು ಸೇವಿಸುವವನು ಸಕಲ ತೀರ್ಥಗಳನ್ನು ಸೇವಿಸಿದ ಫಲವನ್ನು ಪಡೆಯುವನು. ಗುರುತೀರ್ಥ, ವಿಪ್ರತೀರ್ಥ, ದೇವತೀರ್ಥ – ಈ ಮೂರೂ ತುಲಸಿಯ ಸೇವನೆಯಿಂದ ಸೇವಿತವಾಗುವವು. ಆದ್ದರಿಂದ ತುಲಸಿಯನ್ನು ಸೇವಿಸಬೇಕು.

**ದೃಷ್ಟಾಸ್ಪೃಷ್ಟಾಽಥವಾ ಧ್ಯಾತಾ ಕೀರ್ತಿತಾ ಶ್ರುತಾ ।**
**ರೋಪಿತಾ ಸೇಚಿತಾ ನಿತ್ಯಂ ತುಲಸೀ ಪೂಜಿತಾ ಶುಭಾ ॥**

**ನವಧಾ ತುಲಸೀಭಕ್ತಿಂ ಯೇ ಕುರ್ವಂತಿ ದಿನೇ ದಿನೇ ।**
**ಯುಗಕೋಟಿಸಹಸ್ರಾಣಿ ತೇ ವಸಂತಿ ಹರೇರ್ಗೃಹೇ ॥** – ಪದ್ಮಪುರಾಣ

ದರ್ಶನ, ಸ್ಪರ್ಶನ, ಧ್ಯಾನ, ಕೀರ್ತನ, ಶ್ರವಣ, ರೋಪಣ, ಸೇಚನ, ಪೂಜನ ಹಾಗೂ ವಂದನ – ಈ ರೀತಿಯಾಗಿ ಒಂಭತ್ತು ಬಗೆಯಲ್ಲಿ ಭಕ್ತಿಯಿಂದ ತುಲಸಿಯನ್ನು ಯಾರು ಪ್ರತಿದಿನವೂ ಸೇವಿಸುವರೋ ಅವರು ಶ್ರೀಹರಿಯ ಮಂದಿರದಲ್ಲಿ ಕೋಟಿಸಾವಿರ ಯುಗಗಳಷ್ಟು ಕಾಲ ನೆಲೆಸುವರು.

**ಪೂಜಾ ನ ಸಾ ಯಾ ತುಲಸೀಂ ವಿನಾ ಕೃತಾ**
**ಸ್ನಾನಂ ನ ತದ್ಯತ್ ತುಲಸೀಂ ವಿನಾ ಕೃತಮ್ ।**
**ಭುಕ್ತಂ ನ ತದ್ಯತ್ ತುಲಸೀವಿವರ್ಜಿತಮ್ ॥** – ಪದ್ಮಪುರಾಣ

ತುಲಸೀ ಇಲ್ಲದ ಪೂಜೆ ಪೂಜೆಯಲ್ಲ; ತುಲಸೀಮೃತ್ತಿಕೆ ಇಲ್ಲದ ಸ್ನಾನ ಸ್ನಾನವಲ್ಲ; ತುಲಸೀ ಇಲ್ಲದ ಭೋಜನ ಭೋಜನವಲ್ಲ.

**ತುಲಸ್ಯಾ ಸಹಿತಂ ದತ್ತಂ ತತ್ ಶ್ರೀಕೃಷ್ಣಸ್ಯ ತುಷ್ಟಯೇ ।**
**ತುಲಸ್ಯಾ ಸಹಿತಂ ದಾನಂ ತದ್ದಾನಂ ಚ ಸುಖಾಪ್ತಯೇ ॥** – ಶಾಂ.ಸಂ

ಯಾವುದೇ ದಾನವನ್ನು ತುಲಸಿಯ ಸಮೇತವಾಗಿಯೇ ಶ್ರೀಕೃಷ್ಣನ ಪ್ರೀತಿಗೆಂದು ಸಮರ್ಪಿಸಬೇಕು. ಅಂತಹ ದಾನವು ಸುಖಪ್ರಾಪ್ತಿಗೆ ಸಾಧನವಾಗುವುದು.

**ವಿಯೋಗಾದ್ರಾಮದೇವಸ್ಯ ಧ್ಯಾತ್ವಾ ತ್ವಾಂ ಜನಕಾತ್ಮಜಾ ।**
**ಅಶೋಕವನಮಧ್ಯೇ ತು ಪ್ರಿಯೇಣ ಸಹ ಸಾಽಗಮತ್ ॥** – ಪದ್ಮಪುರಾಣ

ಶ್ರೀರಾಮದೇವರ ಅಗಲಿಕೆಯಿಂದ ಕೂಡಿದ ಜಾನಕಿಯು ಅಶೋಕವನಮಧ್ಯದಲ್ಲಿ ತುಲಸಿಯನ್ನು ಧ್ಯಾನಿಸಿಯೇ ಶ್ರೀರಾಮನೊಂದಿಗೆ ಸೇರಿಕೊಂಡಳು.

**ಇತ್ಯೇವಮರ್ಚಯೇನ್ನಿತ್ಯಂ ಪ್ರಾತರೇವ ಶುಚಿರ್ನರಃ ।**
**ಮಧ್ಯಾಹ್ನೇ ವಾಽಥ ಸಾಯಾಹ್ನೇ ಪೂಜಯೇತ್ ಪ್ರಯತೋ ನರಃ ॥**

– ಪದ್ಮಪುರಾಣ

ಹೀಗೆ ಪ್ರಾತಃಕಾಲದಲ್ಲಿ ಶುದ್ಧನಾಗಿ ನರನು ತುಲಸಿಯನ್ನು ಪೂಜಿಸಬೇಕು. ಅದರಂತೆ ಮಧ್ಯಾಹ್ನದಲ್ಲಾಗಲಿ, ಸಾಯಂಕಾಲದಲ್ಲಾಗಲಿ, ಪ್ರಯತ್ನಪೂರ್ವಕವಾಗಿ ತುಲಸಿಯನ್ನು ಆರಾಧಿಸಬೇಕು.

**ಸರ್ವೋಪಚಾರೈರಥವಾ ಚಾತುರ್ಮಾಸ್ಯೇ ವಿಶೇಷತಃ ।**
**ಪೂಜಯೇತ್ ತುಲಸೀಂ ದೇವೀಮಪೂಪಫಲಪಾಯಸೈಃ ॥** – ಪದ್ಮಪುರಾಣ

ವಿಶೇಷವಾಗಿ ಚಾತುರ್ಮಾಸ್ಯದಲ್ಲಿ ತುಲಸಿಯನ್ನು ಸಕಲ ಉಪಚಾರಗಳಿಂದಲೂ ಅಪೂಪ, ಫಲ, ಪಾಯಸಗಳಿಂದಲೂ ಪೂಜಿಸಬೇಕು.

**ಇತಿ ಶ್ರೀತುಲಸೀಪೂಜಾಮಾಹಾತ್ಮ್ಯಂ ಶೃಣುಯಾನ್ನರಃ ।**
**ಸಕೃದ್ವಾಽಪಿ ಪಠೇನ್ನಿತ್ಯಂ ಸ ಗಚ್ಛೇದ್ವೈಷ್ಣವಂ ಪದಮ್ ॥** – ಪದ್ಮಪುರಾಣ

ಇಂತಹ ತುಲಸಿಪೂಜೆಯ ಮಾಹಾತ್ಮ್ಯವನ್ನು ಪ್ರತಿನಿತ್ಯದಲ್ಲೂ ಒಮ್ಮೆಯಾದರೂ ಮಾನವನು ಶ್ರವಣಮಾಡಿದಲ್ಲಿಲ ವೈಷ್ಣವಸ್ಥಾನವನ್ನು ಪಡೆಯುವನು.

**ಕೃಷ್ಣಂ ಕೃಷ್ಣತುಲಸ್ಯಾ ಚ ಯೋ ಭಕ್ತ್ಯಾ ಪೂಜಯೇನ್ನರಃ ।**
**ಸ ಯಾತಿ ಭವನಂ ಶುದ್ಧಂ ಯತ್ರ ವಿಷ್ಣುಃ ಶ್ರಿಯಾ ಸಹ ॥** – ಪದ್ಮಪುರಾಣ

ಶ್ರೀಕೃಷ್ಣನನ್ನು ಕೃಷ್ಣತುಲಸಿಯಿಂದ ಭಕ್ತಿಯಿಂದ ಪೂಜಿಸುವ ಮಾನವನು ಮಹಾಲಕ್ಷ್ಮಿ-ಯೊಂದಿಗೆ ವಿಷ್ಣುವು ನೆಲೆಸಿರುವ ಶುದ್ಧವಾದ ಭವನಕ್ಕೆ ತೆರಳುವನು.

**ತುಲಸೀಂ ಕೃಷ್ಣನಾಮ್ನೀಂ ತಾಂ ಯೋಽರ್ಪಯೇಚ್ಚ ಜನಾರ್ದನೇ ।**
**ನರೋ ಯಾತಿ ತನುಂ ತ್ಯಕ್ತ್ವಾ ತದ್ವಿಷ್ಣೋಃ ಪರಮಂ ಪದಮ್ ॥**

– ಪದ್ಮಪುರಾಣ

ಕೃಷ್ಣ ಎಂಬ ಹೆಸರಿನ ತುಲಸಿಯನ್ನು ಯಾವ ಮನುಷ್ಯನು ಶ್ರೀಹರಿಗೆ ಸಮರ್ಪಿಸುವನೋ ಅಂತಹವನು ದೇಹಬಿಟ್ಟಮೇಲೆ, ವಿಷ್ಣುವಿನ ಶ್ರೇಷ್ಠ ಲೋಕವನ್ನು ಪಡೆಯುವನು.

**ತುಲಸೀಪಕ್ವಪತ್ರೈಶ್ಚ ಶ್ರೀಹರೇಃ ಪಾದಪಂಕಜೇ ।**
**ಪೂಜನಂ ಯೇ ಚ ಕುರ್ವಂತಿ ತೇ ಕೃತಾರ್ಥಾಃ ಕಲೌ ನರಾಃ ॥** – ಪದ್ಮಪುರಾಣ

ಕಲಿಯುಗದಲ್ಲಿ ತುಲಸಿಯ ಪಕ್ವಪತ್ರಗಳಿಂದ ಶ್ರೀಹರಿಯ ಪಾದಕಮಲಗಳನ್ನು ಯಾರು ಪೂಜೆ ಮಾಡುವರೋ ಅವರು ಕೃತಾರ್ಥರೆನ್ನಿಸುವರು.

**ತುಲಸೀದಲೇನ ದೇವೇಶೋ ಪೂಜಿತೋ ಯೇನ ದೈತ್ಯಹಾ ।**
**ತೀರ್ಥಯಾತ್ರಾದಿಗಮನೈಃ ಕಿಂ ಫಲಂ ಶತಧಾ ಜಪ್ಯೈಃ ॥** – ಪದ್ಮಪುರಾಣ

ತುಲಸಿಯ ದಳದಿಂದ ದೇವತೆಗಳ ಒಡೆಯನಾದ ದೈತ್ಯಮರ್ದನನಾದ ಶ್ರೀಕೃಷ್ಣನನ್ನು ಪೂಜಿಸುವವನು ತೀರ್ಥಯಾತ್ರೆ ಮೊದಲಾದವುಗಳನ್ನು, ನೂರಾರು ಜಪಗಳನ್ನು ಮಾಡಬೇಕಿಲ್ಲ.

**ಯೋ ದದ್ಯಾತ್ ತುಲಸೀಪತ್ರಂ ಪಾದಯೋಶ್ಚಕ್ರಪಾಣಿನಃ ।**
**ಕುಲಕೋಟಿಸಮಾಯುಕ್ತೋ ವಿಷ್ಣುಲೋಕೇ ಮಹೀಯತೇ ॥** – ಪದ್ಮಪುರಾಣ

ಯಾವನು ತುಲಸಿಯ ಎಲೆಯನ್ನು ಚಕ್ರಪಾಣಿಯಾದ ಶ್ರೀಹರಿಯ ಪಾದಗಳಿಗೆ ಸಮರ್ಪಿಸುವನೋ ಅವನು ತನ್ನ ಕೋಟಿ ಕುಲಗಳೊಂದಿಗೆ ಕೂಡಿಕೊಂಡು, ವಿಷ್ಣುಲೋಕದಲ್ಲಿ ಪೂಜಿತನಾಗುವನು.

**ಅರ್ಪಿತೇ ತುಲಸೀಪತ್ರೇ ಮಾಧವೋ ಭಕ್ತವತ್ಸಲಃ ।**
**ಅಪರಾಧಸಹಸ್ರಂ ವಾ ಸಹತೇ ನಾತ್ರ ಸಂಶಯಃ ॥** – ಪದ್ಮಪುರಾಣ

ಒಂದು ತುಲಸಿಯ ದಳವನ್ನು ಸಮರ್ಪಿಸಿದರೂ ಭಕ್ತವತ್ಸಲನಾದ ಶ್ರೀಹರಿಯು ಅವನ ಸಾವಿರ ಅಪರಾಧಗಳನ್ನು ಮನ್ನಿಸುವನು. ಈ ಬಗ್ಗೆ ಸಂಶಯವಿಲ್ಲ.

**ಯಸ್ತುಲಸ್ಯಾಃ ಪತ್ರಶತಂ ವಿಷ್ಣವೇ ಪರಮಾತ್ಮನೇ ।**
**ಸಮರ್ಪಯತಿ ತತ್ಪುಣ್ಯಂ ವಕ್ತುಂ ಶಕ್ತೋ ನ ವಿದ್ಯತೇ ॥** – ಪದ್ಮಪುರಾಣ

ಯಾವನು ಪರಮಾತ್ಮನಾದ ವಿಷ್ಣುವಿಗೆ ತುಲಸಿಯ ನೂರು ಪತ್ರಗಳನ್ನು ಸಮರ್ಪಿಸುವನೋ ಅವನ ಪುಣ್ಯವನ್ನು ವರ್ಣಿಸಲು ಸಮರ್ಥನಾದವನು ಇಲ್ಲವೇ ಇಲ್ಲ.



ಪಿತೄನ್ ಗುರೂನ್ ಸಮುದ್ದಿಶ್ಯ ತುಲಸೀ ವಿಷ್ಣವೇऽರ್ಪಿತಾ।
ಬ್ರಹ್ಮಹತ್ಯಾಕೋಟಿಶತಂ ಅಗಮ್ಯಾನಾಂ ಸಹಸ್ರಕಮ್ ।
ಅಭಿತಃ ಕೋಟಿಪಾಪಾನಿ ದಹತ್ಯಗ್ನಿರಿವೇಂಧನಮ್ ॥ – ಪದ್ಮಪುರಾಣ

ಪಿತೃಗಳನ್ನು ಗುರುಗಳನ್ನು ಉದ್ದೇಶಿಸಿ, ತುಲಸಿಯನ್ನು ಶ್ರೀವಿಷ್ಣುವಿಗೆ ಸಮರ್ಪಿಸುವನ ಕೋಟಿಶತ ಬ್ರಹ್ಮಹತ್ಯೆಗಳು, ಸಾವಿರಗಟ್ಟಲೆ ಅಗಮ್ಯಾಗಮನ ಹಾಗೂ ಕೋಟಿಗಟ್ಟಲೆ ಇತರ ಪಾಪಗಳು ಅಗ್ನಿಯಿಂದ ಇಂಧನಗಳಂತೆ ಉರಿದು ಬೂದಿಯಾಗುವವು.

ಯಃ ಕುರ್ಯಾತ್ ತುಲಸೀಪತ್ರೈಃ ಪೂಜಾಂ ವಿಷ್ಣೋರ್ಮಹಾತ್ಮನಃ।
ಜನ್ಮಕೋಟಿಸಹಸ್ರೇಷು ನ ದರಿದ್ರೋ ಭವೇನ್ನರಃ॥ – ಪದ್ಮಪುರಾಣ

ಯಾವನು ತುಲಸಿಪತ್ರಗಳಿಂದ ಮಹಾತ್ಮನಾದ ವಿಷ್ಣುವನ್ನು ಪೂಜಿಸುವನೋ ಅಂತಹ ಮನುಷ್ಯನು ಕೋಟಿಸಾವಿರ ಜನ್ಮಗಳಲ್ಲೂ ದರಿದ್ರನಾಗನು.

ಗುಹ್ಯಾನಿ ಯಾನಿ ಪಾಪಾನಿ ಹ್ಯನಾಖ್ಯೇಯಾನಿ ಮಾನವೈಃ।
ನಾಶಯೇತ್ ತುಲಸೀ ಭಕ್ತ್ಯಾ ದತ್ತಾ ಕೇಶವಮೂರ್ಧನಿ॥ – ಪದ್ಮಪುರಾಣ

ಶ್ರೀತುಲಸಿಯನ್ನು ಭಕ್ತಿಯಿಂದ ಶ್ರೀಹರಿಯ ಶಿರಸ್ಸಿನ ಮೇಲೆ ಸಮರ್ಪಿಸಲ್ಪಡುವ ಮಾನವನ ಇತರರಿಗೆ ತಿಳಿಸಲಾಗದಂತಹ ರಹಸ್ಯ ಪಾಪಗಳೆಲ್ಲವೂ ನಾಶವಾಗುವವು.

***

# ತುಲಸಿಯ ಮಹಿಮೆ

ತ್ರೈಲೋಕ್ಯವ್ಯಾಪಿನೀ ಗಂಗಾ ಯಥಾ ಶಾಸ್ತ್ರೇಷು ಗೀಯತೇ।
ತಥೈವ ತುಲಸೀ ದೇವೀ ದೃಶ್ಯತೇ ಸಚರಾಚರೇ॥– ಪದ್ಮಪುರಾಣ (೫/೫೯/೮)

ಮೂರು ಲೋಕದಲ್ಲಿ ಹರಡಿರುವ ಗಂಗೆಯ ಮಹಿಮೆಯನ್ನು ಹೇಗೋ ಹಾಗೆ ಶಾಸ್ತ್ರಗಳು ಚರಾಚರ ವಸ್ತುಗಳಲ್ಲಿ ತುಲಸಿಯನ್ನು ಕುರಿತು ವರ್ಣಿಸುವವು.

ತುಲಸೀದಲಸಂತ್ಯಕ್ತಪುಷ್ಪೇಣಾಭ್ಯರ್ಚನಂ ಮಮ।
ಉತ್ತರಾಷಾಢಮಿಲಿತಶ್ರವಣದ್ವಾದಶೀವ್ರತಮ್ ।
ಸುರಾಯಾ ಬಿಂದುನಾ ಸ್ಪೃಷ್ಟತೀರ್ಥವತ್ ತೂಭಯಂ ತ್ಯಜೇತ್॥

– ವಿಷ್ಣುರಹಸ್ಯ

ತುಲಸಿ ದಳಗಳ ಸಂಪರ್ಕವಿಲ್ಲದ ಶ್ರೀಹರಿಯ ಪೂಜೆಯು ಉತ್ತರಾಷಾಢ ನಕ್ಷತ್ರದಿಂದ ಒಡಗೂಡಿದ ಶ್ರವಣದ್ವಾದಶಿಯ ವ್ರತದಂತೆ, ಸುರೆಯ ಹನಿಯಿಂದ ಒಡಗೂಡಿದ

ತೀರ್ಥದಂತೆ ವ್ಯರ್ಥ (ಶ್ರವಣದ ದ್ವಾದಶಿಯ ಉಪವಾಸಕ್ಕೆ ಅಂದು ಉತ್ತರಾಷಾಢ ನಕ್ಷತ್ರದ ಸಂಪರ್ಕವನ್ನು ಶ್ರವಣ ನಕ್ಷತ್ರವು ಸರ್ವಥಾ ಹೊಂದಿರಕೂಡದು. ಆದರಂತೆ ತೀರ್ಥವು ಪವಿತ್ರವನ್ನಿಸಲು ಸುರೆಯ ಒಂದು ಬಿಂದುವಿನ ಸಂಪರ್ಕವು ಸಹ ಒದಗಿರಕೂಡದು ಎಂದು ಭಾವ).

ತುಲಸೀಂ ಪ್ರಾಪ್ಯ ಯೋ ನಿತ್ಯಂ ನ ಕರೋತಿ ಮಮಾರ್ಚನಮ್ ।
ತಸ್ಯಾಹಂ ಪ್ರತಿಗೃಹ್ಣಾಮಿ ನ ಪೂಜಾಂ ಶತವಾರ್ಷಿಕೀಮ್ ॥ - ಗರುಡಪುರಾಣ

ತುಲಸಿಯನ್ನು ಸಂಪಾದಿಸದೆ, ಯಾವನು ನನ್ನನ್ನು ಪೂಜಿಸುವನೋ ಅವನ ನೂರು ವರ್ಷಗಳಷ್ಟು ಕಾಲ ಪೂಜಿಸಿದರೂ ಅದನ್ನು ನಾನು ಸ್ವೀಕರಿಸೆನು.

ಶುಷ್ಕಂ ಪರ್ಯುಷಿತಂ ವಾऽಪಿ ನಿರ್ಮಾಲ್ಯಂ ಚ ತ್ರಿವಾಸರೇ ।
ಪ್ರಕ್ಷಾಲಯಿತ್ವಾ ತುಲಸೀಂ ಪೂಜಾರ್ಹಾಂ ಸತತಂ ಹರೇಃ ॥ - ಗರುಡಪುರಾಣ

ತುಲಸಿಯು ಒಣಗಿರಲಿ, ನಿರ್ಮಾಲ್ಯವಾಗಿರಲಿ, ಅದನ್ನು ತೊಳೆದು ಪುನಃ ಶ್ರೀಹರಿಯ ಪೂಜೆಗೆ ಉಪಯೋಗಿಸಬಹುದು.

ತುಲಸ್ಯಾಂ ಬಿಲ್ವಪತ್ರೇಷು ಸರ್ವೇಷು ಜಲಜೇಷು ಚ ।
ನ ಪರ್ಯುಷಿತದೋಷೋऽಸ್ತಿ ಮಾಲಾಕಾರಗೃಹೇಷು ಚ ॥
ಪಲಾಶಂ ದಿನಮೇಕಂ ಚ ಪಂಕಜಂ ಚ ದಿನತ್ರಯಮ್ ।
ಪಂಚಾಹಂ ಬಿಲ್ವಪತ್ರಂ ಚ ದಶಾಹಂ ತುಲಸೀದಲಮ್ ॥ - ಸ್ಕಂದಪುರಾಣ

ತುಲಸಿ, ಬಿಲ್ವಪತ್ರೆ ಹಾಗೂ ಕಮಲಗಳಿಗೆ ಹಳತು ಎಂಬ ದೋಷ ತಟ್ಟುವುದಿಲ್ಲ; ಅದರಂತೆ ಹೂವಾಡಿಗರ ಮನೆಯಲ್ಲಿನ ಪುಷ್ಪಗಳು ಹಳತು ಎನ್ನಿಸವು. ಮುತ್ತುಗವು ಒಂದು ದಿನ ಶುದ್ಧ; ಕಮಲವು ಮೂರು ದಿನಗಳ ಕಾಲ ಶುಚಿ; ಬಿಲ್ವಪತ್ರೆ ಐದು ದಿನಗಳ ವರೆಗೆ ಪವಿತ್ರ; ಆದರೆ ತುಲಸಿದಳವು ಹತ್ತುದಿನಗಳ ಕಾಲ ಹಳತು ಎನ್ನಿಸದು.

ಉತ್ಪಲಂ ಸರ್ವಪುಷ್ಪೈಶ್ಚ ಸರ್ವಪತ್ರೈಶ್ಚ ಯತ್ಫಲಮ್ ।
ತುಲಸ್ಯಾಸ್ತದ್ದಲಾರ್ಧೇನ ಪುಣ್ಯಂ ಸ್ಯಾದ್ವಿಷ್ಣುಪೂಜನೇ ॥
-ವಿಷ್ಣುಧರ್ಮೋತ್ತರಪುರಾಣ

ಕಮಲ, ಇತರ ಸಕಲ ಪುಷ್ಪಗಳು ಹಾಗೂ ಸಕಲ ಪತ್ರಗಳು ಇವುಗಳಿಂದ ಪೂಜಿಸಿದಾಗ ಬರುವ ಫಲವು ತುಲಸಿಯ ಅರ್ಧದಳದಿಂದಲೇ ಲಭಿಸುವುದು.

ಅರ್ಚಯಂತಿ ಹರೇರ್ಬಿಂಬಂ ತುಲಸ್ಯಾಃ ಕೋಮಲೈರ್ದಲೈಃ ।
ಸುಮಂಜರೀದಲೈರ್ಯುಕ್ತತುಲಸೀಸಂಭವೈಸ್ತಥಾ ॥
- ವಿಷ್ಣುಧರ್ಮೋತ್ತರಪುರಾಣ

ಶ್ರೀಹರಿಯ ಪ್ರತಿಮೆಯನ್ನು ತುಲಸಿಯ ಕೋಮಲವಾದ ದಳಗಳಿಂದಲೂ, ಮಂಜರಿಯುಕ್ತವಾದ ದಳಗಳಿಂದಲೂ ಪೂಜಿಸಬೇಕು.

**ನಿತ್ಯಮಭ್ಯರ್ಚಯೇದ್ಯೋ ವೈ ತುಲಸ್ಯಾ ಮಾಂ ರಮೇಶ್ವರಮ್ ।**
**ಮಹಾಪಾಪಾನಿ ನಶ್ಯಂತಿ ಕಿಂ ಪುನಶ್ಚೋಪಪಾತಕಮ್ ॥**

-ವಿಷ್ಣುಧರ್ಮೋತ್ತರಪುರಾಣ

ಯಾವನು ಪ್ರತಿನಿತ್ಯ ರಮಾಪತಿಯಾದ ನನ್ನನ್ನು ತುಲಸಿಯಿಂದ ಪೂಜಿಸುವನೋ ಅವನ ಮಹಾಪಾತಕಗಳು ನಾಶಹೊಂದುವವು. ಇನ್ನು ಉಪಪಾತಕಗಳ ಬಗ್ಗೆ ಹೇಳುವುದೇನಿದೆ?

**ತುಲಸ್ಯಾ ಕುರುತೇ ಯಸ್ತು ಶಾಲಗ್ರಮಶಿಲಾರ್ಚನಮ್ ।**
**ದ್ವಾತ್ರಿಂಶದಪರಾಧಾಂಶ್ಚ ಕ್ಷಮತೇ ತಸ್ಯ ಕೇಶವಃ ।** -ವಿಷ್ಣುಧರ್ಮೋತ್ತರಪುರಾಣ

ಸಾಲಿಗ್ರಾಮ ಶಿಲೆಯ ಪೂಜೆಯನ್ನು ಯಾವನು ತುಲಸಿಯಿಂದ ಮಾಡುವನೋ ಅವನ ೩೨ ಅಪರಾಧಗಳನ್ನು ಕೇಶವನು ಮನ್ನಿಸುವನು.

**ಅಕೃಷ್ಣಾ ಅಥವಾ ಕೃಷ್ಣಾ ತುಲಸೀ ಮಮ ವಲ್ಲಭಾ ।**
**ಸಿತಾ ವಾಽಪ್ಯಸಿತಾ ವಾಽಪಿ ದ್ವಾದಶೀ ವಲ್ಲಭಾ ಯಥಾ ॥**

- ಸ್ಕಂದಪುರಾಣ (೨/೫/೮/೧೪)

ಬಿಳಿಯೋ, ಕಪ್ಪೋ ತುಲಸಿ ಎಂದರೆ ನನಗೆ ಪ್ರಿಯ; ಶುಕ್ಲಪಕ್ಷವೋ, ಕೃಷ್ಣಪಕ್ಷವೋ ದ್ವಾದಶಿಯು ಹೇಗೆ ಪ್ರಿಯವೋ ಹಾಗೆ.

**ತುಲಸೀಮಂಜರೀ ಗ್ರಾಹ್ಯಾ ತದಭಾವೇ ತು ಪಲ್ಲವಮ್ ।**
**ತದಭಾವೇ ತು ಪತ್ರಂ ಸ್ಯಾತ್ ಪತ್ರಾಭಾವೇ ತು ಕಾಷ್ಠಕಮ್ ॥**

**ತದಭಾವೇ ತು ಮೂಲಂ ಸ್ಯಾತ್ ಮೂಲಾಭಾವೇ ತು ಮೃತ್ತಿಕಾ ।**
**ಮೃತ್ತಿಕಾಯಾ ಅಭಾವೇ ತು ತುಲಸೀಶಬ್ದ ಉಚ್ಯತೇ ॥** - ಸ್ಕಂದಪುರಾಣ

ತುಲಸಿಯ ಮಂಜರಿಯು ಶ್ರೇಷ್ಠ; ಅದಿಲ್ಲದಿದ್ದಲ್ಲಿ ಅದರ ಪಲ್ಲವವು ಶ್ರೇಷ್ಠ; ಅದೂ ಇಲ್ಲದಾಗ ಅದರ ಎಲೆಯು ಶ್ರೇಷ್ಠ. ಅದೂ ಲಭಿಸದಾಗ ಅದರ ಕಾಷ್ಠವೂ ಗ್ರಾಹ್ಯ. ಕಾಷ್ಠವು ಲಭಿಸದಿದ್ದಾಗ ಅದರ ಬೇರೂ ಶ್ರೇಷ್ಠ ; ಬೇರೂ ಇಲ್ಲವಾದಾಗ ಮೃತ್ತಿಕೆಯು ಗ್ರಾಹ್ಯ; ಮೃತ್ತಿಕೆಯೂ ಲಭಿಸದಿದ್ದಾಗ ತುಲಸಿ ಎಂಬ ಹೆಸರನ್ನಾದರೂ ಉಚ್ಚರಿಸಬೇಕು.

★★★

# ತುಲಸೀ ಸೇವನೆಯ ಫಲ

ಹರೇಃ ಪ್ರಿಯಕರಂ ಯಚ್ಚ ತನ್ಮೇ ಪ್ರಿಯತರಂ ಭವೇತ್ ।
ಸರ್ವೇಷಾಮಪಿ ದೇವಾನಾಂ ದೇವೀನಾಂ ಚ ಸಮಂತತಃ ॥
ಶ್ರಾದ್ಧೇಷು ಯಜ್ಞಕಾರ್ಯೇಷು ಪರ್ಣಮೇಕಂ ಷಡಾನನ ।
ತಸ್ಮಾತ್ ಸರ್ವಪ್ರಯತ್ನೇನ ತುಲಸೀಸೇವನಂ ಕುರು ।

– ಪದ್ಮಪುರಾಣ, ಸೃಷ್ಟಿಖಂಡ (೫/೫೬/೧೩೪,೧೩೫)

ಶ್ರಾದ್ಧಗಳಲ್ಲಿ, ಯಜ್ಞಕಾರ್ಯಗಳಲ್ಲಿ ತುಲಸಿಯ ಒಂದು ಎಲೆಯು ಸಹ ಶ್ರೀಹರಿಗೆ ಪ್ರಿಯಕರವಾದದು; ಇತರ ಸಕಲ ದೇವತೆಗಳಿಗೂ, ಸಕಲ ದೇವತಾಸ್ತ್ರೀಯರಿಗೂ ಎಲ್ಲ ರೀತಿಯಲ್ಲೂ ಹೆಚ್ಚು ಪ್ರಿಯವೆನ್ನಿಸುವುದು; ಆದ್ದರಿಂದ ಸರ್ವಪ್ರಯತ್ನದಿಂದ ತುಲಸೀ ಸೇವನೆಯನ್ನು ಮಾಡು.

ಯುಕ್ತೋ ಯದಿ ಮಹಾಪಾಪೈಃ ಸುಕೃತಂ ನಾರ್ಜಿತಂ ಕ್ವಚಿತ್ ।
ತಥಾಽಪಿ ಗೀಯತೇ ಮೋಕ್ಷೋ ತುಲಸೀ ಭಕ್ಷಿತಾ ಯದಿ ॥

– ವಿಷ್ಣುಧರ್ಮೋತ್ತರ

ಮಹಾಪಾಪಾಗಳಿಂದ ಕೂಡಿದವನಾಗಿದ್ದು ಯಾವರೀತಿಯಲ್ಲೂ ಪುಣ್ಯಸಂಪಾದನೆ ಮಾಡದವನಿಗೂ ತುಲಸಿಭಕ್ಷಣೆಯನ್ನು ಮಾಡಿದಲ್ಲಿ ಮೋಕ್ಷವು ಲಭಿಸುವುದು ಎನ್ನಲಾಗಿದೆ.

ಕಿಂ ಕರಿಷ್ಯತಿ ಸುಸ್ನಾತಃ ಗಂಗಾಯಾಂ ಭೂಸುರೋತ್ತಮಃ ।
ಯೋ ವಹೇಚ್ಛಿರಸಾ ನಿತ್ಯಂ ತುಲಸೀಂ ವಿಷ್ಣುಸೇವಿತಾಮ್ ॥

– ವಿಷ್ಣುಧರ್ಮೋತ್ತರ

ಪ್ರತಿನಿತ್ಯವೂ ಶ್ರೀವಿಷ್ಣುವಿಗೆ ಸಮರ್ಪಿಸಿದ ತುಲಸಿಯನ್ನು ಶಿರಸಾ ಧರಿಸುವ ದ್ವಿಜಶ್ರೇಷ್ಠನು ಗಂಗೆಯಲ್ಲಿ ಎಂತಹ ಸ್ನಾನವನ್ನು ಸಹ ಮಾಡಿ ಏನಾಗಬೇಕಿದೆ?

ಶತ್ರುಘ್ನಂ ಚ ಸುಪುಣ್ಯಂ ಚ ಶ್ರೀಕರಂ ಚಾಘನಾಶನಮ್ ।
ಕೃತ್ವಾ ಧರ್ಮಮವಾಪ್ನೋತಿ ಶಿರಸಾ ತುಲಸೀದಲಮ್ ॥ – ವಿಷ್ಣುಧರ್ಮೋತ್ತರ

ತುಲಸಿಯನ್ನು ಶಿರಸಾ ಧರಿಸುವುದು ಶತ್ರುನಾಶಕ, ಮಹಾಪುಣ್ಯಕರ, ಸಂಪತ್ಕರ ಪಾಪನಾಶಕವಾದ ಮಹತ್ಕಾರ್ಯ.

ಆಹುತಿಂ ತುಲಸೀಹೀನಾಂ ಯೋ ದದ್ಯಾತ್ ಪ್ರಾಣಪಂಚಕೇ ।
ತದನ್ನಂ ಮಾಂಸತುಲ್ಯಂ ಸ್ಯಾತ್ ತಜ್ಜಲಂ ಸುರಯಾ ಸಮಮ್ ॥

– ವಿಷ್ಣುಧರ್ಮೋತ್ತರ

ಪಂಚಪ್ರಾಣಾಹುತಿಗಳನ್ನು ತುಲಸಿಯಿಲ್ಲದೆ ಯಾವನು ನೀಡುವನೋ ಅಂತಹ ಅನ್ನವು ಮಾಂಸಕ್ಕೆ ಸಮಾನ. ಕುಡಿಯುವ ನೀರು ಮದ್ಯಕ್ಕೆ ಸಮಾನ.

**ಮಹಾಪಾತಕಯುಕ್ತೋಽಪಿ ತುಲಸೀಪತ್ರಭಕ್ಷಣಾತ್ ।**
**ಸದ್ಯ ಏವ ವಿಶುದ್ಧಾತ್ಮಾ ವಿಷ್ಣೋಃ ಸಾಯುಜ್ಯಮಾಪ್ನುಯಾತ್ ॥**

– ವಿಷ್ಣುಧರ್ಮೋತ್ತರ

ಮಹಾಪಾತಕದಿಂದ ಕೂಡಿದವನಾಗಿದ್ದರೂ ತುಲಸಿಯ ಎಲೆಯನ್ನು ಭಕ್ಷಿಸಿದಲ್ಲಿ ಕೂಡಲೇ ಶುದ್ಧಾಂತಃಕರಣದವನಾಗಿ ವಿಷ್ಣುವಿನ ಸಾಯುಜ್ಯವನ್ನು ಪಡೆಯುವನು.

**ತತಸ್ತುಲಸಿಸನ್ನಾಮಕೀರ್ತನಂ ಚಾಭಿವಾದನಮ್ ।**
**ಭಕ್ಷಣಂ ದರ್ಶನಂ ಚೈವ ಸರ್ವಪಾಪಭಯಾಪಹಮ್ ॥**

– ವಿಷ್ಣುಧರ್ಮೋತ್ತರ (೧೪/೭೫)

ತುಲಸಿಯ ನಾಮಸಂಕೀರ್ತನೆ, ನಮಸ್ಕಾರ, ಭಕ್ಷಣ, ದರ್ಶನ – ಇವೆಲ್ಲವೂ ಸಕಲ ಪಾಪಗಳ ಭಯವನ್ನು ನೀಗಿಸುವವು.

**ಗ್ರೀಷ್ಮಕಾಲೇ ದ್ವಿಜಶ್ರೇಷ್ಠ ಸುಗಂಧೈಃ ಶೀತಲೈರ್ಜಲೈಃ ।**
**ತುಲಸೀಸೇಚನಂ ಕುರ್ಯಾನ್ನರೋ ನಿರ್ವಾಣಮಾಪ್ನುಯಾತ್ ॥**

– ವಿಷ್ಣುಧರ್ಮೋತ್ತರ

ಬೇಸಿಗೆ ಕಾಲದಲ್ಲಿ ಪರಿಮಳಭರಿತವಾದ ತಂಪಾದ ನೀರನ್ನು ಯಾವ ಮನುಷ್ಯನು ತುಲಸಿಗೆ ಎರೆಯುವನೋ ಅವನು ಮುಕ್ತಿಯನ್ನು ಹೊಂದುವನು.

**ಚಂದ್ರಾತಪಂ ವಾ ಛತ್ರಂ ವಾ ತುಲಸ್ಯೈ ಯಸ್ತು ಯಚ್ಛತಿ ।**
**ವಿಶೇಷತೋ ನಿದಾಘೇಷು ಸ ಮುಕ್ತಃ ಸರ್ವಪಾತಕೈಃ ॥** – ವಿಷ್ಣುಧರ್ಮೋತ್ತರ

ಚಂದ್ರನ ಬೆಳದಿಂಗಳನ್ನಾಗಲಿ, ಛತ್ರವನ್ನಾಗಲಿ ಯಾವನು ವಿಶೇಷವಾಗಿ ಬೇಸಿಗೆಕಾಲದಲ್ಲಿ ತುಲಸಿಗೆ ಸಮರ್ಪಿಸುವನೋ ಅವನು ಸರ್ವಪಾತಕಗಳಿಂದಲೂ ಮುಕ್ತನಾಗುವನು.

★★★

# ತುಲಸೀಕಾನನದ ಮಹಿಮೆ

ಕಾನನ ಎಂದರೆ ಮರಗಳ ಸಮೂಹ. ತೋಟ ಎಂಬ ಅರ್ಥದಲ್ಲಿ ಇದು ಹೆಚ್ಚು ಬಳಕೆಯಲ್ಲಿದೆ. ತುಲಸಿಯು ಗುಂಪು ಗುಂಪಾಗಿ ಬೆಳೆದ ಸ್ಥಳ ತುಲಸಿಯ ಕಾನನ ಎನ್ನಿಸುವುದು.

ತುಲಸಿಯ ದಳ, ಎಲೆ, ಬೇರು, ಮೃತ್ತಿಕೆ, ಅದರ ಮೇಲಿಂದ ಬೀಸಿ ಬರುವ ಗಾಳಿ, ಮೊದಲಾಗಿ ಪ್ರತಿಯೊಂದಕ್ಕೂ ಮಹತ್ತ್ವವಿರುವಂತೆ ತುಲಸಿಯ ಗಿಡಗಳನ್ನು ಒಟ್ಟಾಗಿ ಬೆಳೆಸುವುದು, ನೀರೆರೆದು ಪೋಷಿಸುವುದು ಸಹ ಅತ್ಯಂತ ತಾರಕ. ಒಂದೆರಡು ತುಲಸಿಗಿಡಗಳಿದ್ದಲ್ಲಿ ನಿಯಮಿತ ಸಂಖ್ಯೆಯ ದಳಗಳನ್ನುಮಾತ್ರ ಪೂಜೆಗೆ ಉಪಯೋಗಿಸಲು ಸಾಧ್ಯ. ಆದರೆ, ತುಲಸಿಯ ಕಾನನವೇ ಇದ್ದಲ್ಲಿ ಲಕ್ಷ ಕೋಟಿ ಸಂಖ್ಯೆಯಲ್ಲಿ ತುಲಸಿಯಿಂದ ಅರ್ಚನೆಯು ಸಾಧ್ಯವಾಗುವುದು. ಈ ಹಿನ್ನೆಲೆಯಲ್ಲಿ ತುಲಸಿಯ ಕಾನನದ ಹಿರಿಮೆ ಅರ್ಥವಾಗುವಂತಹುದು.

ತುಲಸೀದ್ರುಮರೂಪಸ್ತು ಭಗವಾನ್ ಪುರುಷೋತ್ತಮಃ ।
ಸರ್ವಲೋಕಪರಿತ್ರಾತಾ ವಿಶ್ವಾತ್ಮಾ ವಿಶ್ವಪಾಲಕಃ ॥

ನಿತ್ಯಂ ಸನ್ನಿಹಿತೋ ವಿಷ್ಣುಃ ಸಸ್ಪೃಹಸ್ತುಲಸೀವನೇ ।
ಅಪಿ ಮೇ ಪತ್ರಮೇಕಂ ವಾ ಕಶ್ಚಿದ್ಧನ್ಯೋಽರ್ಪಯೇದಿತಿ ॥

– ಪದ್ಮಪುರಾಣ (೧೫/೨೦)

ತುಲಸಿವೃಕ್ಷದ ರೂಪದಲ್ಲಿ ಭಗವಂತನಾದ ಪುರುಷೋತ್ತಮನೇ ಇರುವನು. ಸರ್ವಲೋಕಗಳ ಪರಿರಕ್ಷಕನೂ, ವಿಶ್ವತಃ ಸ್ವಾಮಿಯೂ, ವಿಶ್ವಪಾಲಕನೂ ಆದ ಮಹಾವಿಷ್ಣುವು ತುಲಸೀವನದಲ್ಲಿ ಸದಾ ಸನ್ನಿಹಿತನಾಗಿರುವನು. ಅದರಲ್ಲಿನ ಒಂದು ಪತ್ರವನ್ನಾದರೂ ಭಕ್ತನು ತನಗೆ ಸಮರ್ಪಿಸುವನು ಎಂದು ಪ್ರೀತಿಯಿಂದ ನಿರೀಕ್ಷಿಸುವನು.

ತುಲಸೀಕಾನನಂ ಯಸ್ತು ಕರೋತಿ ದ್ವಿಜಸತ್ತಮ ।
ದ್ವಾದಶಾದಿತ್ಯಸಂಕಾಶೇ ವಿಮಾನೇ ದಿವಿ ಮೋದತೇ ॥
ತತೋಽತೀವ ಪ್ರಿಯತರಾ ತುಲಸೀ ಜಗತೀಪತೇಃ ।
ಸರ್ವಲೋಕೇಷು ವಿಪ್ರೇಂದ್ರ ಪೂಜ್ಯಾತ್ ಪೂಜ್ಯತರಾ ಚ ಸಾ ॥

– ಪದ್ಮಪುರಾಣ (೧೪/೧೪, ೧೫/೫೧)

ತುಲಸೀವನವನ್ನು ನಿರ್ಮಾಣಮಾಡುವವನು ೧೨ ಸೂರ್ಯರಂತೆ ಹೊಳೆಯುವ ವಿಮಾನದಲ್ಲಿ ಸ್ವರ್ಗದಲ್ಲಿ ನಲಿಯುವನು. ಆದ್ದರಿಂದ ಜಗನ್ನಾಥನಾದ ಶ್ರೀಹರಿಗೆ ತುಲಸಿಯು ಅತ್ಯಂತ ಪ್ರಿಯವಾದುದು. ಸಕಲ ಲೋಕಗಳಲ್ಲೂ ಸಹ ಪೂಜ್ಯವಸ್ತುಗಳಲ್ಲೂ ಹೆಚ್ಚು ಪೂಜ್ಯ ಎನ್ನಿಸಿರುವ ಹಿರಿಮೆ ತುಲಸಿಯದು.

[೬]ತುಲಸೀಕಾನನಂ ಚೈವ ಗೃಹೇ ಯಸ್ಯಾವತಿಷ್ಠತೇ ।
ತದ್ಗೃಹಂ ತೀರ್ಥಭೂತಂ ಹಿ ನಾಯಾಂತಿ ಯಮಕಿಂಕರಾಃ ॥

– ಪದ್ಮಪುರಾಣ, ಉತ್ತರಖಂಡ (೧೫/೨೭)

೬ ಸ್ಕಂದಪುರಾಣ (೨/೪/೮/೧೩)

ಯಾರ ಮನೆಯಲ್ಲಿ ತುಲಸಿಯ ವನವು ನಿರ್ಮಿತವಾಗಿರುವುದೋ ಆ ಮನೆ ಅತ್ಯಂತ ಪವಿತ್ರವಾದುದು. ಅಲ್ಲಿಗೆ ಯಮದೂತರು ಆಗಮಿಸರು.

**ತುಲಸೀಕಾನನೇ ಯಸ್ತು ಮುಹೂರ್ತಮಪಿ ವಿಶ್ರಮೇತ್ ।**
**ಕೋಟಿಜನ್ಮಶತಾತ್ ಪಾಪಾನ್ಮುಚ್ಯತೇ ನಾತ್ರ ಸಂಶಯಃ ॥** - ಸ್ಕಂದಪುರಾಣ

ತುಲಸಿವನದಲ್ಲಿ ಒಂದು ಮುಹೂರ್ತಕಾಲವಾದರೂ ವಿಶ್ರಮಿಸಿದರೆ ಕೋಟಿ ಜನ್ಮಗಳ ಪಾಪದಿಂದ ಬಿಡುಗಡೆ ಲಭಿಸುವುದು; ಈ ಬಗ್ಗೆ ಸಂಶಯವಿಲ್ಲ.

**ತುಲಸೀಕಾನನಂ ಯತ್ರ ತತ್ರ ತಿಷ್ಠತಿ ಕೇಶವಃ ।**
**ತಸ್ಯಾಂ ತು ಪೂಜಿತಾಯಾಂ ತು ಪೂಜಿತೋ ಹರಿರೇವ ಚ ॥**

- ಪದ್ಮಪುರಾಣ (೧೫/೫೨)

ತುಲಸಿಯ ವನವು ಎಲ್ಲಿರುವುದೋ ಕೇಶವನಾದ ಶ್ರೀಹರಿಯು ನೆಲೆಸಿರುವನು. ಅದನ್ನು ಪೂಜಿಸಿದರೆ ಸ್ವತಃ ಶ್ರೀಹರಿಯೇ ಪೂಜಿತನಾಗುವನು.

**ಸರ್ವಪಾಪಹರಂ ಪುಣ್ಯಂ ಕಾಮದಂ ತುಲಸೀವನಮ್ ।**
**ರೋಪಯಂತಿ ನರಶ್ರೇಷ್ಠಾಸ್ತೇ ನ ಪಶ್ಯಂತಿ ಭಾಸ್ಕರಿಮ್ ॥**

- ಪದ್ಮ (೬/೧೦೭/೧೦), ಬ್ರಹ್ಮಖಂಡ (೬/೨೨/೩),
ಸ್ಕಂದಪುರಾಣ (೨/೪/೮/೧೪)

ತುಲಸೀವನವು ಸರ್ವಪಾಪವನ್ನು ಪರಿಹರಿಸುವುದು, ಪುಣ್ಯವನ್ನು ನೀಡುವುದು, ಅಭೀಷ್ಟವನ್ನು ಈಡೇರಿಸುವುದು. ಇಂತಹ ತುಲಸೀವನವನ್ನು ನೆಟ್ಟು ಬೆಳೆಸುವವರು ಯಮಲೋಕವನ್ನು ಸರ್ವಥಾ ನೋಡಲಾರರು. (ಭಾಸ್ಕರಿ ಎಂಬುದಕ್ಕೆ ಭಾಸ್ಕರನ ಪುತ್ರ ಎಂದರ್ಥ. ಸೂರ್ಯನ ಪುತ್ರರು ಯಮ ಹಾಗೂ ಶನಿ; ಇದರಿಂದ ತುಲಸೀವನವನ್ನು ನೆಟ್ಟು ಬೆಳೆಸುವವರಿಗೆ ನರಕಪ್ರಾಪ್ತಿಯಾಗಲಿ, ಶನಿದೋಷವಾಗಲಿ ಸರ್ವಥಾ ಒದಗದು ಎಂಬ ವಿಶೇಷಾಂಶ ತಿಳಿಯುವುದು; ಶನಿದೋಷದ ಪರಿಹಾರ ರಾಹು ಮೊದಲಾದ ಇತರ ಗ್ರಹಗಳ ದೋಷಪರಿಹಾರಕ್ಕೆ ಉಪಲಕ್ಷಣ. ಇದರಿಂದ ಗ್ರಹಶಾಂತಿಗೂ ಸಹ ತುಲಸೀವನದ ಪೋಷಣೆ ಅತ್ಯಂತ ಉಪಯುಕ್ತ ಎಂದಾಗುವುದು).

**ನ ಪಶ್ಯಂತಿ ಯಮಂ ವೈಶ್ಯ ತುಲಸೀವನರೋಪಣಾತ್ ।**

- ಪದ್ಮಪುರಾಣ (೬/೨೪೪/೧)

**ತುಲಸ್ಯಾಃ ಕಾನನಂ ವಿಪ್ರ ಸರ್ವಪಾಪಹರಂ ಶುಭಮ್ ।**
**ರೋಪಯಂತಿ ನರಾಃ ಶ್ರೇಷ್ಠಾಸ್ತೇ ನ ಪಶ್ಯಂತಿ ಭಾಸ್ಕರಿಮ್ ।**

- ಪದ್ಮಪುರಾಣ (೩/೨೨/೩)

ತುಲಸಿವನವನ್ನು ನೆಡುವವರು ಯಮನನ್ನು ಕಾಣಲಾರರು; ತುಲಸಿಯ ವನವು ಸರ್ವಪಾಪವನ್ನು ಪರಿಹರಿಸುವ ಮಂಗಳಕಾರ್ಯ. ಆದ್ದರಿಂದ ಶ್ರೇಷ್ಠರಾದವರು ತುಲಸಿಯನ್ನು ಬೆಳೆಸುವರು.

**ಭೂತಲೇ ರೋಪಿತಂ ಯೇನ ಹರ್ಯರ್ಥಂ ತುಲಸೀವನಮ್ ।**
**ಕೃತಂ ಕ್ರತುಶತಂ ತೇನ ವಿಧಿವತ್ ಪ್ರಿಯದಕ್ಷಿಣಮ್ ॥**

– ಪದ್ಮಪುರಾಣ, ಸೃಷ್ಟಿಖಂಡ (೫/೫೮/೧೨೭)

ಯಾವನು ಶ್ರೀಹರಿಯ ಪೂಜೆಗಾಗಿ ಭೂತಳದಲ್ಲಿ ತುಲಸಿವನವನ್ನು ನೆಟ್ಟು ಬೆಳೆಸುವನೋ ಅವನು ಸೂಕ್ತದಕ್ಷಿಣೆಯ ಸಮೇತವಾಗಿ ನೂರು ಯಜ್ಞಗಳನ್ನು ಮಾಡಿದ ಪುಣ್ಯಕ್ಕೆ ಭಾಗಿಯಾಗುವನು.

★★★

# ತುಲಸೀರೋಪಣದ ಮಹತ್ತ್ವ

ಸಾಮಾನ್ಯವಾಗಿ ಫಲಪುಷ್ಪಗಳನ್ನು ನೀಡುವ ಸಸ್ಯಗಳನ್ನು, ವೃಕ್ಷಗಳನ್ನು ನೆಡುವುದು ಪುಣ್ಯಕಾರ್ಯ ಎಂಬುದಾಗಿಯೇ ಶಾಸ್ತ್ರಗಳಲ್ಲಿ ಪರಿಗಣಿತವಾಗಿದೆ. ಹೂವಿನ ಗಿಡಗಳನ್ನು ನೆಡುವುದು ಪೂಜಾಕಾರ್ಯಕ್ಕೆ ಉಪಯುಕ್ತವೆನ್ನಿಸಿದರೆ, ಹಣ್ಣಿನ ಗಿಡಗಳನ್ನು ನೆಡುವುದು ನೈವೇದ್ಯಕಾರ್ಯಕ್ಕೆ ಉಪಯುಕ್ತವೆನ್ನಿಸುವುದು. ಇದರಿಂದಾಗಿ ಅವು ಇಹಪರ ಎರಡಕ್ಕೂ ಶ್ರೇಷ್ಠವೆನ್ನಿಸುವ ಕಾರ್ಯವಾಗಿವೆ. ಆದರೆ ತುಲಸಿಯು ಹೂವಿನ ಗಿಡವೂ ಅಲ್ಲ; ಹಣ್ಣಿನ ಮರವೂ ಅಲ್ಲ ; ಆದರೆ ಪೂಜೆ, ನೈವೇದ್ಯ ಮೊದಲಾದ ಎಲ್ಲವೂ ಸಹ ಅದಿಲ್ಲದೆ ನಡೆಯುವಂತೆಯೇ ಇಲ್ಲ ; ಅದರಿಂದಾಗಿ ತುಲಸಿಯನ್ನು ನೆಡುವುದು ಅತ್ಯಂತ ಪುಣ್ಯಕಾರ್ಯವೆಂಬುದಾಗಿ ವಿಶೇಷವಾಗಿ ಪರಿಗಣಿತವಾಗಿದೆ. ರೋಪಣದ ಮುಖ್ಯ ಉದ್ದೇಶ ಅವುಗಳ ಸಂಖ್ಯೆಯನ್ನು ಹೆಚ್ಚಿಸುವುದು. ತುಲಸಿಯು ಸ್ವಾಭಾವಿಕವಾಗಿಯೇ ಅನಂತ ಫಲ ನೀಡುವಂತಹ ಅಪೂರ್ವ ಸಸ್ಯ. ಅದನ್ನು ಬೆಳೆಸಿದಲ್ಲಿ ತುಲಸಿಯ ಸಂತತಿಯೇ ಅಪಾರವಾಗಿ ಅಭಿವೃದ್ಧಿ ಹೊಂದುವುದು. ಅಲ್ಲದೆ, ತುಲಸಿಯ ಉಪಯೋಗ ಏನಿದ್ದರೂ ಸಹ ಭಗವಂತನ ಸಮರ್ಪಣೆಗೆ ಮಾತ್ರ. ಇತರ ಗಿಡಗಳನ್ನು ಬೆಳೆಸುವುದು ಪೂಜೆ, ನೈವೇದ್ಯಗಳಿಲ್ಲದೆ ಇತರರ ಪಾಲಾಗುವ ಸಂಭವವೇ ಹೆಚ್ಚು. ಆದರೆ, ತುಲಸಿಯ ವಿಷಯ ಹಾಗಲ್ಲ. ಅದನ್ನು ಪ್ರತಿಯೊಬ್ಬರೂ ಸಹ ಪೂಜ್ಯಭಾವನೆಯಿಂದಲೇ ನೋಡುವುದರಿಂದ ಅದು ನೇರವಾಗಿ ಮುಖ್ಯವಾಗಿ ಭಗವಂತನಿಗೆ ತಲುಪುವ ಅಪೂರ್ವ ಸ್ವರೂಪದ ವಿಚಿತ್ರವಾದ ವೃಕ್ಷ. ಅಲ್ಲದೆ, ಇತರ ವೃಕ್ಷಗಳಂತೆ ಇದನ್ನು ಬೆಳೆಸುವಲ್ಲಿ, ಪೋಷಿಸುವಲ್ಲಿ ಹೆಚ್ಚಿನ ಶ್ರಮವೂ ಸಹ ಅಗತ್ಯವಿಲ್ಲ.

ಸಾಮಾನ್ಯ ಪರಿಸರದಲ್ಲಿಯೇ, ಮಿತವಾದ ಸ್ಥಳದಲ್ಲಿಯೇ ಅಪಾರ ಸಂಖ್ಯೆಯಲ್ಲಿ ಬೆಳೆಸುವ ಅವಕಾಶ ಇದಕ್ಕಿರುವುದು. ಸ್ವಲ್ಪ ಶ್ರಮದಲ್ಲಿಯೇ ಅಪಾರ ಪುಣ್ಯವನ್ನು ಗಳಿಸುವಂತಹ ಸದವಕಾಶ ತುಲಸಿ ರೋಪಣದಲ್ಲಿದೆ. ಈ ಹಿನ್ನೆಲೆಯಲ್ಲಿ ತುಲಸಿಯನ್ನು ಬೆಳೆಸುವ ಕಾರ್ಯದ ಮಹತ್ತ್ವವನ್ನು ಅರಿತು, ಸರ್ವರೂ ಸಹ ಇನ್ನೂ ಹೆಚ್ಚಿನ ಶ್ರದ್ಧಾಭಕ್ತಿಗಳಿಂದ ಇದರಲ್ಲಿ ತೊಡಗುವ ಅಗತ್ಯವಿದೆ.

**ಆಮ್ರರೋಪಸಹಸ್ರೇಣ ಪಿಪ್ಪಲಾನಾಂ ಶತೇನ ಚ ।**
**ಯತ್ಫಲಂ ಹಿ ತದೇಕೇನ ತುಲಸೀವಿಟಪೇನ ತು ॥**

– ಪದ್ಮಪುರಾಣ (೬/೨೪೪/೬)

ಸಾವಿರಾರು ಮಾವಿನ ಗಿಡಗಳನ್ನು, ನೂರಾರು ಪಿಪ್ಪಲ ವೃಕ್ಷಗಳನ್ನು ನೆಡುವ ಫಲ ಒಂದೇ ಒಂದು ತುಲಸೀಗಿಡವನ್ನು ನೆಡುವುದರಿಂದ ಲಭಿಸುವುದು.

**ತುಲಸೀಂ ಸ್ಥಾಪಯೇನ್ಮರ್ತ್ಯ ಉಚ್ಚಸ್ಥಾನೇ ಪರಿಷ್ಕೃತೇ ।**
**ಅಕ್ಷಯಸ್ವರ್ಗವಾಸೋ ಹಿ ತೇನ ಲಭ್ಯೋ ನ ಸಂಶಯಃ ॥**

– ಬೃಹದ್ಧರ್ಮಪುರಾಣ (೧/೮/೫೩)

ಶುದ್ಧವಾದ ಎತ್ತರದ ಸ್ಥಳದಲ್ಲಿ ತುಲಸಿಯನ್ನು ನೆಡಬೇಕು. ಅದರಿಂದ ಅಕ್ಷಯ ಸ್ವರ್ಗವಾಸದ ಫಲವು ಲಭಿಸುವುದರಲ್ಲಿ ಸಂದೇಹವಿಲ್ಲ. (ಇದರಿಂದ ವೃಂದಾವನರೂಪದ ಎತ್ತರ ಪ್ರದೇಶದಲ್ಲಿ ತುಲಸಿಯನ್ನು ಬೆಳೆಯುವ ಔಚಿತ್ಯ ಅರ್ಥವತ್ತಾಗುವುದು).

**ತುಲಸೀಸ್ಥಾನಸಂಕಲ್ಪಮಾತ್ರಾದೇವ ಚ ಮಾನವಃ ।**
**ಜನ್ಮತ್ರಯಾರ್ಜಿತೈಃ ಪಾಪೈಸ್ತತ್ಕ್ಷಣಾದೇವ ಮುಚ್ಯತೇ ॥** – ಪದ್ಮಪುರಾಣ

ತುಲಸಿಯನ್ನು ನೆಡುವ ಸಂಕಲ್ಪಮಾತ್ರದಿಂದಲೇ ಮಾನವನು ತನ್ನ ಹಿಂದಿನ ಮೂರು ಜನ್ಮಗಳಲ್ಲಿ ಮಾಡಿದ ಪಾಪಗಳಿಂದ ಕೂಡಲೇ ಬಿಡುಗಡೆಯನ್ನು ಹೊಂದುವನು.

**ಪಾರ್ವಣಾವಸರೇ ಯಸ್ತು ಶ್ರಾವಣೇ ಚಾಥ ರೋಪಯೇತ್ ।**
**ಸಂಕ್ರಾಂತಿದಿವಸೇ ಚೈವ ತುಲಸೀ ಚಾತಿಪುಣ್ಯದಾ ॥**

– ಪದ್ಮಪುರಾಣ (೬/೨೪/೪೨)

ಶ್ರಾದ್ಧದ ದಿನ, ಶ್ರಾವಣಮಾಸ, ಸಂಕ್ರಾಂತಿಯ ಪರ್ವಕಾಲ – ಇಂತಹ ದಿವಸಗಳಲ್ಲಿ ತುಲಸಿಯನ್ನು ನೆಡುವುದು ಅತ್ಯಂತ ಪುಣ್ಯಕರವಾದುದು.

**ತಾವದ್ವರ್ಷಸಹಸ್ರಾಣಿ ಯಾವದ್ಬೀಜದಲಾನಿ ಚ ।**
**ವಸಂತಿ ದೇವಲೋಕೇ ತೇ ತುಲಸೀಂ ರೋಪಯಂತಿ ಯೇ ॥**

– ಪದ್ಮಪುರಾಣ (೬/೨೪/೩)

ತುಲಸಿಯನ್ನು ನೆಡುವ ಜನರು ಆ ತುಲಸಿಯಲ್ಲಿ ಎಷ್ಟು ಸಂಖ್ಯೆಯ ಬೀಜಗಳು, ದಳಗಳು ಇರುವವೋ ಅಷ್ಟು ಸಾವಿರ ವರ್ಷಗಳ ಕಾಲ ದೇವಲೋಕದಲ್ಲಿ ನೆಲೆಸುವರು.

**ರೋಪಿತಾ ತುಲಸೀ ಯಾವತ್ ಕುರುತೇ ಮೂಲವಿಸ್ತರಮ್ ।**
**ತಾವದ್ಯುಗಸಹಸ್ರಾಣಿ ಬ್ರಹ್ಮಲೋಕೇ ಮಹೀಯತೇ ॥**

– ಸ್ಕಂದಪುರಾಣ, ವೈಷ್ಣವಖಂಡ ೨, ಕಾರ್ತಿಕಮಾಹಾತ್ಮ್ಯ ೪, (೮/೧೦)

ನೆಟ್ಟ ತುಲಸಿಯು ಎಲ್ಲಿಯವರೆಗೂ ತನ್ನ ಬೇರನ್ನು ಪಸರಿಸುವುದೋ ಅಷ್ಟು ಸಾವಿರ ಯುಗಗಳ ಕಾಲ ಬ್ರಹ್ಮಲೋಕದಲ್ಲಿ ಹಾಗೆ ಅದನ್ನು ನೆಟ್ಟವನು ಆದರಿಸಲ್ಪಡುವನು.

**ರೋಪಿತಾ ತುಲಸೀ ಯಾವದ್ವರ್ಧತೇ ವಸುಧಾತಲೇ ।**
**ತಾವತ್ಕಲ್ಪಸಹಸ್ರಾಣಿ ವಿಷ್ಣುಲೋಕೇ ಮಹೀಯತೇ ॥**

– ಪದ್ಮಪುರಾಣ, ಉತ್ತರಖಂಡ (೬/೨೪೪/೧೩)

ನೆಟ್ಟ ತುಲಸಿಯು ಭೂತಳದಲ್ಲಿ ಎಲ್ಲಿಯವರೆಗೂ ಬೆಳೆಯುವುದೋ ಅಷ್ಟು ಸಾವಿರಕಲ್ಪಗಳ ಕಾಲ ಅದನ್ನು ನೆಟ್ಟವನು ವಿಷ್ಣುಲೋಕದಲ್ಲಿ ಆದರಿಸಲ್ಪಡುವನು.

**ರೋಪಿತಾ ತುಲಸೀ ಯಾವತ್ ಕುರುತೇ ಮೂಲವಿಸ್ತರಮ್ ।**
**ತಾವದ್ವರ್ಷಸಹಸ್ರಾಣಿ ವಿಷ್ಣುಲೋಕೇ ಮಹೀಯತೇ ॥** – ಪದ್ಮಪುರಾಣ

ನೆಟ್ಟ ತುಲಸಿಯು ಎಲ್ಲಿಯವರೆಗೂ ತನ್ನ ಬೇರನ್ನು ಪಸರಿಸುವುದೋ ಅಷ್ಟು ಸಾವಿರ ವರ್ಷಗಳ ಕಾಲ ವಿಷ್ಣುಲೋಕದಲ್ಲಿ ಹಾಗೆ ಅದನ್ನು ನೆಟ್ಟವನು ಆದರಿಸಲ್ಪಡುವನು.

**ಸ್ವಗೃಹೇ ರೋಪಿತಾ ಚೈವ ತುಲಸೀ ಪಾಪನಾಶಿನೀ ।**
**ದರ್ಶನಾದ್ ಬ್ರಹ್ಮಹತ್ಯಾಽಪಿ ನಶ್ಯತೇ ನಾತ್ರ ಸಂಶಯಃ ॥**

– ಪದ್ಮಪುರಾಣ (೬/೧೬/೧೫೪)

ತನ್ನ ಮನೆಯಲ್ಲಿ ನೆಟ್ಟು ಬೆಳೆಸಿದ ತುಲಸಿಯು ಸಹ ಪಾಪವನ್ನು ಪರಿಹರಿಸುವುದು. ಅದರ ದರ್ಶನದಿಂದಲೂ ಬ್ರಹ್ಮಹತ್ಯೆಯು ನಾಶವಾಗುವುದು. ಈ ಬಗ್ಗೆ ಸಂಶಯಬೇಡ.

**ವಿಷ್ಣುಪೂಜನಸಂಸಕ್ತಸ್ತುಲಸೀಂ ಯಸ್ತು ರೋಪಯೇತ್ ।**
**ಯುಗಾಯುತಂ ದಶೈಕಂ ಚ ರೋಪಕೋ ರಮತೇ ದಿವಿ ॥**

– ಪದ್ಮಪುರಾಣ, ಉತ್ತರಖಂಡ (೬/೨೪೪/೧೦)

ವಿಷ್ಣುಪೂಜೆಯಲ್ಲಿ ತೊಡಗಿದವನು ತುಲಸಿಯನ್ನು ನೆಟ್ಟಲ್ಲಿ, ೨೧ ಸಾವಿರ ವರ್ಷಗಳ ಕಾಲ ದೇವಲೋಕದಲ್ಲಿ ವಿಹರಿಸುವನು.

**[೭]ಕೇಶವಾರ್ಥಂ ಕಲೌ ಯೇ ಚ ರೋಪಯಂತೀಹ ಭೂತಲೇ ।**
**ಕಿಂ ಕರಿಷ್ಯತಿ ಸಂರುಷ್ಟೋ ಯಮೋಽಪಿ ಸಹ ಕಿಂಕರೈಃ ॥**

– ಪದ್ಮಪುರಾಣ, ಸೃಷ್ಟಿಖಂಡ (೫/೫೮/೧೨೬)

೭ ಪದ್ಮಪುರಾಣ, ಸೃಷ್ಟಿಖಂಡ (೫/೫೯/೯)

ಶ್ರೀವಿಷ್ಣುಪ್ರೀತಿಗೆಂದು ಭೂತಳದಲ್ಲಿ ತುಲಸಿಯನ್ನು ನೆಟ್ಟು ಬೆಳೆಸುವವರಿಗೆ ಯಮನಾಗಲಿ, ಯಮನ ದೂತರಾಗಲಿ ಕೋಪಗೊಂಡು ಏನನ್ನು ತಾನೆ ಮಾಡಿಯಾರು?

**ನಂದಂತಿ ಪುರುಷಾಸ್ತಸ್ಯ ಮಾಧವಾರ್ಥೇ ಕ್ಷಿತೌ ತು ಯಃ।**
**ತುಲಸೀಂ ರೋಪಯೇದ್ಧೀರಃ ಸ ಯಾತಿ ಮಾಧವಾಲಯಮ್ ॥**

– ಪದ್ಮಪುರಾಣ, ಸೃಷ್ಟಿಖಂಡ (೫/೫೮/೧೨೬)

ಲಕ್ಷ್ಮೀಪತಿಯಾದ ಶ್ರೀಹರಿಗಾಗಿ ಯಾವನು ತುಲಸಿಯನ್ನು ನೆಡುವನೋ ಅವನ ಬಗ್ಗೆ ಎಲ್ಲರೂ ಅಭಿನಂದಿಸುವರು. ಅಂತಹ ಧೀರನು ವಿಷ್ಣುಮಂದಿರವನ್ನು ಸೇರುವನು.

**ಸರ್ವತ್ರ ತುಲಸೀ ಪುಣ್ಯಾ ಪುಣ್ಯಕ್ಷೇತ್ರೇ ವಿಶೇಷತಃ।**
**ಸನ್ನಿಧೌ ತಸ್ಯ ದೇವಸ್ಯ ರೋಪಣಾತ್ ಪೃಥಿವೀತಲೇ ॥**
**ತೇಷಾಂ ವಿಷ್ಣುಪದಂ ನಿತ್ಯಂ ತುಲಸ್ಯಾ ರೋಪಣೇ ಕೃತೇ ॥**

– ಪದ್ಮಪುರಾಣ (೬/೨೪/೩೩-೩೪)

ತುಲಸಿಯು ಎಲ್ಲ ಸ್ಥಳಗಳಲ್ಲೂ ಪುಣ್ಯಕರವೇ ಆಗಿದೆ. ಪುಣ್ಯಕ್ಷೇತ್ರದಲ್ಲಿ ಇನ್ನೂ ವಿಶೇಷವಾಗಿ ಪುಣ್ಯಕರ. ಶ್ರೀಹರಿಯ ಸನ್ನಿಧಾನದ ಭೂಪ್ರದೇಶದಲ್ಲಿ ನೆಡುವುದಂತು ಇನ್ನಷ್ಟು ಪುಣ್ಯಕರ. ಅವರಿಗೆ ವಿಷ್ಣುಲೋಕವು ಲಭಿಸುವುದು ಅತ್ಯಂತ ನಿಶ್ಚಿತ.

**ಶಿವಾಲಯೇ ವಿಶೇಷೇಣ ರೋಪಯೇತ್ ತುಲಸೀಂ ಯದಿ**
**ಬೀಜಸಂಖ್ಯಾ ವಸೇತ್ ಸ್ವರ್ಗೇ ಪ್ರತ್ಯೇಕಂ ಯುಗಸಂಖ್ಯಯಾ।**
**ಉಮಯಾ ತ್ವಂ ಪುರಾ ದೇವಿ ಶಂಕರಾರ್ಥೇ ಹಿಮಾಲಯೇ**
**ರೋಪಿತಾ ಶತವೃಕ್ಷೇ ತು ತುಲಸೀಂ ಪ್ರಣತೋऽಸ್ಮ್ಯಹಮ್ (ಶಿವಃ) ॥**

– ಪದ್ಮಪುರಾಣ (೬/೨೫/೪೦-೪೧)

ವಿಶೇಷವಾಗಿ ಶಿವನ ದೇವಸ್ಥಾನದಲ್ಲಿ ತುಲಸಿಯನ್ನು ನೆಡುವುದು, ಹೆಚ್ಚು ಪುಣ್ಯಕರ. ಆ ಗಿಡದಲ್ಲಿ ಬೀಜಗಳಿರುವಷ್ಟು ಸಂಖ್ಯೆಯ ಯುಗಗಳಷ್ಟು ಕಾಲ ಸ್ವರ್ಗದಲ್ಲಿ ಪ್ರತ್ಯೇಕವಾಗಿ ಅದನ್ನು ನೆಟ್ಟವನು ನೆಲೆಸುವನು. ಹಿಂದೆ ಹಿಮಾಲಯದಲ್ಲಿ ಶಿವನ ಪ್ರೀತಿಗಾಗಿ ಉಮಾದೇವಿಯು ತುಲಸಿಯನ್ನು ಬೆಳೆಸಿದಳು. ಅಂತಹ ತುಲಸಿಯನ್ನು ನಾನು ವಂದಿಸುವೆನು.

**ತುಲಸ್ಯಾ ರೋಪಣಂ ಲೋಕೇ ಯೇ ಕುರ್ವಂತಿ ಸಮಾಹಿತಾಃ।**
**ನಶ್ಯಂತಿ ತೇಷಾಂ ಪಾಪಾನಿ ಶುಷ್ಕಾಣ್ಯಾರ್ದ್ರಾಣಿ ಚೈವ ತು ॥**

– ಸ್ಕಂದಪುರಾಣ (೮೨/೧)

ಶ್ರದ್ಧೆಯಿಂದ ತುಲಸಿಯನ್ನು ನೆಡುವವರ ಪಾಪಗಳೆಲ್ಲ ಕೂಡಲೇ ನಾಶಹೊಂದುವವು.

**ಯೋ ನರಸ್ತುಲಸೀಸಸ್ಯಂ ಸಂಸ್ಥಾಪ್ಯಾಪಿ ಪ್ರವರ್ಧತೇ ।**
**ಸ ಸಪ್ತಕುಲಸಂಯುಕ್ತೋ ವಿಷ್ಣುಸಾಯುಜ್ಯಮಾಪ್ನುಯಾತ್ ॥**

– ಪದ್ಮಪುರಾಣ (೬/೧೦೭/೭)

ಯಾವ ಮನುಷ್ಯನು ತುಲಸೀಸಸ್ಯವನ್ನು ನೆಟ್ಟು ಬೆಳೆಸುವನೋ ಅವನು ತನ್ನ ಹಿಂದಿನ ಏಳು ಕುಲದವರೊಂದಿಗೆ ಕೂಡಿಕೊಂಡು, ವಿಷ್ಣುಸಾಯುಜ್ಯವನ್ನು ಪಡೆಯುವನು.

**ವಿಷ್ಣುಪೂಜನಸಂಸಕ್ತಃ ತುಲಸೀಂ ಯಸ್ತು ರೋಪಯೇತ್ ।**
**ಸ ರೋಪಕೋ ವಿಷ್ಣುಗೃಹೇ ಮೋದತೇ ದೇವವಚ್ಚಿರಮ್ ॥**

–ಪದ್ಮಪುರಾಣ (೧೫/ ೩೩)

ವಿಷ್ಣುಪೂಜೆಯಲ್ಲಿ ತೊಡಗಿದವನು ತುಲಸಿಯನ್ನು ನೆಟ್ಟಲ್ಲಿ ದೇವತೆಯಂತೆ ಚಿರಕಾಲ ವಿಷ್ಣುಮಂದಿರದಲ್ಲಿ ಆನಂದಿಸುವನು.

**ಆರೋಪ್ಯ ತುಲಸೀದೇವೀಂ ಸಂಪೂಜ್ಯ ತುಲಸೀವನಮ್ ।**
**ವಸಂತಿ ಮೋದಮಾನಾಸ್ತೇ ಯತ್ರ ದೇವಶ್ಚತುರ್ಭುಜಃ ॥**

– ಪದ್ಮಪುರಾಣ (೧೫/೩೬ )

ತುಲಸಿಯನ್ನು ನೆಟ್ಟು, ತುಲಸಿವನವನ್ನು ಪೂಜಿಸಿ ನಲಿಯುವವರು ಚತುರ್ಭುಜನಾದ ಶ್ರೀಹರಿಯು ನೆಲೆಸಿರುವ ಲೋಕದಲ್ಲಿ ನೆಲೆಸುವರು.

**ಶುಭೇ ಪಕ್ಷೇ ಶುಭೇ ವಾರೇ ಶುಭೇ ಋಕ್ಷೇ ಶುಭೋದಯೇ ।**
**ಕೇಶವಾರ್ಥೇ ಶುಭಾಂಶೇ ಚ ರೋಪಯೇತ್ ತುಲಸೀಂ ಮುನೇ ॥**

– ಸ್ಕಂದಪುರಾಣ

ಶುಭಪಕ್ಷದಲ್ಲಿ, ಶುಭವಾರದಲ್ಲಿ, ಶುಭನಕ್ಷತ್ರದಲ್ಲಿ, ಶುಭೋದಯದಲ್ಲಿ ಶುಭಾಂಶದಲ್ಲಿ ಶ್ರೀವಿಷ್ಣುಪೂಜೆಗೆಂದು ತುಲಸಿಯನ್ನು ನೆಡಬೇಕು.

**ಮೂಲೇ ಚ ವೇದಿಕಾಂ ಕುರ್ಯಾದಾಲವಾಲಸಮನ್ವಿತಾಮ್ ।**
**ರೋಪಿತಾ ತುಲಸೀ ಯಾವತ್ ಕುರುತೇ ಮೂಲವಿಸ್ತೃತಿಮ್ ।**
**ತಾವದ್ಯುಗಸಹಸ್ರಾಣಿ ತನೋತಿ ಸುಕೃತಂ ಹರಿಃ ॥** – ಸ್ಕಂದಪುರಾಣ

ನೆಟ್ಟಂತಹ ತುಲಸಿಯು ಎಲ್ಲಿಯವರೆಗೂ ತನ್ನ ಬೇರನ್ನು ಪಸರಿಸುವುದೋ ಅಷ್ಟು ಸಾವಿರ ಯುಗಗಳ ಕಾಲ ಶ್ರೀಹರಿಯು ಅವನಿಗೆ ಪುಣ್ಯವನ್ನು ನೀಡುವನು.

**ಸಹಸ್ರಾಮ್ರಾರೋಪಣತಃ ಪಿಪ್ಪಲಾನಾಂ ಶತೇನ ಚ ।**
**ಯತ್ಫಲಂ ಸ್ಯಾತ್ ತದ್ಧ್ಯೇಕೇನ ತುಲಸೀವಿಟಪೇನ ತು ॥**

**ಕೇಶವಾರ್ಥೇ ಕಲೌ ಯೇ ಚ ರೋಪಯಂತಿ ಹಿ ಭೂತಲೇ।**
**ಕಿಂ ಕರಿಷ್ಯತಿ ತಾನ್ ದೃಷ್ಟ್ವಾ ಯಮೋಽಪಿ ಸಹ ಕಿಂಕರೈಃ॥** – ಸ್ಕಂದಪುರಾಣ

ಸಾವಿರ ಮಾವಿನಮರಗಳನ್ನು ನೆಡುವ ಹಾಗೂ ನೂರು ಪಿಪ್ಪಲ ವೃಕ್ಷಗಳನ್ನು ಬೆಳೆಸುವ ಫಲವು ಒಂದೇ ಒಂದು ತುಲಸೀವೃಕ್ಷವನ್ನು ಬೆಳೆಸುವುದರಿಂದ ಬೆಳೆಸುವುದು.

**ಆರೋಪ್ಯ ತುಲಸೀಂ ವೈಶ್ಯ ಸಂಪೂಜ್ಯ ಸುದಲೈರ್ಹರಿಮ್।**
**ವಸಂತಿ ಮೋದಮಾನಾಸ್ತೇ ಯತ್ರ ದೇವಶ್ಚತುರ್ಭುಜಃ॥**

– ಪದ್ಮಪುರಾಣ (೬/೨೪೪/೧೩)

ತುಲಸಿಯನ್ನು ನೆಟ್ಟು ಅದರ ದಳಗಳಿಂದ ಶ್ರೀಹರಿಯನ್ನು ಪೂಜಿಸುವವರು ಚತುರ್ಭುಜನಾದ ಶ್ರೀಹರಿಯು ನೆಲೆಸಿದ ಸ್ಥಳದಲ್ಲಿ ಆನಂದದಿಂದ ನೆಲೆಸುವರು.

**ರೋಪಿತಾ ಗೋಮತೀತೀರೇ ಸ್ವಯಂ ಕೃಷ್ಣೇನ ಪಾಲಿತಾ।**
**ಜಗದ್ಧಿತಾಯ ತುಲಸೀ ಗೋಪಿನಾಂ ರತಿಹೇತವೇ॥**

– ಪದ್ಮಪುರಾಣ (೫/೫೯/೧೯)

ಸ್ವಯಂ ಶ್ರೀಕೃಷ್ಣನು ಜಗತ್ತಿನ ಕಲ್ಯಾಣಕ್ಕೋಸ್ಕರವೂ, ಗೋಪಿಯರ ಸುಖಕ್ಕೋಸ್ಕರವೂ, ಗೋಮತೀತೀರದಲ್ಲಿ ತುಲಸಿಯನ್ನು ನೆಟ್ಟು ಬೆಳೆಸಿದನು.

**ವೃಂದಾವನೇ ವಿಚರತಾ ಸೇವಿತಾ ವಿಷ್ಣುನಾ ಸ್ವಯಮ್।**
**ಗೋಕುಲಸ್ಯ ಚ ವೃದ್ಧ್ಯರ್ಥಂ ಕಂಸಸ್ಯ ನಿಧನಾಯ ಚ॥**

– ಪದ್ಮಪುರಾಣ (೫/೫೯/೨೦)

ವೃಂದಾವನದಲ್ಲಿ ನೆಲೆಸಿದ ತುಲಸಿಯು ಸ್ವತಃ ವಿಷ್ಣುವಿನಿಂದ ಗೋಕುಲದ ವೃದ್ಧಿಗೋಸ್ಕರವೂ, ಕಂಸನ ಸಂಹಾರಕ್ಕೋಸ್ಕರವೂ ಸೇವಿಸಲ್ಪಟ್ಟಿತು.

**ವಸಿಷ್ಠವಚನಾತ್ಪೂರ್ವಂ ರಾಮೇಣ ಸರಯೂತಟೇ।**
**ರಾಕ್ಷಸಾನಾಂ ವಧಾರ್ಥಾಯ ರೋಪಿತಾ ತ್ವಂ ಜಗತ್ಪ್ರಿಯೇ॥**

– ಪದ್ಮಪುರಾಣ (೫/೫೯/೨೧)

ವಸಿಷ್ಠರ ಮಾತಿನಂತೆ ರಾಕ್ಷಸರ ಸಂಹಾರಕ್ಕೋಸ್ಕರಕ್ಕಾಗಿ ಸರಯೂನದಿಯ ತೀರದಲ್ಲಿ ಶ್ರೀರಾಮನು ತುಲಸಿಯನ್ನು ನೆಟ್ಟನು.

**ಶಂಕರಾರ್ಥಂ ಪುರಾ ದೇವ್ಯಾ ಉಮಯಾ ಚ ಹಿಮಾಲಯೇ।**
**ರೋಪಿತಾ ಭವವೃದ್ಧ್ಯರ್ಥಂ ತುಲಸಿ ತ್ವಾಂ ನಮಾಮ್ಯಹಮ್॥**

– ಪದ್ಮಪುರಾಣ (೫/೫೯/೨೨)

ಹಿಂದೆ ಶಂಕರನಿಗೋಸ್ಕರವಾಗಿ ಹಿಮಾಲಯದಲ್ಲಿ ಉಮಾದೇವಿಯು ಶಿವನ ಕಲ್ಯಾಣಕ್ಕೋಸ್ಕರ ತುಲಸಿಯನ್ನು ನೆಟ್ಟಳು. ಅಂತಹ ತುಲಸಿಯನ್ನು ನಾನು ನಮಸ್ಕರಿಸುವೆನು.

★★★

## ದೇವತೆಗಳಿಂದಲೂ ತುಲಸಿಯ ರೋಪಣ

ಸಾಮಾನ್ಯವಾಗಿ ದೇವತೆಗಳ ಪ್ರೀತ್ಯರ್ಥವಾಗಿ ಸಸ್ಯಗಳನ್ನು ವೃಕ್ಷಗಳನ್ನೂ ಬೆಳೆಸುವುದು ಕಂಡಿದೆ. ಆದರೆ, ತುಲಸಿಯ ರೋಪಣ ವಿಭಿನ್ನವಾದುದು. ಭೂಲೋಕದ ಶ್ರೇಷ್ಠಾತಿಶ್ರೇಷ್ಠ ಜನರಿರಲಿ, ಸ್ವತಃ ದೇವತೆಗಳಂತಹ ಮಹನೀಯರೇ ತುಲಸಿಯನ್ನು ಬೆಳೆಸಿ ಧನ್ಯತೆಯನ್ನು ಕಂಡಿರುವರು ಎಂಬುದು ಪುರಾಣಗಳಲ್ಲಿ ಬಂದಿರುವ ಉಲ್ಲೇಖ. ಸಕಲದೇವತೋತ್ತಮನಾದ ಶ್ರೀಹರಿಗೆ ಅತ್ಯಂತ ಪ್ರಿಯವಾದುದಾದುದರಿಂದಲೇ ಸ್ವತಃ ದೇವತೆಗಳು ಅದರಲ್ಲೂ ಶ್ರೇಷ್ಠ ದೇವತೆಗಳೂ ಸಹ ತುಲಸಿಯನ್ನು ಬೆಳೆಸಿ ಅದನ್ನು ಶ್ರೀಹರಿಯ ಪೂಜೆಗೆ ವಿನಿಯೋಗಿಸುವ ಮೂಲಕ ವಿಶೇಷ ಸಿದ್ಧಿಯನ್ನು ಗಳಿಸುವರು ಎಂಬುದನ್ನು ಇತರ ಎಲ್ಲರಿಗೂ ಸಹ ಆದರ್ಶ-ವೆನ್ನಿಸಬೇಕೆನ್ನಿಸುವಂತಹ ವಿಷಯ.

**ಸರ್ವಾಭಿರ್ದೇವಪತ್ನೀಭಿಃ ರೋಪಿತೇ ನಂದನೇ ವನೇ ।**
**ಸ್ವರ್ಗೇ ತು ಮಂಗಲಾರ್ಥಂ ಹಿ ಸೇವಿತಾ ತ್ವಾಂ ನಮೋಽಸ್ತು ತೇ ॥**

– ಪದ್ಮಪುರಾಣ (೫/೫೯/೧೬,೨೧)

ನಂದನವನದಲ್ಲಿ ಸಕಲ ದೇವಪತ್ನಿಯರೂ ಸಹ ತುಲಸಿಯನ್ನು ನೆಟ್ಟರು. ಸ್ವರ್ಗದಲ್ಲಿ ಮಂಗಳಕ್ಕೋಸ್ಕರವಾಗಿ ಅವಳನ್ನು ಸೇವಿಸಿದರು. ಅಂತಹ ತುಲಸಿಯೇ ನಾನು ನಿನಗೆ ನಮಸ್ಕರಿಸುವೆನು.

**ಯಾಮಾಶ್ರಿತ್ಯ ಗತಾಃ ಸ್ವರ್ಗಮಕ್ಷಯಂ ಮುನಿಸತ್ತಮಾಃ ।**
**ಹಿತಾರ್ಥಂ ಸರ್ವಲೋಕಾನಾಂ ವಿಷ್ಣುನಾ ರೋಪಿತಾ ಪುರಾ ॥**– ಪದ್ಮಪುರಾಣ

ತುಲಸಿಯನ್ನು ಆಶ್ರಯಿಸಿಯೇ ಮುನಿಶ್ರೇಷ್ಠರು ಸ್ವರ್ಗವನ್ನು ಪಡೆದುಕೊಂಡರು. ಸರ್ವಲೋಕಗಳ ಹಿತಕ್ಕೋಸ್ಕರವಾಗಿ ವಿಷ್ಣುವು ಹಿಂದೆ ತುಲಸಿಯನ್ನು ನೆಟ್ಟನು.

**ಶಿವಾಜ್ಞಯಾ ಶಿವಗಣಃ ಪೃಥ್ವೀಮಾಗತ್ಯ ಹರ್ಷಿತಃ ।**
**ರೋಪಯಾಮಾಸ ತದ್ದೇಹಂ ಕಾಲಿಂದೀತಟ ಉತ್ತಮೇ ॥**

– ಬೃಹದ್ಧರ್ಮಪುರಾಣ (೧/೭/೭೦)

ಶಿವನ ಆದೇಶದಂತೆ ಶಿವಗಣವು ಭೂಮಿಗೆ ಆಗಮಿಸಿ, ತುಂಬಾ ಸಂತೋಷದಿಂದ ಉತ್ತಮವಾದ ಯಮುನಾನದಿಯ ತೀರದಲ್ಲಿ ತುಲಸಿಯನ್ನು ನೆಟ್ಟರು.

**ಯತ್ರ ಗೋವರ್ಧನೋ ನಾಮ ಗಿರೀ ರಾಜತಿ ರಾಜಿತಃ।**
**ಅರ್ಧಚಂದ್ರಾಕೃತಿಸ್ತತ್ರ ದೇಶೋ ಯಮುನಯಾ ಕೃತಃ॥**
**ನಾಮ್ನಾ ವೃಂದಾವನೋ ರಮ್ಯಃ ಕೃಷ್ಣಪ್ರೀತಿಸ್ಥಲಂ ಪರಮ್।**
**ತ್ರೈಲೋಕ್ಯಗೋಪನೀಯೋऽಸೌ ದೇಶೋ ವೃಂದಾವನಾಖ್ಯಕಃ॥**
**ಯೋಗಿನಾಂ ಶಿರಸಾಂ ವೇಷ್ಟಂ ಸಹಸ್ರದಲಪಂಕಜಮ್।**
**ರೋಪಯಿತ್ವಾ ಯಯುಃ ಶೈವಾಃ ಕೈಲಾಸಂ ಶ್ವೇತಪರ್ವತಮ್॥**

– ಬೃಹದ್ಧರ್ಮಪುರಾಣ (೧/೭/೭೧-೭೩)

ಗೋವರ್ಧನ ಎಂಬ ಬೆಟ್ಟವು ಕಂಗೊಳಿಸುವಂತಹ, ಯಮುನಾನದಿಯು ಅರ್ಧಚಂದ್ರಾಕೃತಿಯಲ್ಲಿ ಸುತ್ತುವರೆದಿರುವ ಕೃಷ್ಣನಿಗೆ ಪ್ರಿಯಕರವಾದ ಅತ್ಯಂತ ರಮ್ಯವಾದ ಸ್ಥಳವೇ ಈ ವೃಂದಾವನ. ಈ ವೃಂದಾವನವು ಮೂರುಲೋಕಗಳಲ್ಲೂ ಗೋಪನೀಯವಾದ ಪ್ರದೇಶ. ಯೋಗಿಗಳು ಶಿರಸಾ ಧರಿಸುವಂತಹ ಸಾವಿರ ದಳಗಳ ಕಮಲದ ನೆಲೆ, ಅಂತಹ ಸ್ಥಳದಲ್ಲಿ ತುಲಸಿಯನ್ನು ನೆಟ್ಟ ಆ ಶಿವಭಕ್ತರು ರಜತಾದ್ರಿ ಎನ್ನಿಸಿದ ಕೈಲಾಸಕ್ಕೆ ತೆರಳಿದರು.

**ವಿಯೋಗೇ ವಾಸುದೇವಸ್ಯ ಧ್ಯಾತ್ವಾ ತ್ವಾಂ ಜನಕಾತ್ಮಜಾ।**
**ಅಶೋಕವನಮಧ್ಯೇ ತು ಪ್ರಿಯೇಣ ಸಹ ಸಂಗತಾ॥** – ಬೃಹದ್ಧರ್ಮಪುರಾಣ

ವಾಸುದೇವನಾದ ಶ್ರೀರಾಮನ ವಿರಹವುಂಟಾದಾಗ ಜಾನಕಿಯು ಧ್ಯಾನಿಸಿ, ಅಶೋಕವನದ ಮಧ್ಯದಲ್ಲಿ ತುಲಸಿಯನ್ನು ನೆಟ್ಟು ಮತ್ತೆ ಪ್ರಿಯನಾದ ರಾಮನೊಂದಿಗೆ ಸೇರಿಕೊಂಡಳು.

**ಶಂಕರಾರ್ಥಂ ಪುರಾ ದೇವ್ಯಾ ಪಾರ್ವತ್ಯಾ ತ್ವಂ ಹಿಮಾಲಯೇ।**
**ರೋಪಿತಾ ಸೇವಿತಾ ಸಿದ್ಧ್ಯೈ ತುಲಸೀಂ ತ್ವಾಂ ನಮಾಮ್ಯಹಮ್॥**

– ಬೃಹದ್ಧರ್ಮಪುರಾಣ

ಹಿಂದೆ ಶಿವನಿಗೋಸ್ಕರವಾಗಿ ಪಾರ್ವತಿಯು ಹಿಮಾಲಯದಲ್ಲಿ ಸಿದ್ಧಿಪ್ರಾಪ್ತಿಗೋಸ್ಕರ ತುಲಸಿಯನ್ನು ನೆಟ್ಟಳು. ಅಂತಹ ತುಲಸಿಯನ್ನು ನಾನು ನಮಸ್ಕರಿಸುವೆನು.

**ಸರ್ವಾಭಿರ್ದೇವಪತ್ನೀಭಿಃ ಕಿನ್ನರೈಶ್ಚಾಪಿ ನಂದನೇ।**
**ದುಃಸ್ವಪ್ನನಾಶನಾರ್ಥಾಯ ಸೇವಿತಾ ತ್ವಂ ನಮೋऽಸ್ತು ತೇ॥**

– ಬೃಹದ್ಧರ್ಮಪುರಾಣ

ಸಕಲ ದೇವಪತ್ನಿಯರೂ, ಕಿನ್ನರರೂ, ದುಃಸ್ವಪ್ನನಾಶಕ್ಕೋಸ್ಕರವಾಗಿ ನಂದನವನದಲ್ಲಿ ತುಲಸಿಯನ್ನು ಸೇವಿಸಿದರು. ಅಂತಹ ತುಲಸಿಯೇ ನಿನಗೆ ನಮಸ್ಕಾರವು.

**ಧರ್ಮಾರಣ್ಯೇ ಗಯಾಯಾಂ ತು ಸೇವಿತಾ ಪಿತೃಭಿಃ ಸ್ವಯಮ್ ।**
**ಸೇವಿತಾ ತುಲಸೀ ಪುಣ್ಯಾ ಆತ್ಮನೋ ಹಿತಮಿಚ್ಛತಾ ॥**

- ಬೃಹದ್ಧರ್ಮಪುರಾಣ

ಗಯಾಕ್ಷೇತ್ರದಲ್ಲಿ ಧರ್ಮಾರಣ್ಯದಲ್ಲಿ ಪಿತೃಗಳು ತಮ್ಮ ಹಿತಕ್ಕೋಸ್ಕರವಾಗಿ ಪುಣ್ಯಕರವಾದ ತುಲಸಿಯನ್ನು ಸೇವಿಸಿದರು.

**ರೋಪಿತಾ ರಾಮಚಂದ್ರೇಣ ಸೇವಿತಾ ಲಕ್ಷ್ಮಣೇನ ಚ ।**
**ಸೀತಯಾ ಪಾಲಿತಾ ಭಕ್ತ್ಯಾ ತುಲಸೀ ದಂಡಕೇ ವನೇ ॥** - ಬೃಹದ್ಧರ್ಮಪುರಾಣ

ದಂಡಕಾರಣ್ಯದಲ್ಲಿ ಶ್ರೀರಾಮಚಂದ್ರನು ತುಲಸಿಯನ್ನು ನೆಟ್ಟ; ಲಕ್ಷ್ಮಣನು ಅದನ್ನು ಸೇವಿಸಿದ; ಸೀತೆಯು ಅದನ್ನು ಪೋಷಿಸಿದಳು.

★★★

# ತುಲಸಿಗೆ ಪ್ರಾಕಾರ ಕಟ್ಟಿಸುವುದರ ಫಲ

ಪ್ರಾಣಿಗಳಿಗೆ ಕೊಟ್ಟಿಗೆಗಳನ್ನು ನಿರ್ಮಿಸಿ ರಕ್ಷಣೆಗೆ ಸೂಕ್ತವ್ಯವಸ್ಥೆಯನ್ನು ಮಾಡುವುದು ಹೇಗೋ ಹಾಗೆ ವೃಕ್ಷಗಳಿಗೆ, ಹೂಗಿಡಗಳಿಗೆ ಸುತ್ತಲೂ ರಕ್ಷಣೆಗೋಸ್ಕರ ಗೋಡೆಗಳನ್ನು ಕಟ್ಟುವುದು ಪುಣ್ಯಕರ. ಅಂತಹ ವ್ಯವಸ್ಥೆಯಿಂದ ಆ ಗಿಡಗಳು ಸರಿಯಾಗಿ ಬೆಳೆಯಲು ಉಳಿಯಲು ಕಾರಣವಾಗಿ, ಅವುಗಳ ಪೂರ್ಣಪ್ರಯೋಜನವನ್ನು ಪಡೆಯಲು ಸಾಧ್ಯವಾಗುವುದು. ಅಂತಹ ರಕ್ಷಣೆಯ ಕಾರ್ಯದಲ್ಲಿ ಸೂಕ್ತವಾದ ಗಾಳಿಬೆಳಕುಗಳು ಅವುಗಳಿಗೆ ಒದಗುವಂತೆ ಯೋಜಿಸಿರಬೇಕು. ಪ್ರಸ್ತುತ ಭಗವತ್ಪೂಜೆಗೆ ಅತ್ಯಂತ ಪ್ರಧಾನವೆನ್ನಿಸಿದ ತುಲಸಿಯನ್ನು ಸಹ ಹೀಗೆ ರಕ್ಷಿಸಲು ಸೂಕ್ತವಾದ ಪ್ರಾಕಾರಾದಿಗಳನ್ನು ನಿರ್ಮಿಸುವುದು ಅಗತ್ಯಕರ್ತವ್ಯ. ಅದರಿಂದಾಗಿ ತುಲಸಿಯು ಪೂರ್ಣವಾಗಿ ಬೆಳೆದು, ಶ್ರೀಹರಿಯ ಅರ್ಚನೆಗೆ ಯೋಗ್ಯವೆನ್ನಿಸುವಂತಾಗುವುದು. ತುಲಸೀಪ್ರಾಕಾರದ ನಿರ್ಮಾಣಕ್ಕೆ ಮತ್ತೊಂದು ಪ್ರಯೋಜನವೂ ಇದೆ. ಇತರ ವೃಕ್ಷಗಳ ಎಲೆ ಮೊದಲಾದವು ಭೂಮಿಯ ಮೇಲೆ ಬಿದ್ದಾಗ ಅದರಿಂದ ಅಷ್ಟಾಗಿ ಹಾನಿ ಇರದು. ಆದರೆ ತುಲಸಿಯ ಎಲೆಯು ಸಹ ದಳಗಳಂತೆ ಅತ್ಯಂತ ಪವಿತ್ರ. ಹಾಗೆ ತುಲಸಿಯ ಎಲೆಗಳು ಸಹ ಪೂಜೆಗೆ ಅರ್ಹವೆನ್ನಿಸಿ ಪುಣ್ಯಕರವೆನ್ನಿಸುವವು. ಅದರಿಂದಾಗಿ ಅವುಗಳನ್ನು ಜನರು ತುಳಿಯದಂತೆ ಪ್ರಾಕಾರ ನಿರ್ಮಿಸುವ ಮೂಲಕ ರಕ್ಷಿಸಬೇಕು. ಕಾರಣಾಂತರಗಳಿಂದ ತುಲಸಿದಳಗಳು ಅಲಭ್ಯವೆನ್ನಿಸಿದಾಗ ಮತ್ತು ನಿಷಿದ್ಧವಾದ

ದಿನಗಳಲ್ಲಿ ವಿಶೇಷವಾಗಿ ದ್ವಾದಶಿಯಂದು ತುಲಸಿಯ ಚಯನವು ಅತ್ಯಂತ ನಿಷಿದ್ಧವೆನ್ನಿಸಿರುವಾಗ ಪೂಜೆಗೆ ನೆಲೆದ ಮೇಲೆ ಉದುರಿಬಿದ್ದಂತಹ ತುಲಸಿ ಎಲೆಗಳು ಸಹ ಗ್ರಾಹ್ಯವೆಂಬುದಾಗಿ ಶಾಸ್ತ್ರಗಳು ತಿಳಿಸಿವೆ. ಅವು ಹಾಗೆ ಗ್ರಾಹ್ಯವಾಗಲು ಅವುಗಳು ಪವಿತ್ರ್ಯವಾಗಿಯೇ ಇರುವುದು ಅಗತ್ಯ. ಪ್ರಾಕಾರ ನಿರ್ಮಾಣದಿಂದ ಈ ಉದ್ದೇಶ ಈಡೇರುವುದು. ಅದರಂತೆ ತುಲಸಿಗೆ ಮಾಡುವ ಯಾವುದೇ ರೀತಿಯ ಅಪಚಾರವೂ ಸಹ ಅತ್ಯಂತ ಪಾತಕವೆನ್ನಿಸುವುದು. ತುಲಸಿಯ ಎಲೆಗಳು ಕೆಳಗೆ ಉದುರಿ ಅವುಗಳನ್ನು ತಿಳಿದು ತಿಳಿಯದೆಯೋ ತುಳಿಯುವ ಜನರು ಮಹಾಪಾತಕಕ್ಕೆ ಒಳಗಾಗಿ ಅನರ್ಥಕ್ಕೆ ಗುರಿಯಾಗುವುದುಂಟು. ಪ್ರಾಕಾರ ನಿರ್ಮಾಣದಿಂದ ಇಂತಹ ಅಪಚಾರವನ್ನು ತಪ್ಪಿಸಲು ನೆರವಾಗುವುದು. ಅದರ ಮಹಿಮೆಯನ್ನು ಅರಿಯದ ಮಕ್ಕಳು, ಇತರ ಜನರು ಸಹ ಇಂತಹ ಪಾತಕಕ್ಕೆ ಒಳಗಾಗದಿರುವಂತಹ ಎಚ್ಚರಿಕೆಯನ್ನು ಪ್ರಾಕಾರನಿರ್ಮಾಣದಿಂದ ಪಡೆಯಲು ಸಾಧ್ಯ. ತುಲಸಿಯ ಸರ್ವಾಂಗಗಳಲ್ಲು ಸಹ ದೇವತಾಸನ್ನಿಧಾನ ಇರುವುದರಿಂದ ಅದಕ್ಕೆ ಪ್ರಾಕಾರಾದಿ ನಿರ್ಮಾಣಗಳ ಮೂಲಕ ಸಲ್ಲಿಸುವ ಸೇವೆಯು ಅಪಾರ ಪುಣ್ಯಕ್ಕೆ ಕಾರಣವಾಗುವುದು ಎಂದು ತಿಳಿಯಬೇಕು.

**ತುಲಸೀಕಾನನಸ್ಯಾರ್ಥಂ ಪ್ರಾಕಾರಂ ಯಸ್ತು ಕಾರಯೇತ್ ।**
**ಕಂಟಕಾವರಣಂ ಚಾಪಿ ತನ್ಮೇ ನಿಗದತಃ ಶ್ರುಣು ॥**

**ಯಾವದ್ದಿನಾನಿ ತದ್ವಿಪ್ರ ತಿಷ್ಠೇತ್ ಸಮ್ಯಕ್ ದೃಢಂ ಭುವಿ ।**
**ತಾವದ್ಯುಗಸಹಸ್ರಾಣಿ ವಿಷ್ಣುಲೋಕೇ ಸ ಪೂಜ್ಯತೇ ॥**

– ವಿಷ್ಣುಧರ್ಮೋತ್ತರ (೧೫/೨೪,೨೫)

ತುಲಸಿವನದ ರಕ್ಷಣೆಗೋಸ್ಕರವಾಗಿ ಪ್ರಾಕಾರವನ್ನೂ ಹಾಗೂ ಮುಳ್ಳಿನ ಬೇಲಿಯನ್ನು ಕಟ್ಟಿಸುವವನಿಗೆ ಬರುವ ಫಲವನ್ನು ತಿಳಿಸುವೆನು, ಕೇಳು! ಅವನು ಭೂಲೋಕದಲ್ಲಿ ಎಷ್ಟು ದಿನಗಳ ಕಾಲ ಜೀವಿಸಿರುವನೋ ಅಷ್ಟು ಸಾವಿರ ಯುಗಗಳ ಕಾಲ ವಿಷ್ಣುಲೋಕದಲ್ಲಿ ಅವನು ಆದರಿಸಲ್ಪಡುವನು.

**ಕಂಟಕಾವರಣಂ ಯಾವದ್ದಿನಾನಿ ಭುವಿ ತಿಷ್ಠತಿ ।**
**ತಾವದ್ಯುಗಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ ॥**

– ವಿಷ್ಣುಧರ್ಮೋತ್ತರ (೧೫/೩೧)

ತುಲಸಿಗೆ ನಿರ್ಮಿಸಿದ ಮುಳ್ಳಿನ ಬೇಲಿಯು ಎಷ್ಟು ದಿನಗಳ ಕಾಲ ಭೂಮಿಯಲ್ಲಿ ಉಳಿದುಕೊಂಡಿರುವುದೋ ಅಷ್ಟು ಸಾವಿರ ಯುಗಗಳ ಕಾಲ ಅದನ್ನು ನಿರ್ಮಿಸಿದವನು ಸ್ವರ್ಗಲೋಕದಲ್ಲಿ ಗೌರವವನ್ನು ಪಡೆಯುವನು.

★★★

# ಮನೆಗಳಲ್ಲಿ ತುಲಸಿಯ ಪರಿಣಾಮ

ಮನೆಗಳಲ್ಲಿ ಸಕಲ ವಸ್ತುಗಳೂ ಇರುವುದು ಸಾಧ್ಯವೂ ಇಲ್ಲ, ಅದು ಕಡ್ಡಾಯವೂ ಅಲ್ಲ. ವೃಕ್ಷಗಳಿಗೆ ಸಂಬಂಧಿಸಿದಂತೆ ವಿಚಾರಮಾಡಿದಾಗ ಅನೇಕ ವೃಕ್ಷಗಳು ಮನೆಯ ಸುತ್ತಮುತ್ತಲೂ ಇರುವುದು ಅಷ್ಟು ಪ್ರಶಸ್ತವೆನ್ನಿಸದು. ಆದರೆ, ತುಲಸಿಯ ವಿಷಯ ಹಾಗಲ್ಲ. ಅದು ಮನೆಯಲ್ಲಿ ಇರಬಹುದು ಎಂದಲ್ಲ, ಇರಲೇಬೇಕು ಎಂಬುದು ಶಾಸ್ತ್ರಗಳ ಸಂದೇಶ. ಮನೆಯ ಹೊರಗೆ ವೃಂದಾವನದಲ್ಲಿ, ತುಲಸಿಯ ವನದಲ್ಲಿ ಇರುವುದು ಒಂದು ಬಗೆಯಾದರೆ, ಮನೆಯ ಒಳಭಾಗದಲ್ಲೂ ಸಹ ಪುಟ್ಟ ವೃಂದಾವನದಲ್ಲಿ ಬೆಳೆದಿರುವಂತೆ ಪೂಜಿಸಲ್ಪಡುವುದು ವಿಹಿತವಾಗಿದೆ. ಅದರ ಸನ್ನಿಧಿಯು ಅಸುರಿ ಶಕ್ತಿಗಳನ್ನು ದಮನಗೊಳಿಸುವ, ಸಮರ್ಥ. ದೈವೀಶಕ್ತಿಯನ್ನು ಉದ್ದೀಪನಗೊಳಿಸುವಷ್ಟು ಪರಿಣಾಮಕಾರಿ. ಹೀಗೆ ಸನ್ನಿಧಾನಮಾತ್ರದಿಂದಲೇ ಪಾವಿತ್ರ್ಯವನ್ನು ಒದಗಿಸುವ ವಿಶೇಷ ಹಿರಿಮೆ ತುಲಸಿಯದ್ದು. ಮನೆಗಳಲ್ಲಿ ಇರುವ ವಸ್ತುಗಳೂ ಸಹ ಅದರ ಗುಣಾವಗುಣಗಳ ಮೇಲೆ ತಮ್ಮ ಪರಿಣಾಮವನ್ನು ಉಂಟುಮಾಡುವವು. ದೇವತಾಸನ್ನಿಧಾನಯುಕ್ತವಾದ ಮಂಗಳ ಪದಾರ್ಥಗಳು ಮನೆಯಲ್ಲಿ ಶುಭಫಲವನ್ನು ನೀಡಿದರೆ, ದೈತ್ಯಸನ್ನಿಧಾನದಿಂದ ಕೂಡಿದ ಅಮಂಗಳಪದಾರ್ಥಗಳು ಮನೆಗೆ ಕೆಡುಕನ್ನುಂಟುಮಾಡುವವು. ಸಾಲಿಗ್ರಾಮ, ಚಕ್ರಾಂಕಿತ, ಸುದರ್ಶನ, ಭಗವತ್ಪ್ರತೀಕಗಳು, ಗಂಗೆ, ಗೋಪೀಚಂದನ, ಮುದ್ರೆಗಳು ಮೊದಲಾದವುಗಳು ಮಂಗಳಪದಾರ್ಥಗಳಿಗೆ ನಿದರ್ಶನ. ಸಾಲಿಗ್ರಾಮ ಮೊದಲಾದವುಗಳು ಪೂಜಾಯೋಗ್ಯವಾದ ಭಗವತ್ಪ್ರತೀಕಗಳು, ತುಲಸಿಯು ಅತ್ಯಮೂಲ್ಯವಾದ ಪೂಜಾಸಾಧನ. ಆದ್ದರಿಂದ ತುಲಸಿಯು ಸದಾ ಮನೆಯಲ್ಲಿ ಇರಲೇಬೇಕು. ಕೆಲವು ಪದಾರ್ಥಗಳು ಮನೆಯ ಒಳಗೆ ಮಾತ್ರ ಇರುವಂತಹವು; ಸಾಲಿಗ್ರಾಮ ಮೊದಲಾದವುಗಳು ಇಂತಹವು. ಕೆಲವು ವಸ್ತುಗಳು ಮನೆಯ ಹೊರಗೆ ಇದ್ದು ಪವಿತ್ರ ಎನ್ನಿಸುವುವು. ಧಾತ್ರೀವೃಕ್ಷ ಇದಕ್ಕೆ ನಿದರ್ಶನ. ತುಲಸಿಯದು ವಿಚಿತ್ರಬಗೆ. ಮನೆಯ ಒಳಗೂ ಹೊರಗೂ ಸಹ ಇದು ಅತ್ಯಗತ್ಯ. ಹೀಗೆ ಮನೆಗೆ ಭಗವತ್ಪ್ರತೀಕದಂತೆ ಅತ್ಯಂತ ಅನಿವಾರ್ಯವೆನ್ನಿಸಿರುವ ಪರಮ ಮಂಗಳಕರವಾದ ಪದಾರ್ಥ ಎಂಬುದು ಇಲ್ಲಿ ನಿರೂಪಿತವಾಗಿದೆ.

**ಗೃಹಸ್ಯಾಂಗಣಮಧ್ಯೇ ವಾ ಗೃಹಸ್ಯೋಪವನೇಽಪಿ ವಾ ।**
**ಶುಚೌ ದೇಶೇ ಚ ತುಲಸೀಮರ್ಚಯೇತ್ ಬುದ್ಧಿಮಾನ್ನರಃ ।** – ಸ್ಕಂದಪುರಾಣ

ಮನೆಯ ಅಂಗಳದ ಮಧ್ಯದಲ್ಲಾಗಲಿ, ಮನೆಯ ಉಪವನದಲ್ಲಾಗಲಿ, ಶುಚಿಯಾದ ಸ್ಥಳದಲ್ಲಿ ಬುದ್ಧಿವಂತನಾದ ಮನುಷ್ಯ ತುಲಸಿಯನ್ನು ಪೂಜಿಸಬೇಕು.

[೮]ತುಲಸೀಕಾನನಂ ರಾಜನ್ ಗೃಹೇ ಯಸ್ಯಾವತಿಷ್ಠತೇ ।
ತದ್ಗೃಹಂ ತೀರ್ಥರೂಪಂ ತು ನಾಯಾಂತಿ ಯಮಕಿಂಕರಾಃ ॥

– ಸ್ಕಂದಪುರಾಣ (೨/೪/೨೩/೬)

ತುಲಸಿಯ ವನವು ಯಾರ ಮನೆಯಲ್ಲಿ ನೆಲೆಸಿರುವುದೋ ಆ ಮನೆಯು ಪರಮಪವಿತ್ರವಾದುದು. ಅಲ್ಲಿಗೆ ಯಮದೂತರು ಸರ್ವಥಾ ಆಗಮಿಸರು.

ಧನ್ಯಾಸ್ತೇ ಮಾನವಾ ಲೋಕೇ ಯದ್ಗೃಹೇ ವಿದ್ಯತೇ ಕಲೌ ।
ಶಾಲಗ್ರಾಮಶಿಲಾರ್ಚಾರ್ಥಂ ತುಲಸೀ ಪ್ರತ್ಯಹಂ ಕ್ಷಿತೌ ॥

– ಪದ್ಮಪುರಾಣ (೫/೫೬/೭)

ಕಲಿಯುಗದಲ್ಲಿ ಯಾರ ಮನೆಯಲ್ಲಿ ಸಾಲಿಗ್ರಾಮಪೂಜೆಗೋಸ್ಕರವಾಗಿ ಪ್ರತಿದಿನದಲ್ಲೂ ಸಹ ತುಲಸಿಯು ತಪ್ಪದೆ ಇದ್ದೇ ಇರುವುದೋ ಅಂತಹ ಮಾನವರು ಲೋಕದಲ್ಲಿ ಧನ್ಯರು.

ಯಸ್ಮಿನ್ ಗೃಹೇ ಚ ತಿಷ್ಠೇತ ತುಲಸೀವೃಕ್ಷವಾಟಿಕಾ ।
ದರ್ಶನಾತ್ ಸ್ಪರ್ಶನಾಚ್ಚೈವ ಬ್ರಹ್ಮಹತ್ಯಾದಿಪಾತಕಮ್ ।
ತತ್ಸರ್ವಂ ವಿಲಯಂ ಯಾಂತಿ ದರ್ಶನೇನೈವ ನಾರದ ॥

– ಪದ್ಮಪುರಾಣ (೬/೨೪/೨೬,೨೮)

ಎಲೈ ನಾರದ! ಯಾವ ಮನೆಯಲ್ಲಿ ತುಲಸಿಯ ವೃಕ್ಷದ ತೋಟವು ಇರುವುದೋ ಅದರ ದರ್ಶನ, ಸ್ಪರ್ಶನಗಳಿಂದ ಬ್ರಹ್ಮಹತ್ಯೆ ಮೊದಲಾದ ಪಾತಕಗಳು ಸಂಪೂರ್ಣ ನಾಶ ಹೊಂದುವವು.

ಯತ್ರ ಯತ್ರ ಗೃಹೇ ಗ್ರಾಮೇ ವನೇ ವಾ ತುಲಸೀ ಭವೇತ್ ।
ತತ್ರ ತತ್ರ ಜಗತ್ಸ್ವಾಮೀ ಪ್ರೀತಾತ್ಮಾ ಚ ವಸೇದ್ಧರಿಃ ॥

– ಪದ್ಮಪುರಾಣ (೬/೨೪/೩೧)

ಯಾವ ಯಾವ ಗೃಹದಲ್ಲಿ, ಗ್ರಾಮದಲ್ಲಿ, ವನದಲ್ಲಿ ತುಲಸಿಯು ಇರುವುದೋ ಅಲ್ಲಲ್ಲಿ ಜಗತ್ಸ್ವಾಮಿಯಾದ ಶ್ರೀಹರಿಯು ಪ್ರೀತಮನಸ್ಕನಾಗಿ ನೆಲೆಸಿಬಿಡುವನು.

ಗೃಹೇ ತಸ್ಮಿನ್ ನ ದಾರಿದ್ರ್ಯಂ ನಾಯೋಗೀ ಬಂಧುಸಂಭವಃ ।
ನ ದುಃಖಂ ನ ಭಯಂ ರೋಗಾಸ್ತುಲಸೀ ಯತ್ರ ತಿಷ್ಠತಿ ॥

– ಪದ್ಮಪುರಾಣ (೬/೨೪/೩೨)

ಯಾವ ಮನೆಯಲ್ಲಿ ತುಲಸಿಯು ನೆಲೆಸಿರುವುದೋ ಅಲ್ಲಿ ದಾರಿದ್ರ್ಯವಿರದು, ಬಂಧುಗಳಲ್ಲಿ ಯೋಗಿಯಲ್ಲದವನು ಇರನು; ದುಃಖವಿರದು, ಭಯವಿರದು, ರೋಗಗಳೂ ಇರವು.

---

೮ ತುಲಸೀಕಾನನಂ ವೈಶ್ಯ ಗೃಹೇ ಯಸ್ಮಿಂಸ್ತು ತಿಷ್ಠತಿ ।
ತದ್ಗೃಹಂ ತೀರ್ಥಭೂತಂ ಹಿ ನ ಯಾಂತಿ ಯಮಕಿಂಕರಾಃ ॥ – ಪದ್ಮಪುರಾಣ (೬/೨೪೪/೨)

**ತುಲಸೀ ಘ್ರಾಣಮಾತ್ರೇಣ ತುಷ್ಟಾ ಭವತಿ ಸುಂದರೀ ।** -ತಂತ್ರಸಾರ

ಆಘ್ರಾಣೀಸುವುದರಿಂದಲೇ ತುಲಸಿಯು ಪ್ರೀತಳಾಗುವಳು.

**ಯತ್ರ ಗೇಹಾಂಗಣೇ ದೇವೀ ಪೂಜ್ಯತೇ ಭಕ್ತಿಮನ್ನರೈಃ ।**
**ಕಿಂತು ಸರ್ವಾಣ್ಯಭೀಷ್ಟಾನಿ ಪ್ರಾಪ್ನುವಂತಿ ನ ಸಂಶಯಃ ॥** - ಪದ್ಮಪುರಾಣ

ಯಾರ ಮನೆಯ ಅಂಗಳದಲ್ಲಿ ದೇವಿಯಾದ ತುಲಸಿಯು ಭಕ್ತಿಯುಕ್ತರಾದ ಮನುಷ್ಯರಿಂದ ಪೂಜಿಸಲ್ಪಡುವಳೋ ಅವರು ಸಕಲ ಅಭೀಷ್ಟಗಳನ್ನು ಸಹ ಹೊಂದುವರು, ಸಂಶಯವಿಲ್ಲ.

**ಯೇ ತ್ವಾದೃಷ್ಟ್ವಾऽವಜಾನಂತಿ ಮದಾಲಸ್ಯಾದಿಮೋಹಿತಾಃ ॥**
**ಅಕೃತ್ವಾ ನಮನಾದೀನಿ ತೇ ಸ್ಯುರ್ನಿರಯಗಾಮಿನಃ ।**
**ಜನ್ಮಜನ್ಮನಿ ಗೋವಿಂದಮಜ್ಞಾತ್ವಾ ಸಂಸರಂತಿ ಚ ॥........** - ಪದ್ಮಪುರಾಣ

ತುಲಸಿಯನ್ನು ಕಂಡು ಮದ, ಆಲಸ್ಯ ಮೊದಲಾದವುಗಳಿಂದ ಮಂಕುಕವಿದವರಾಗಿ ಅದಕ್ಕೆ ನಮನ ಮೊದಲಾದವುಗಳನ್ನು ಸಲ್ಲಿಸದವರು ನರಕಕ್ಕೆ ತೆರಳುವರು. ಮುಂದಿನ ಜನ್ಮಜನ್ಮಗಳಲ್ಲೂ ಶ್ರೀಹರಿಯ ಬಗ್ಗೆ ಅರಿವು ಪಡೆಯಲಾಗದೆ, ಸಂಸಾರದಲ್ಲಿಯೇ ತೊಳಲುವರು.

★★★

## ತುಲಸಿಯ ವನದ ಮಹತ್ತ್ವ

ಒಂದಕ್ಕಿಂತ ಹೆಚ್ಚು ಸಂಖ್ಯೆಯಲ್ಲಿ ತುಲಸಿಗಳು ಒಂದೇ ಸ್ಥಳದಲ್ಲಿ ಬೆಳೆದಿದ್ದರೆ ಅದಕ್ಕೆ ತುಲಸಿವನ ಎನ್ನುವರು. ಹೆಚ್ಚಿನ ಸಂಖ್ಯೆಯಲ್ಲಿ ತುಲಸಿಯ ವೃಕ್ಷಗಳಿದ್ದರಂತೂ ಅದು ತುಲಸಿವನವೇ. ಹಣ್ಣಿನ ಮರ ಹಾಗೂ ಹೂವಿನ ಗಿಡಗಳು ಒಂದೆಡೆ ಇದ್ದು ಹಣ್ಣಿನ ತೋಟ, ಹೂವಿನ ತೋಟ ಎಂದು ಪ್ರಸಿದ್ಧವಾಗುವುದುಂಟು. ಆದರೆ ತುಲಸಿವೃಕ್ಷಗಳು ಮಾತ್ರ ಒಂದೇ ಇದ್ದಾಗ್ಯೂ ಅದು ವನವೆನ್ನಿಸಿ ಅಪಾರವಾದ ಸಿದ್ಧಿಗೆ ಕಾರಣವಾಗುವುದು. ಇತರ ವನಗಳನ್ನು ಬೆಳೆಸುವುದಾಗಲಿ, ರಕ್ಷಿಸುವುದಾಗಲಿ ಅಂತಹ ಸುಲಭದ ಕೆಲಸವೇನಲ್ಲ. ಆದರೆ ಅವುಗಳಿಂದ ತುಲಸಿವನದಿಂದ ಲಭಿಸುವ ಪಾವಿತ್ರ್ಯವು ಮಾತ್ರ ಸರ್ವಥಾ ಲಭಿಸದು. ತುಲಸಿವನವು ಬೆಳೆಸಲು, ಪೋಷಿಸಲು ಅತ್ಯಂತ ಸುಲಭ. ಲಭಿಸುವ ಪುಣ್ಯ ಮಾತ್ರ ಅತ್ಯಗಾಧ.

**[೯]ಸರ್ವಪಾಪಹರಂ ನಿತ್ಯಂ ಕಾಮದಂ ತುಲಸೀವನಮ್ ।**
- ಸ್ಕಂದಪುರಾಣ (೨/೪/೮/೧೩), (೨/೪/೨೩/೧೦);
ಪದ್ಮಪುರಾಣ (೬/೧೦೭/೧೦)

---

೯ ಸರ್ವಪಾಪಹರಂ ಪುಣ್ಯಂ ಕಾಮದಂ ತುಲಸೀವನಮ್ ॥ -ಸ್ಕಂದಪುರಾಣ (೨/೪/೮/೧೪)

ತುಲಸಿವನವು ನಿತ್ಯವೂ ಸರ್ವಪಾಪಪರಿಹಾರಕವೂ ಸಕಲಾಭೀಷ್ಟಪ್ರದವೂ ಆಗಿದೆ.

**ಸರ್ವಪಾಪಹರಂ ಪೂತಂ ಕಾಮದಂ ತುಲಸೀವನಮ್ ।**

– ಪದ್ಮಪುರಾಣ (೬/೨೪೪/೧)

ತುಲಸಿವನವು ಸರ್ವಪಾಪಪರಿಹಾರಕವೂ, ಸರ್ವಕಾಮಗಳ ಸಿದ್ಧಿಪ್ರದವೂ ಆಗಿದೆ.

**ತೀರ್ಥಂ ಪದ್ಮವನಂ ಪ್ರೋಕ್ತಂ ತುಲಸೀಕಾನನಂ ತಥಾ ।** – ಪದ್ಮಪುರಾಣ

ಪವಿತ್ರವಾದ ವನ ಎಂದರೆ ಪದ್ಮವನ, ಅದರಂತೆ ತುಲಸಿವನ.

**ದರ್ಶನಂ ನರ್ಮದಾಯಾಸ್ತು ಗಂಗಾಸ್ನಾನಂ ತಥೈವ ಚ ।**
**ತುಲಸೀವನಸಂಸರ್ಗಃ ಸಮಮೇವ ತ್ರಯಂ ಸ್ಮೃತಮ್ ॥**

–ಸ್ಕಂದಪುರಾಣ (೨/೪/೨೩/೧೧); ಪದ್ಮಪುರಾಣ (೬/೧೦೭/೧೧)

ನರ್ಮದಾನದಿಯ ದರ್ಶನ, ಗಂಗಾನದಿಯ ಸ್ನಾನ ಹಾಗೂ ತುಲಸಿವನದ ಸ್ಪರ್ಶನ – ಈ ಮೂರೂ ಸಹ ಸಮಾನ ಎಂಬುದಾಗಿ ಸ್ಮೃತಿಗಳಲ್ಲಿ ಉಕ್ತವಾಗಿದೆ (ದರ್ಶನ, ಸ್ನಾನ ಹಾಗೂ ಸ್ಪರ್ಶನಗಳಲ್ಲಿ ಸ್ಪರ್ಶನ ಹೆಚ್ಚು ಸುಲಭ; ದರ್ಶನಕ್ಕೆ ಕಣ್ಣುಗಳು ಅಗತ್ಯ. ಸ್ನಾನ ಇಡೀದೇಹವನ್ನು ಮುಳುಗಿಸಿದಾಗ ಮಾತ್ರ; ಸ್ಪರ್ಶನ ಹಾಗಲ್ಲ, ಕುರುಡನಿಗೂ ಅದರ ಭಾಗ್ಯ ಲಭಿಸುವುದು. ಅಲ್ಲದೆ ಇಡೀ ದೇಹಕ್ಕೂ ಅದರ ಅಗತ್ಯವಿರದು. ಕೇವಲ ಸ್ಪರ್ಶನದಿಂದಲೇ ಪಾವನಗೊಳಿಸುವ ಹಿರಿಮೆ ತುಲಸಿಯದು; ವಿದ್ಯುಚ್ಛಕ್ತಿಯ ರೀತಿಯೂ ಇಂತಹುದೇ. ಅದರ ಆಘಾತವಾಗಲು ಅತ್ಯಂತ ಲಘುಸ್ಪರ್ಶವು ಸಹ ಸಾಕೆನ್ನಿಸುವುದು. ಅದರಂತೆ ತುಲಸಿಯ ಸ್ಪರ್ಶಮಾತ್ರದಿಂದಲೇ ಪಾಪನಾಶ ನಿಶ್ಚಿತ ಎಂಬುದು ಇಲ್ಲಿಯ ಭಾವ).

**ತುಲಸೀಕಾನನಂ ಯತ್ರ ತತ್ರ ನಾಸ್ತಿ ಯಮಕ್ರಿಯಾ ।**
**ತತ್ರ ಚೇನ್ಮ್ರಿಯತೇ ಜಂತುರ್ನ ಜಂತುತ್ವಂ ಪುನರ್ಭಜೇತ್ ॥**

– ಬೃಹದ್ಧರ್ಮಪುರಾಣ, ಪ್ರಥಮಖಂಡ (೧/೮/೫೨)

ತುಲಸಿವನವು ಇರುವ ಸ್ಥಳದಲ್ಲಿ ಯಮದೇವರಿಗೆ ಕೆಲಸ ಇರದು. ಅಂತಹ ಸ್ಥಳದಲ್ಲಿ ಮೃತಿಹೊಂದುವ ಜೀವಿಯು ಮತ್ತೆಂದೂ ಹುಟ್ಟಿಬರಲಾರದು.

**ತತ್ರ ಕೇಶವಸಾನ್ನಿಧ್ಯಂ ಯತ್ರಾಸ್ತಿ ತುಲಸೀವನಮ್ ।**
**ತತ್ರ ಬ್ರಹ್ಮಾ ಚ ಕಮಲಾ ಸರ್ವದೇವಗಣೈಃ ಸಹ ॥**

– ಪದ್ಮಪುರಾಣ (೫/೫೮/೧೨೨)

ಎಲ್ಲಿ ತುಲಸಿವನವು ಇರುವುದೋ ಅಲ್ಲಿ ಶ್ರೀಹರಿಯ ಸನ್ನಿಧಾನವಿರುವುದು ಹಾಗೂ ಅಲ್ಲಿ ಬ್ರಹ್ಮ ಹಾಗೂ ಮಹಾಲಕ್ಷ್ಮಿ ಮೊದಲಾದ ದೇವತೆಗಳು ಇತರ ಸಕಲ ದೇವತೆಗಳ ಗುಂಪುಗಳೊಂದಿಗೆ ನೆಲೆಸಿಬಿಡುವರು.

**ತಸ್ಮಾತ್ ತಾಂ ಸನ್ನಿಕೃಷ್ಟೇ ತು ಸದಾ ದೇವೀಂ ಪ್ರಪೂಜಯೇತ್ ।**
**ಸ್ತೋತ್ರಂ ಮಂತ್ರಾದಿಕಂ ಯದ್ವಾ ಸರ್ವಮಾನಂತ್ಯಮಶ್ನುತೇ ॥**

– ಪದ್ಮಪುರಾಣ (೫/೫೮/೧೨೩)

ಆದ್ದರಿಂದ ತುಲಸಿಯನ್ನು ಹತ್ತಿರದಲ್ಲಿರಿಸಿಕೊಂಡೇ ಸದಾ ಪೂಜಿಸಬೇಕು. ಅದರ ಬಳಿ ಮಾಡುವ ಸ್ತೋತ್ರ, ಮಂತ್ರ ಸಕಲವೂ ಸಹ ಅನಂತಫಲವನ್ನು ನೀಡುವವು.

**ಯೇ ಚ ಪ್ರೇತಾಶ್ಚ ಕೂಷ್ಮಾಂಡಾಃ ಪಿಶಾಚಾ ಬ್ರಹ್ಮರಾಕ್ಷಸಾಃ ।**
**ಸರ್ವಾಃ ಸಂಕೋಚತಾಂ ಯಾಂತಿ ದೃಷ್ಟ್ವಾತು ತುಲಸೀದಲಮ್ ॥**

– ಪದ್ಮಪುರಾಣ (೫/೫೮/೧೨೪)

ಪ್ರೇತಗಳು, ಕೂಷ್ಮಾಂಡಗಳು, ಪಿಶಾಚಗಳು, ಬ್ರಹ್ಮರಾಕ್ಷಸರು ಮೊದಲಾದ ದುಷ್ಟಶಕ್ತಿಗಳು ಸಹ ತುಲಸಿಯ ದಳವನ್ನು ನೋಡುತ್ತಲೇ ಕುಗ್ಗಿಹೋಗುವರು.

**ಬ್ರಹ್ಮಹತ್ಯಾದಯಃ ಪಾಪಾ ವ್ಯಾಧಯಃ ಪಾಪಸಂಭವಾಃ ।**
**ಕುಮಂತ್ರಣಕೃತಾ ಯೇ ಚ ಸರ್ವೇ ನಶ್ಯಂತಿ ತತ್ರ ವೈ ॥**

– ಪದ್ಮಪುರಾಣ (೫/೫೮/೧೨೬)

ಬ್ರಹ್ಮಹತ್ಯೆ ಮೊದಲಾದ ಪಾಪಗಳಿಂದಾಗಿ ಹುಟ್ಟುವ ರೋಗಗಳು ಅದರಂತೆಯೇ ಕೆಟ್ಟ ವಿಚಾರದಿಂದ ಹುಟ್ಟುವ ದುಷ್ಟಶಕ್ತಿಗಳು ಮೊದಲಾಗಿ ಎಲ್ಲವೂ ಸಹ ತುಲಸಿದಳದಿಂದಾಗಿ ನಾಶಹೊಂದುವವು.

★★★

## ತುಲಸಿಯ ವೃಂದಾವನದ ನಿರ್ಮಾಣ

ತುಲಸಿಯನ್ನು ನೆಡುವುದು, ಪೋಷಿಸುವುದು ಮೊದಲಾದವು ಒಂದು ಬಗೆಯ ಸೇವೆ. ಅನೇಕ ತುಲಸಿಗಳನ್ನು ನೆಟ್ಟು ಬೆಳೆಸಿ ತುಲಸಿವನವನ್ನು ಮಾಡುವುದು ಇನ್ನೂ ಮಿಗಿಲಾದ ಮತ್ತೊಂದು ಸೇವೆ. ತುಲಸಿಗಾಗಿ ಪ್ರತ್ಯೇಕವಾಗಿ ಎತ್ತರದ ಸ್ಥಳದಲ್ಲಿ ವೃಂದಾವನವನ್ನು ನಿರ್ಮಿಸಿ ಅದರಲ್ಲಿ ತುಲಸಿಯನ್ನು ನೆಟ್ಟು ಪೂಜಿಸುವುದು ನಿತ್ಯ ಪೂಜೆಗಾಗಿ ಮಾಡುವ ಅತ್ಯಂತ ಹೆಚ್ಚಿನ ಸೇವೆ. ಬೇರೆ ಯಾವುದೇ ರೀತಿಯಲ್ಲೂ ತುಲಸಿಯನ್ನು ಮನೆಯಲ್ಲಿ ಬೆಳೆಸದಾಗದಾಗಲೂ ತುಲಸೀವೃಂದಾವನನ್ನು ತಪ್ಪದೆ ನಿರ್ಮಿಸಿ, ತುಲಸಿಯನ್ನು ಇರಿಸಿ, ಪೂಜಿಸುವ ಪದ್ಧತಿ ಸಾಮಾನ್ಯವಾಗಿ ಮನೆಮನೆಗಳಲ್ಲೂ ಕಂಡುಬರುವುದು. ಈ ಹಿನ್ನೆಲೆಯಲ್ಲಿ ತುಲಸೀವೃಂದಾವನದ ಮಹತ್ತ್ವವನ್ನು ಅರಿಯಬೇಕು. ತುಲಸಿಯೇ ವೃಂದಾವನವಲ್ಲ;

ವೃಂದಾವನವು ತುಲಸಿಯಲ್ಲ. ತುಲಸಿಯೇ ಬೇರೆ; ವೃಂದಾವನವೇ ಬೇರೆ. ಅನೇಕ ಜನರು ವೃಂದಾವನ ಹಾಗೂ ತುಲಸಿಯನ್ನು ಒಂದೇ ಎಂದು ಬಗೆದು ಪೂಜಿಸುವುದುಂಟು. ಅದು ಸರಿಯಲ್ಲ. ವೃಂದಾ ಎಂಬುವವಳು ಶ್ರೀಹರಿಯನ್ನು ವಿಶೇಷವಾಗಿ ಸೇವಿಸಿ, ಅವನಿಂದ ವರವನ್ನು ಪಡೆದು, ವೃಂದಾವನದ ಅಭಿಮಾನಿದೇವತೆಯಾಗಿ ಪೂಜಿತಳಾಗುವ ವಿವರವನ್ನು ಪದ್ಮಪ್ಪುರಾಣದಲ್ಲಿ ಕಾಣಬಹುದು. ಆದರೆ ತುಲಸಿಯು ಸಾಕ್ಷಾತ್ ಮಹಾಲಕ್ಷ್ಮೀ. ಶ್ರೀಜಗನ್ನಾಥದಾಸರು ತತ್ತ್ವಸುವ್ವಾಲಿಯಲ್ಲಿ ವೃಂದಾವನವನ್ನು ಪ್ರತ್ಯೇಕವಾಗಿ ಸ್ತುತಿಸಿ, ಆ ಬಳಿಕ ವಿಸ್ತಾರವಾಗಿ ತುಲಸಿಯನ್ನು ಸ್ತುತಿಸಿರುವುದನ್ನು ಇಲ್ಲಿ ಗಮನಿಸಬೇಕು. ವೃಂದಾವನ ನಿರ್ಮಾಣದ ಫಲ ಮೊದಲಾದ ವಿವರಗಳು ಹೀಗಿವೆ :

**ವೃಂದಾವನಂ ಚ ಕುರುತೇ ರೋಪಣಾರ್ಥಂ ಮಹಾಮುನೇ ।**
**ತಾವತ್ಯೈವ ವಿಮುಕ್ತಾಘೋ ಬ್ರಹ್ಮಭೂಯಾಯ ಕಲ್ಪತೇ ॥**

– ಸ್ಕಂದಪುರಾಣ (೨/೪/೮/೧೨)

ತುಲಸಿಯನ್ನು ಬೆಳೆಸಲೆಂದು ವೃಂದಾವನವನ್ನು ಯಾವನು ನಿರ್ಮಿಸುವನೋ ಅಷ್ಟರಿಂದಲೇ ಅವನು ಸಕಲ ಪಾಪಗಳಿಂದ ಬಿಡುಗಡೆ ಹೊಂದಿ, ಮುಕ್ತನಾಗಲು ಅರ್ಹತೆಪಡೆಯುವನು.

**ವೃಂದಾರೂಪಾಶ್ಚ ವೃಕ್ಷಾಶ್ಚ ಯದೈಕತ್ರ ಭವಂತಿ ಚ ।**
**ವಿದುರ್ಬುಧಾಸ್ತೇನ ವೃಂದಾಂ ಮತ್ಪ್ರಿಯಾಂ ತಾಂ ಭಜಾಮ್ಯಹಮ್ ॥**

**ಪುರಾ ಬಭೂವ ಯಾ ದೇವೀ ಹ್ಯಾದೌ ವೃಂದಾವನೇ ವನೇ ।**
**ತೇನ ವೃಂದಾವನೀ ಖ್ಯಾತಾ ಸುಭಗಾಂ ತಾಂ ಭಜಾಮ್ಯಹಮ್ ॥**

– ಬ್ರಹ್ಮವೈವರ್ತಪುರಾಣ (೨/೨೨/೧೮, ೧೯)

ಹಿಂದೆ ಉದ್ಭವಿಸಿದ ದೇವಿಯೊಬ್ಬಳು ವೃಂದಾವನದಲ್ಲಿ ನೆಲೆಸಿದಳು; ವೃಂದಾವನೀ ಎಂದು ಖ್ಯಾತಳಾದಳು; ಅವಳನ್ನು ನಾನು ಸೇವಿಸುವೆನು.

**ಅಸಂಖ್ಯೇಷು ಚ ವಿಶ್ವೇಷು ಪೂಜಿತಾ ಯಾ ನಿರಂತರಮ್ ।**
**ತೇನ ವಿಶ್ವಪೂಜಿತಾಖ್ಯಾಂ ಜಗತ್ಪೂಜ್ಯಾಂ ಭಜಾಮ್ಯಹಮ್ ॥**

– ಬ್ರಹ್ಮವೈವರ್ತಪುರಾಣ (೨/೨೨/೨೦)

ಅಸಂಖ್ಯವಾದ ವಿಶ್ವಗಳಲ್ಲಿ ಪೂಜಿತಳಾದವಳು ಆ ವೃಂದಾವನೀ. ವಿಶ್ವಪೂಜಿತಾ ಎಂಬ ಹೆಸರಿನ ಆ ಜಗತ್ಪೂಜ್ಯೆಯನ್ನು ನಾನು ಭಜಿಸುವೆನು.

**ಅಸಂಖ್ಯಾನಿ ಚ ವಿಶ್ವಾನಿ ಪವಿತ್ರಾಣಿ ಯಯಾ ಸದಾ ।**
**ತಾಂ ವಿಶ್ವಪಾವನೀಂ ದೇವೀಂ ವಿರಹೇಣ ಸ್ಮರಾಮ್ಯಹಮ್ ॥**

- ಬ್ರಹ್ಮವೈವರ್ತಪುರಾಣ (೨/೨೨/೨೧)

ಅಸಂಖ್ಯವಾದ ವಿಶ್ವಗಳು ಯಾವಳಿಂದ ಪಾವನೆಯಾದವೋ ಅಂತಹ ವಿಶ್ವಪಾವನಿಯಾದ ವೃಂದಾವನಿದೇವಿಯನ್ನು ನಾನು ಸ್ಮರಿಸುವೆನು.

**ದೇವಾ ನ ತುಷ್ಟಾಃ ಪುಷ್ಪಾಣಾಂ ಸಮೂಹೇನ ಯಯಾ ವಿನಾ ।**
**ತಾಂ ಪುಷ್ಪಸಾರಾಂ ಶುದ್ಧಾಂ ಚ ದ್ರಷ್ಟುಮಿಚ್ಛಾಮಿ ಶೋಕತಃ ॥**

- ಬ್ರಹ್ಮವೈವರ್ತಪುರಾಣ (೨/೨೨/೨೨)

ಯಾರ ಸನ್ನಿಧಾನವಿಲ್ಲದ ಪುಷ್ಪಗಳಿಂದ ದೇವತೆಗಳು ಸಂತೋಷಿಸಲಾರರೋ ಅಂತಹ ಸಕಲ ಪುಷ್ಪಗಳಿಗೆ ಮಿಗಿಲೆನ್ನಿಸಿದ ವೃಂದಾವನದ ತುಲಸಿಯನ್ನು ನೋಡಲು ಬಯಸುವೆನು.

**ವಿಶ್ವೇ ಯತ್ಪ್ರಾಪ್ತಿಮಾತ್ರೇಣ ಭಕ್ತ್ಯಾಽಽನಂದೋ ಭವೇದ್ ಧ್ರುವಮ್ ।**
**ನಂದಿನೀ ತೇನ ವಿಖ್ಯಾತಾ ಸಾ ಪ್ರೀತಾ ಭವಿತಾ ಹಿ ಮೇ ॥**

- ಬ್ರಹ್ಮವೈವರ್ತಪುರಾಣ (೨/೨೨/೨೩)

ಎಲ್ಲರೂ ಸಹ ಯಾರ ಪ್ರಾಪ್ತಿಮಾತ್ರದಿಂದಲೇ ಆನಂದವನ್ನು ಖಚಿತವಾಗಿ ಪಡೆಯುವರೋ ಆ ಕಾರಣದಿಂದ ನಂದಿನಿ ಎಂಬುದಾಗಿ ವಿಖ್ಯಾತಳಾದ ಅವಳು ನನಗೆ ಪ್ರೀತಳಾಗಲಿ.

**ಯಸ್ಯಾ ದೇವ್ಯಾಸ್ತುಲಾ ನಾಸ್ತಿ ವಿಶ್ವೇಷು ನಿಖಿಲೇಷು ಚ ।**
**ತುಲಸೀ ತೇನ ವಿಖ್ಯಾತಾ ತಾಂ ಯಾಮಿ ಶರಣಂ ಪ್ರಿಯಾಮ್ ॥**

- ಬ್ರಹ್ಮವೈವರ್ತಪುರಾಣ (೨/೨೨/೨೪)

ಯಾವ ದೇವಿಗೆ ಸಕಲ ಭುವನಗಳಲ್ಲಿ ಸಾಟಿಯಾದವಳು ಸರ್ವಥಾ ಇಲ್ಲವೋ ಆ ಕಾರಣದಿಂದಲೇ ತುಲಸೀ ಎಂದು ವಿಖ್ಯಾತಳಾದ ದೇವಿಯನ್ನು ನಾನು ಶರಣುಹೊಂದುವೆನು.

**ಕೃಷ್ಣಜೀವನರೂಪಾ ಯಾ ಶಶ್ವತ್ ಪ್ರಿಯತಮಾ ಸತೀ ।**
**ತೇನ ಕೃಷ್ಣಜೀವನೀತಿ ಮಮ ರಕ್ಷತು ಜೀವನಮ್ ॥**

- ಬ್ರಹ್ಮವೈವರ್ತಪುರಾಣ (೨/೨೨/೨೫)

ಕೃಷ್ಣನಿಗೆ ಸದಾ ಅತ್ಯಂತ ಪ್ರಿಯತಮಳಾದ, ಕೃಷ್ಣನಿಗೆ ಪ್ರಾಣವಲ್ಲಭೆ ಎನ್ನಿಸಿದ ತುಲಸಿಯು ನನ್ನ ಬದುಕನ್ನು ರಕ್ಷಿಸಲಿ.

★★★

# ತುಲಸೀವೃಂದಾವನದ ಫಲ

ಮಾವು ಮೊದಲಾದ ವೃಕ್ಷಗಳು ಮಂಗಲಕರವೆನಿಸಿದ್ದರೂ ಅವುಗಳಿಗೆ ಪ್ರತ್ಯೇಕವಾಗಿ ವೇದಿಕೆಯನ್ನು ನಿರ್ಮಿಸಿ ಪೂಜಿಸುವ ವಿಧಿ ಇಲ್ಲ. ಅಶ್ವತ್ಥವೃಕ್ಷಕ್ಕೆ ಮಾತ್ರ ವಿಶಾಲವೇದಿಕೆಯನ್ನು ನಿರ್ಮಿಸಿ ಪೂಜಿಸುವ ವಿಧಿ ಸರ್ವವಿದಿತ. ಅದಕ್ಕಿಂತಲೂ ಮಿಗಿಲಾದ ಹಿರಿಮೆಯನ್ನು ತುಲಸಿಯು ಹೊಂದಿದೆ. ವೃಂದಾವನ ಎಂಬ ಹೆಸರಿನ ಪ್ರತ್ಯೇಕವಾದ ಎತ್ತರದ ವೇದಿಕೆಯಲ್ಲೇ ಪ್ರತಿಷ್ಠಾಪಿಸಿ ತುಲಸಿಯನ್ನು ಪೂಜಿಸುವುದು ಶಾಸ್ತ್ರವಿಧಿತವಾದ ಪದ್ಧತಿ. ವೃಂದಾವನವು ಸಹ ಬರಿ ವೇದಿಕೆ ಎನ್ನಿಸದೆ ಬೃಂದಾ ಎಂಬ ಭಕ್ತೆಯೋರ್ವಳ ಸನ್ನಿಧಿ ಎಂಬುದಾಗಿ ಪದ್ಮಪುರಾಣ ನಿರೂಪಿಸಿದೆ. ತುಲಸಿಯಂತೆ ಬೃಂದಾವನದ ಪೂಜೆಯು ವಿಹಿತವಾಗಿದೆ ಎಂಬುದು ವಿಶೇಷ.

**ವೃಂದಾವನಂ ಚ ಕುರುತೇ ರೋಪಣಾರ್ಥಂ ಮಹಾಮುನೇ ।**
**ತಾವತ್ತೈವ ವಿಮುಕ್ತಾಘೋ ಬ್ರಹ್ಮಭೂಯಾಯ ಕಲ್ಪತೇ ॥** - ಸ್ಕಂದಪುರಾಣ

ತುಲಸಿಯನ್ನು ಬೆಳೆಸಲೆಂದು ವೃಂದಾವನವನ್ನು ಮಾಡುವವನು ಸಹ ಅಷ್ಟು ಮಾತ್ರ-ದಿಂದಲೇ ಪಾಪದಿಂದ ಬಿಡುಗಡೆಹೊಂದಿ, ಮುಕ್ತಿಪಡೆಯಲು ಅರ್ಹನೆನ್ನಿಸುವನು.

**ವೃಂದಾವನಂ ಯಃ ಕುರುತೇ ತುಲಸ್ಯಾ ಭಕ್ತಿಸಂಯುತಃ ।**
**ಅಥವಾ ಕಾರಯೇದನ್ಯೈಃ ತನ್ಮೇ ನಿಗದತಃ ಶ್ರುಣು ॥** - ಸ್ಕಂದಪುರಾಣ (೧೪/೫)

ಭಕ್ತಿಯಿಂದ ಕೂಡಿದವನಾಗಿ ಯಾವನು ತುಲಸಿಗೋಸ್ಕರವಾಗಿ ವೃಂದಾವನವನ್ನು ಮಾಡುವನೋ ಅಥವಾ ಇತರರಿಂದ ಮಾಡಿಸುವನೋ ಅವನಿಗೂ ಸಹ ಅಪಾರ ಫಲವು ಲಭಿಸುವುದು.

★★★

# ತುಲಸೀಪೋಷಣೆಯ ಫಲ

ತುಲಸಿಯನ್ನು ಬೆಳೆಸುವಂತೆ ಅದನ್ನು ಪೋಷಿಸುವುದು ಸಹ ಅತ್ಯಂತ ಮಹತ್ತರವಾದ ಪುಣ್ಯಕಾರ್ಯ. ಇತರ ವೃಕ್ಷಗಳು ಒಂದು ಹಂತದಲ್ಲಿ ಮಾತ್ರ ಪುಣ್ಯಕರವೆನ್ನಿಸಿದರೆ, ತುಲಸಿಗೆ ಸಂಬಂಧಿಸಿದ ಪ್ರತಿಯೊಂದು ಕಾರ್ಯವು ಸಹ ಅತ್ಯಂತ ಪುಣ್ಯಕರವೆನ್ನಿಸಿರುವುದು ಗಮನಿಸಬೇಕಾದ ಅಂಶ. ಪರಿಶುದ್ಧವಾದ ಸ್ಥಳವನ್ನು ಆಯ್ಕೆಮಾಡಿ ಅದನ್ನು ಸ್ವಚ್ಛಗೊಳಿಸಿ ತುಲಸಿಯನ್ನು ಬೆಳೆಸಬೇಕು. ಸುತ್ತಮುತ್ತಲಿನ ಹುಲ್ಲು ಮೊದಲಾದವುಗಳನ್ನು ಕಾಲಕಾಲಕ್ಕೆ ತೆಗೆದುಹಾಕುತ್ತಿರಬೇಕು. ತುಲಸಿಯ ಬೆಳವಣಿಗೆಗೆ ಅಡ್ಡಿಯಾಗುವ ಯಾವುದಕ್ಕೂ ಅವಕಾಶವಿರದಂತೆ ನೋಡಿಕೊಳ್ಳುವುದು ಮುಖ್ಯವಾದ ಕಾರ್ಯ.

**ಛಿನ್ನಂತಿ ತೃಣಜಾತಾನಿ ತುಲಸೀಮೂಲಜಾನಿ ವೈ ।**
**ತದ್ದೇಹಸ್ಥಾಂ ಬ್ರಹ್ಮಹತ್ಯಾಂ ಛಿನೋತಿ ತತ್ಕ್ಷಣಾತ್ ಹರಿಃ ॥**

– ಪದ್ಮಪುರಾಣ, ಕ್ರಿಯಾಯೋಗಸಾರಖಂಡ

ತುಲಸಿಯ ಬೇರಿನ ಬಳಿ ಬೆಳೆದಿರುವ ಹುಲ್ಲು ಮೊದಲಾದವುಗಳನ್ನು ಯಾವನು ಕಿತ್ತುಹಾಕಿ ಸ್ವಚ್ಛಗೊಳಿಸುವನೋ ಅವನ ದೇಹದಲ್ಲಿನ ಬ್ರಹ್ಮಹತ್ಯೆಯನ್ನು ಸಹ ಶ್ರೀಹರಿಯು ಆ ಕ್ಷಣದಲ್ಲಿಯೇ ನಿರ್ಮೂಲಗೊಳಿಸುವನು.

**ಗೋಭ್ಯಃ ಶ್ವಭ್ಯಃ ಖರೇಭ್ಯಶ್ಚ ಮನುಷ್ಯೇಭ್ಯಶ್ಚ ರಕ್ಷತಿ ।**
**ಶಿಶುಭ್ಯಃ ತುಲಸೀಂ ಯಸ್ತು ತಂ ರಕ್ಷೇತ್ ಕೇಶವಃ ಸದಾ ॥** – ಪದ್ಮಪುರಾಣ

ಗೋವುಗಳಿಂದ, ನಾಯಿಗಳಿಂದ, ಕತ್ತೆಗಳಿಂದ, ಮನುಷ್ಯರಿಂದ ಹಾಗೂ ಶಿಶುಗಳಿಂದ ತುಲಸಿಗೆ ರಕ್ಷಣೆಯನ್ನು ಒದಗಿಸುವವನನ್ನು ಕೇಶವನಾದ ಶ್ರೀಹರಿಯು ಸದಾ ರಕ್ಷಿಸುವನು.

ವಿ : ಗೋವುಗಳು ತಿಂದು ಅಥವಾ ತುಳಿದು ತುಲಸಿಗೆ ಅಡ್ಡಿಯಾಗಬಹುದು. ನಾಯಿ, ಕತ್ತೆಗಳು ಅಶುಚಿಮಾಡಿ, ಮಲಿನಗೊಳಿಸಬಹುದು; ತಿಳುವಳಿಕೆ ಇಲ್ಲದ ಮನುಷ್ಯರು ಅಕಾಲದಲ್ಲಿ, ನಿಷಿದ್ಧದಿವಸಗಳಲ್ಲಿ, ವಿಹಿತವಲ್ಲದ ರೀತಿಯಲ್ಲಿ ತುಲಸಿಯನ್ನು ಬಿಡಿಸಿ ಅಪಚಾರವೆಸಗಬಹುದು; ಶಿಶುಗಳು ತಿಳುವಳಿಕೆ ಇಲ್ಲದೆ ಅಚಾರಮಾಡಬಹುದು. ಆದ್ದರಿಂದ ಅವರೆಲ್ಲರಿಂದ ತುಲಸಿಗೆ ರಕ್ಷಣೆ ಒದಗಿಸುವುದು ಅಗತ್ಯ ಕರ್ತವ್ಯ ಎಂದರ್ಥ.

★★★

## ತುಲಸಿಗೆ ನೀರೆರೆಯುವುದು

ತುಲಸಿಯನ್ನು ಬೆಳೆಸುವ ಕಾರ್ಯದಲ್ಲಿ ಕಾಲಕಾಲಕ್ಕೆ ನೀರೆರೆಯುವುದು ಮುಖ್ಯ. ಮಾವು ಮೊದಲಾದ ಅನೇಕ ವೃಕ್ಷಗಳಿಗೆ ಒಂದು ಹಂತದ ನಂತರ ನೀರೆರೆಯುವುದು ಮುಂತಾದವುಗಳ ಅಗತ್ಯ ಕಂಡುಬರುವುದಿಲ್ಲ. ಆದರೆ ತುಲಸಿಯು ಹಾಗಲ್ಲ. ಭಗವತ್ಪೂಜೆಗೆ ಅರ್ಹವಾಗುವಂತೆ ಸೂಕ್ತರೀತಿಯ ಬೆಳವಣಿಗೆಯನ್ನು ಹೊಂದಲು ಅದಕ್ಕೆ ಉಚಿತರೀತಿಯಲ್ಲಿ ನೀರೆರೆಯುವುದು ಅತ್ಯಂತ ಅಗತ್ಯ.

**ಕದಾಚಿತ್ ತುಲಸೀಂ ದುಗ್ಧೈಃ ಸೇಚಯೇದ್ಯೋ ನರೋತ್ತಮಃ ।**
**ತಸ್ಯ ವೇಶ್ಮನಿ ವಿಪ್ರರ್ಷೇ ಲಕ್ಷ್ಮೀರ್ಭವತಿ ನಿಶ್ಚಲಾ ॥** -ಬೃಹದ್ಧರ್ಮ

ಒಮ್ಮೆಯಾದರೂ ಸಹ ಹಾಲಿನಿಂದ ತುಲಸಿಯನ್ನು ಸಿಂಪಡಿಸುವ ಪುಣ್ಯವಂತನಾದ ಮಾನವನ ಮನೆಯಲ್ಲಿ ಸಂಪತ್ತು ಅಚಲವಾಗಿ ನೆಲೆಸುವುದು.

**ಏಕಂ ಕುಂಭೋದಕಂ ವಾऽಪಿ ಪ್ರೋಕ್ಷಯೇತ್ ತುಲಸೀವನೇ।**
**ತಸ್ಯ ಸರ್ವೇऽಪಿ ಪಿತರಃ ಸಾನಂದಾತ್ ಸ್ವರ್ಗಮಾಪ್ನುಯುಃ॥** – ಬೃಹದ್ಧರ್ಮ

ಒಂದು ಕೊಡ ನೀರನ್ನಾದರೂ ಸಹ ತುಲಸಿಯ ವನದಲ್ಲಿ ಸುರಿಯುವವನ ಪಿತೃಗಳೆಲ್ಲರೂ ಆನಂದದಿಂದ ಸ್ವರ್ಗಕ್ಕೆ ತೆರಳುವರು.

**ತುಲಸೀಮೂಲಮಾರಭ್ಯ ಯಾವದ್ಧಸ್ತಾಸ್ತು ಷೋಡಶ।**
**ದಶದಿಕ್ಷು ಮಹಾತೀರ್ಥಂ ತದೇವ ಸುರವಂದಿತಮ್॥** – ಬೃಹದ್ಧರ್ಮ

ತುಲಸಿಯ ಬೇರನ್ನು ಆರಂಭಿಸಿ ಸುತ್ತಲಿನ ಹದಿನಾರು ಮೊಳದಷ್ಟು ಸ್ಥಳದಲ್ಲಿ ಹತ್ತು ದಿಕ್ಕಿನಲ್ಲೂ ಇರುವ ಸ್ಥಳ ಸುರರು ಸಹ ನಮಿಸುವರು ಮಹಾತೀರ್ಥ ಎನ್ನಿಸುವುದು. (ಇದರಿಂದ ತುಲಸಿಯ ಸುತ್ತಲಿನ ಹತ್ತು ಮೊಳದಷ್ಟು ಸ್ಥಳವನ್ನು ಸಹ ಅತ್ಯಂತ ಪವಿತ್ರವೆಂದು ಭಾವಿಸಿ, ಯಾವುದೇ ರೀತಿಯ ಅಶುಚಿಯೂ ಆಗದಂತೆ ನೋಡಿಕೊಳ್ಳುವ್ಯದು ಅಗತ್ಯ ಕರ್ತವ್ಯ).

★★★

## ತುಲಸಿಯನ್ನು ಸ್ವತಃ ಬೆಳೆಸಿ ಪೂಜೆಗೆ ಉಪಯೋಗಿಸಬೇಕು

**ತುಲಸ್ಯಾದಿಸುಪುಷ್ಪೈಸ್ತು ಪರೇಣಾವಚಿತೈರ್ನರಃ।**
**ಅರ್ಧಂ ಸ ಫಲಮಾಪ್ನೋತಿ ಕ್ರೀತೇನ ಸ್ಯಾತ್ ಸಪಾದಭಾಕ್॥**

– ವಿಷ್ಣುಧರ್ಮೋತ್ತರ (೧೫/೩೦)

ಇನ್ನೊಬ್ಬರಿಂದ ತರಿಸಿದ ತುಲಸಿ, ಹೂವು ಮೊದಲಾದವುಗಳಿಂದ ಪೂಜೆ ಸಲ್ಲಿಸುವವನು ಪೂಜೆಯ ಅರ್ಧಫಲವನ್ನು ಮಾತ್ರ ಪಡೆಯುವನು, ಕೊಂಡುತಂದು ಪೂಜಿಸಿದಾಗ ದೊರೆಯುವ ಫಲ ಕಾಲುಭಾಗ ಮಾತ್ರ.

★★★

## ತುಲಸೀಸೇವನೆಯಿಂದ ಪುತ್ರಪ್ರಾಪ್ತಿ

ಮನುಷ್ಯನು ತನ್ನ ಜೀವನ ಸಾರ್ಥಕ್ಯಕ್ಕೆ ಗಳಿಸಲೇಬೇಕಾದ ಮೂರು ವಸ್ತುಗಳು ಎಂದರೆ ವಿದ್ಯೆ, ಸಾಧನೆ ಹಾಗೂ ಸಂತತಿ ಎಂಬ ಮಾತು[೧೦] ಶ್ರೀಭೀಮಸೇನದೇವರದು. ವಿದ್ಯೆ ಮೋಕ್ಷಕ್ಕೆ ಸಾಧನ ; ಸಾಧನೆ ವಿದ್ಯಾಪ್ರಾಪ್ತಿಯ ಪರಿಕರ; ಸಂತತಿ ವಿದ್ಯೆಯನ್ನು ಮುಂದಿನ ಪೀಳಿಗೆಗೆ ತಲುಪಿಸುವ ಸಾಧನ – ಹೀಗೆ ಈ ಮೂರೂ ಸಹ ಜ್ಞಾನದೊಂದಿಗೆ ನಿಕಟವಾದ ನಂಟನ್ನು

೧೦ ಪತಿತಸ್ಯಾಸ್ಯ ದೇಹಸ್ಯ ಕಾಷ್ಠ ವಿಷ್ಠಾ ಸಮಸ್ಯ ಚ।
ಫಲಾನಿ ತ್ರೀಣಿ ಶಿಷ್ಯಂತೇ ವಿದ್ಯಾ ಕರ್ಮ ಸುತಾ ಇತಿ॥ – ಮ.ಭಾ.ತಾ.ನಿ.

ಹೊಂದಿದೆ. ಆದ್ದರಿಂದ ಪುತ್ರಪ್ರಾಪ್ತಿಗಾಗಿ ಪ್ರಯತ್ನ ಮಾಡುವುದು ಸಕಾಮವೆನ್ನಿಸದೆ ಒಂದರ್ಥದಲ್ಲಿ ನಿಷ್ಕಾಮವೇ ಎನ್ನಿಸುವಂತಹ ಉತ್ತಮ ಬಯಕೆ. ಅದಕ್ಕಾಗಿ ಅನೇಕ ಬಗೆಯ ಸಾಧನವನ್ನು ಶಾಸ್ತ್ರಗಳು ವಿಧಿಸಿವೆ. ಅವುಗಳಲ್ಲಿ ತುಲಸೀಸೇವೆಯು ಒಂದು ಎಂಬುದು ಗಮನಿಸಬೇಕಾದ ಅಂಶ. ತುಲಸಿಸೇವನೆಯಿಂದ ಸಂತಾನಪ್ರಾಪ್ತಿ ಸಾಧ್ಯ ಎಂಬುದನ್ನು ತೋರಿಸಿದ ಹಿರಿಮೆ ಭಾಗವತಸಾರೋದ್ಧಾರಕಾರರಾದ ಶ್ರೀವಿಷ್ಣುತೀರ್ಥರ ಚರಿತ್ರೆಯಲ್ಲಿ ದಾಖಲಾಗಿದೆ. [೧೧]ಪಂಚರತ್ನಪ್ರಭಾ ಎಂಬ ಪಂಚರತ್ನ ಎಂಬ ಅವರ ಚರಿತ್ರೆಯ ವ್ಯಾಖ್ಯಾನದಲ್ಲಿ ಈ ವಿವರಗಳು ಬಂದಿವೆ. ಪುತ್ರಪ್ರಾಪ್ತಿಗೆ ಅಶ್ವತ್ಥದ ಪ್ರದಕ್ಷಿಣೆ ಮೊದಲಾದವುಗಳು ವಿಹಿತ. ಆದರೆ, ತುಲಸಿಯ ಸೇವೆ ಇನ್ನೂ ಹೆಚ್ಚಾಗಿ ಫಲಪ್ರದ ಎಂಬುದು ವಿಶೇಷ. ಮಾವು ಮೊದಲಾದ ವೃಕ್ಷಗಳಿಗೆ ಇಂತಹ ಮಹತ್ತ್ವ ಹೇಳಲ್ಪಟ್ಟಿಲ್ಲ. ತುಲಸಿಯಲ್ಲಿ ಗರ್ಭಧಾರಣೆಗೆ ಅಡ್ಡಿಯೆನ್ನಿಸುವ ದೋಷಗಳನ್ನು ಪರಿಹರಿಸುವ ಔಷಧಿಯ ಗುಣಗಳನ್ನು ವೈದ್ಯಶಾಸ್ತ್ರ ಗುರುತಿಸಿದೆ. ಇದರಿಂದ ತುಲಸಿಯ ಸೇವನೆ ಗರ್ಭದೋಷವನ್ನು ಪರಿಹರಿಸುವ ಸಾಮರ್ಥ್ಯವನ್ನು ಹೊಂದಿದ್ದು ವಿಹಿತ ರೀತಿಯಲ್ಲಿ ಸಲ್ಲಿಸುವ ಅಂತಹ ಸೇವನೆಯಿಂದ ತುಲಸಿಯು ಪ್ರಸನ್ನಳಾಗಿ ಸಂತತಿಯನ್ನು ನೀಡುವಳು ಎಂದು ಭಾವ.

**ಪ್ರದಕ್ಷಿಣಂ ಶತಂ ಕೃತ್ವಾ ನಮಸ್ಕಾರಶತಂ ತಥಾ ।**
**ಧೂಪದೀಪಾದಿನೈವೇದ್ಯೈಃ ಸ್ತೋತ್ರೇಣ ಚ ವಿಶೇಷತಃ ॥**
**ತೋಷಯೇತ್ ಪುತ್ರಕಾಮಾರ್ತಾ ವತ್ಸರಾತ್ ತನಯಂ ಲಭೇತ್ ॥**

– ಸೂತ್ರಸಂಹಿತೆ (೮/೨)

ಪ್ರತಿನಿತ್ಯ ನೂರು ಪ್ರದಕ್ಷಿಣೆ, ನೂರು ನಮಸ್ಕಾರಗಳನ್ನು ಹಾಕಿ, ಧೂಪ, ದೀಪಾದಿ ಉಪಚಾರಗಳಿಂದಲೂ, ನೈವೇದ್ಯಗಳಿಂದಲೂ, ಸ್ತೋತ್ರಗಳಿಂದಲೂ ತುಲಸಿಯನ್ನು ವಿಶೇಷವಾಗಿ ತೃಪ್ತಿಗೊಳಿಸಿದಲ್ಲಿ ಪುತ್ರಬಯಕೆಯಿಂದ ನೊಂದವಳು ಒಂದು ವರ್ಷದೊಳಗೇ ಪುತ್ರನನ್ನು ಪಡೆಯುವಳು.

**ಕ್ಷೀರೇಣ ಚೇಕ್ಷುಸಾರೇಣ ನಾರಿಕೇಲರಸೇನ ಚ ।**
**ವರ್ಧಯೇದ್ವತ್ಸರಂ ದೇವೀಂ ವಿನಿವೇದ್ಯ ಚ ಪಾಯಸಮ್ ॥**

---

೧೧ ಶ್ರೀವಿಷ್ಣುತೀರ್ಥರು, ಪತಿಗೃಹಕ್ಕೆ ಬಂದು ಹನ್ನೆರಡು ವರ್ಷಗಳು ಉರುಳಿದ್ದರೂ ಸಂತತಿರಹಿತಳಾಗಿದ್ದ ಮೊರಬ ಗ್ರಾಮದ ಸುಂಕದ ಅಧಿಕಾರಿಯ ಪತ್ನಿಗೆ 'ಗ್ರಾಮದ ಹೊರಗೆ ನದೀತೀರದಲ್ಲಿದ್ದ ಅನೇಕ ತುಲಸೀಗಿಡಗಳಿಗೆ ಗ್ರೀಷ್ಮಕಾಲದಲ್ಲಿ ನೀರೆರೆಯುವ ಕಾರ್ಯವನ್ನು' ಆದೇಶಿಸಿ, ಆ ಪುಣ್ಯದಿಂದ ಆಕೆಯು ಪುತ್ರವತಿಯಾಗುವಂತೆ ಕರುಣಿಸಿದರು ಎಂಬ ವಿಶೇಷ ವಿವರ 'ಪಂಚರತ್ನಪ್ರಭಾ'ದಲ್ಲಿ ಬಂದಿದೆ : **'ಅಲಮನಯಾ ನಮಸ್ಕ್ರಿಯಯಾ, ಮಾತಃ ! ಜ್ಞಾತಮಭಿಪ್ರೇತಂ ತೇ, ಬಹಿರ್ಗ್ರಾಮಾತ್ ಸರಿತ್ತಟೇ ಬಹವಃ ತುಲಸೀವೃಕ್ಷಾಃ ಸಂತಿ । ತಾನಸ್ಮಿನ್ ಗ್ರೀಷ್ಮಕಾಲೇ ಶೀತಲಾಭಿರದ್ಭಿಃ ಸಮ್ಯಕ್ ಸಿಂಚಯ । ತೇನ ತೇ ಪುತ್ರೋ ಭವಿಷ್ಯತಿ ।'** **- ಪಂಚರತ್ನಪ್ರಭಾ**

**ಭೋಜಯೇತ್ ತುಲಸೀಪ್ರೀತ್ಯೈ ಪರಮಾನ್ನೇನ ವರ್ಣಿನಮ್ ।**
**ವತ್ಸರಂ ಭಾರ್ಗವೇ ವಾರೇ ವಂಧ್ಯಾ ಪುತ್ರಮವಾಪ್ನುಯಾತ್ ॥**

– ಸೂತ್ರಸಂಹಿತೆ (೮/೩,೫)

ತುಲಸಿಯನ್ನು ಹಾಲು, ಕಬ್ಬಿನರಸ, ಎಳನೀರು – ಇವುಗಳನ್ನು, ಪಾಯಸವನ್ನು ಸಮರ್ಪಿಸಿ ಒಂದು ವರ್ಷಕಾಲ ಬೆಳೆಸಬೇಕು; ತುಲಸಿಯ ಪ್ರೀತ್ಯರ್ಥವಾಗಿ ಶುಕ್ರವಾರದಂದು ವಟುಗಳಿಗೆ ಪರಮಾನ್ನದಿಂದ ಭೋಜನಮಾಡಿಸಬೇಕು. ಹೀಗೆ ಮಾಡಿದಲ್ಲಿ ಬಂಜೆಯು ಸಹ ಪುತ್ರನನ್ನು ಪಡೆಯುವಳು.

**ಮಹಾನವಮ್ಯಾಂ ಸಂಪೂಜ್ಯ ತುಲಸೀಂ ಘೃತಪಾಯಸೈಃ ।**
**ಪುರಂಧ್ರೀಃ ಭೋಜಯೇದಷ್ಟೌ ವಂಧ್ಯಾ ಪುತ್ರಮವಾಪ್ನುಯಾತ್ ॥**

– ಪದ್ಮಪುರಾಣ

ಮಹಾನವಮಿಯಂದು ತುಪ್ಪ ಹಾಗೂ ಪಾಯಸಗಳಿಂದ ತುಲಸಿಯನ್ನು ಪೂಜಿಸಿ, ೮ ಜನ ಸುವಾಸಿನಿಯರಿಗೆ ಭೋಜನಮಾಡಿಸಿದಲ್ಲಿ ಬಂಜೆಯು ಸಹ ಪುತ್ರನನ್ನು ಪಡೆಯುವಳು.

**ಜಯಂತ್ಯಾಮರ್ಧರಾತ್ರೇ ತು ತುಲಸೀಪೂಜಯಾಽನಘ ।**
**ವಂಧ್ಯಾಽಪಿ ಲಭತೇ ಪುತ್ರಂ ಕೇಶವಸ್ಯ ಪ್ರಸಾದತಃ ॥** – ಪದ್ಮಪುರಾಣ

ಶ್ರೀಕೃಷ್ಣಜಯಂತಿಯಂದು ಅರ್ಧರಾತ್ರಿಯಲ್ಲಿ ತುಲಸಿಯನ್ನು ಪೂಜಿಸುವುದರಿಂದ ಶ್ರೀಹರಿಯ ಪ್ರಸಾದದಿಂದಾಗಿ, ಬಂಜೆಯು ಸಹ ಪುತ್ರನನ್ನು ಪಡೆಯುವಳು

★★★

## ಕಾರ್ತಿಕಮಾಸದಲ್ಲಿ ತುಲಸಿಯ ವಿಶೇಷಪೂಜೆ

ಮಾಸಗಳಲ್ಲಿ ಮಾಘಮಾಸ ಚೈತ್ರಾದಿಮಾಸಗಳಿಗಿಂತ ಮಿಗಿಲು; ಮಾಘಮಾಸಕ್ಕಿಂತ ವೈಶಾಖ ಇನ್ನೂ ಶ್ರೇಷ್ಠ; ಶ್ರಾವಣ, ಭಾದ್ರಪದ, ಆಶ್ವೀಜ ಹಾಗೂ ಕಾರ್ತೀಕಮಾಸಗಳು ವೈಶಾಖಕ್ಕಿಂತ ಶ್ರೇಷ್ಠ. ಈ ನಾಲ್ಕು ಮಾಸಗಳಲ್ಲೂ ಅನಂತರದವು ಮೊದಲನೆಯ ಮಾಸಗಳಿಗಿಂತ ಶ್ರೇಷ್ಠ. ಕೊನೆಯ ಮಾಸವಾದ ಕಾರ್ತೀಕವಂತೂ ಅತ್ಯಂತ ಶ್ರೇಷ್ಠ. ಅದಕ್ಕಾಗಿಯೇ ಕಾರ್ತಿಕಮಾಸವು ವರ್ಷದ ಸರ್ವಶ್ರೇಷ್ಠವಾದ ಮಾಸ ಎಂಬ ಹಿರಿಮೆಯನ್ನು ಹೊಂದಿದೆ. ಆ ಮಾಸದಲ್ಲಿ ಮಾಡುವ ಸಕಲ ಕಾರ್ಯಗಳೂ ಶ್ರೇಷ್ಠ. ಅದರಲ್ಲೂ ತುಲಸೀಪೂಜೆಯು ವಿಶೇಷ. ದೀಪದಾನವಂತೂ ತುಂಬಾ ಶ್ರೇಷ್ಠವಾದ ದಾನ. ಕಾರ್ತೀಕದಲ್ಲಿ ಇದು ಇನ್ನಷ್ಟು ಪವಿತ್ರ. ಕಾರ್ತಿಕವು ದೇವತೆಗಳ ಅರುಣೋದಯದ ಕಾಲ. ಅದಕ್ಕೆಂದೇ

ದೀಪದ ಮಹತ್ತ್ವ. ಅದಕ್ಕಾಗಿಯೇ ದೀಪದಾನವೂ ಮಹತ್ತ್ವಪೂರ್ಣ. ತುಲಸೀ ಸಮೇತವಾದಾಗ ಇದಕ್ಕೆ ಇರುವ ಮಹತ್ತ್ವ ವರ್ಣನೆಗೆ ಮೀರಿದ್ದು. ಕಾರ್ತಿಕಮಾಸವು ಮಾರ್ಗಶಿರ ಮಾಸದಿಂದ ಪ್ರಾರಂಭವಾಗುವ ಕೇಶವಾದಿ ಮಾಸಗಳಲ್ಲಿ ಕೊನೆಯದು ಎಂದರೆ ಇದು ಆ ವರ್ಷದ ಉಪಸಂಹಾರ ಸ್ವರೂಪದ ಮಾಸ; ಆ ವರ್ಷದ ಸಮಸ್ತ ಕರ್ಮಗಳನ್ನೂ ಶ್ರೀಹರಿಗೆ ಸಮರ್ಪಿಸುವ ವಿಶೇಷ ಪರ್ವಕಾಲ. ಸಮರ್ಪಣೆಗೆ ತುಲಸಿಯು ಅತ್ಯಂತ ಅಗತ್ಯವಾದುದರಿಂದ ಈ ಮಾಸದಲ್ಲಿ ತುಲಸಿಯ ಪೂಜೆ ವಿಶೇಷವಾಗಿ ವಿಹಿತವಾಗಿದೆ. ಇನ್ನೊಂದು ದೃಷ್ಟಿಯಲ್ಲಿಯೂ ಸಹ ಈ ಮಾಸದಲ್ಲಿ ತುಲಸಿಯ ಪೂಜೆಗೆ ಮಹತ್ತ್ವವಿದೆ. ಈ ಮಾಸ ಕಳೆಯುತ್ತಿದ್ದಂತೆಯೇ ಚಳಿಗಾಲವು ಕಾಣಿಸಿಕೊಳ್ಳಲು ಪ್ರಾರಂಭವಾಗುವುದು. ಆ ಕಾಲದಲ್ಲಿ ತುಲಸಿಯ ಸಂರಕ್ಷಣೆಗೆ ಹೆಚ್ಚು ಗಮನಹರಿಸಬೇಕಾಗುವುದು. ಕಾರಣ, ಆ ಮಾಸದಲ್ಲಿ ತುಲಸಿಯ ಬೆಳವಣಿಗೆ ಚಳಿ ಮೊದಲಾದ ಕಾರಣಗಳಿಂದ ತೀವ್ರಗತಿ- ಯಲ್ಲಿರುವುದಿಲ್ಲ. ಆದ್ದರಿಂದ ಅದಕ್ಕೆ ಹೆಚ್ಚಿನ ಗಮನಹರಿಸುವುದು ಸೂಕ್ತ. ಈ ಕಾರಣದಿಂದಲೂ ಸಹ ಅದರ ಪೂಜೆಯ ಬಗ್ಗೆ ಒತ್ತುಕೊಡುವ ಮೂಲಕ ಅದರ ಸಂರಕ್ಷಣೆಗೆ ಗಮನಹರಿಸುವ ಅಗತ್ಯವನ್ನು ಶಾಸ್ತ್ರಗಳು ಸಾರಿವೆ ಎಂದು ತಿಳಿಯಬಹುದು.

**ದೃಷ್ಟ್ವಾ ಸ್ಪೃಷ್ಟ್ವಾ ತಥಾ ಧ್ಯಾತಾ ಕಾರ್ತಿಕೇ ನಮಿತಾಽರ್ಚಿತಾ ।**
**ರೋಪಿತಾ ಸೇಚಿತಾ ನಿತ್ಯಂ ಪಾಪಂ ಹಂತಿ ಯುಗಾರ್ಜಿತಮ್ ॥**

**ಅಷ್ಟಧಾ ತುಲಸೀ ಯೈಸ್ತು ಸೇವಿತಾ ದ್ವಿಜಸತ್ತಮ ।**
**ಯುಗಕೋಟಿಸಹಸ್ರಾಣಿ ತೇ ವಸಂತಿ ಹರೇರ್ಗೃಹೇ ॥**

– ಪದ್ಮಪುರಾಣ (ಉತ್ತರಖಂಡ)

ದರ್ಶನ, ಸ್ಪರ್ಶನ, ಧ್ಯಾನ, ನಮನ, ಅರ್ಚನೆ, ರೋಪಣ, ಸೇಚನ – ಮೊದಲಾದ ಸೇವೆಗಳಿಂದ ತುಲಸಿಯು ಯುಗಗಟ್ಟಲೆ ಮಾಡಿದ ಪಾಪಗಳನ್ನು ನಾಶಪಡಿಸುವಳು. ಈ ಎಂಟು ರೀತಿಯಲ್ಲಿ ತುಲಸಿಯನ್ನು ಸೇವಿಸುವವರ ಮನೆಯಲ್ಲಿ ಕೋಟಿ, ಸಾವಿರಯುಗಗಳವರೆಗೆ ತುಲಸಿಯು ನೆಲೆಸುವಳು; ಹಾಗೆ ಸೇವಿಸುವವರು ಶ್ರೀಹರಿಯ ಮಂದಿರದಲ್ಲಿ ಕೋಟಿ ಸಾವಿರ ಯುಗಗಳಷ್ಟು ಕಾಲ ನೆಲೆಸುವರು.

**ತುಲಸೀ ಧಾತ್ರೀಯುಕ್ತಾ ಹಿ ಸಿಕ್ತೇ ಸತಿ ಚ ಕಾರ್ತಿಕೇ ।**
**ವಿಲಯಂ ಯಾಂತಿ ಪಾಪಾನಿ ಬ್ರಹ್ಮಹತ್ಯಾದಿಕಾನಿ ಚ ॥**

– ಸ್ಕಂದಪುರಾಣ (೨/೪/೧೨/೮೫)

ಧಾತ್ರಿಯೊಂದಿಗೆ ತುಲಸಿಯನ್ನು ನೀರೆರೆದು ಪೋಷಿಸುವವರ ಬ್ರಹ್ಮಹತ್ಯೆ ಮೊದಲಾದ ಪಾಪಗಳೆಲ್ಲ ಸಂಪೂರ್ಣವಾಗಿ ನಾಶಹೊಂದುವವು.

**ಸ್ನಾನಂ ಜಾಗರಣಂ ದೀಪಂ ತುಲಸೀವನಪಾಲನಮ್ ।**
**ಕಾರ್ತಿಕೇ ಮಾಸಿ ಕುರ್ವಂತಿ ತೇ ನರಾ ವಿಷ್ಣುಮೂರ್ತಯಃ ॥**
– ಸ್ಕಂದಪುರಾಣ, ವೈಷ್ಣವಖಂಡ (೨/೪/೩/೪೬)

ಕಾರ್ತಿಕಮಾಸದಲ್ಲಿ ಸ್ನಾನ, ಜಾಗರಣೆ, ದೀಪ ಹಾಗೂ ತುಲಸಿವನದ ರಕ್ಷಣೆ – ಇವುಗಳನ್ನು ಮಾಡುವ ನರರು ಪುಣ್ಯಸ್ವರೂಪಿಗಳೇ ಸರಿ.

**ತಸ್ಮಾನ್ನಾರದ ಮಾಸೇಽಸ್ಮಿನ್ ಕಾರ್ತಿಕೇ ಹರಿತುಷ್ಟಿದೇ ।**
**ಕರ್ತವ್ಯಾ ತುಲಸೀಪೂಜಾ ನಾತ್ರ ಕಾರ್ಯಾ ವಿಚಾರಣಾ ॥**
– ಸ್ಕಂದಪುರಾಣ (೨/೪/೮/೫೬)

ಆದ್ದರಿಂದ ಎಲೈ ನಾರದರೇ! ಶ್ರೀಹರಿಗೆ ಸಂತೋಷವನ್ನುಂಟುಮಾಡುವ ಕಾರ್ತಿಕ-ಮಾಸದಲ್ಲಿ ತುಲಸೀಪೂಜೆಯನ್ನು ಮಾಡಲೇಬೇಕು. ಈ ಬಗ್ಗೆ ವಿಚಾರ ಅಗತ್ಯವಿಲ್ಲ.

**ಇದಾನೀಂ ಕಾರ್ತಿಕೋ ಮಾಸೋ ವರ್ತತೇ ಹರಿವಲ್ಲಭ ।**
**ತತ್ರ ಸ್ನಾನಂ ಚ ದಾನಂ ಚ ವ್ರತಾನಿ ನಿಯಮಾನ್ ಕುರು ॥**

**ತುಲಸೀಪುಷ್ಪಸಹಿತಾಂ ಕುರು ಪೂಜಾಂ ಹರೇಃ ಸುತ ।**
**ದೀಪದಾನಂ ಚ ವಿವಿಧಂ ನಮಸ್ಕಾರಂ ಪ್ರದಕ್ಷಿಣಾಮ್ ॥**
– ಸ್ಕಂದಪುರಾಣ (೨/೪/೧೨/೩೯,೪೦)

ಇದೀಗ ಶ್ರೀಹರಿಗೆ ಪ್ರಿಯವಾದ ಕಾರ್ತೀಕಮಾಸವು ಒದಗಿದೆ. ಈ ಕಾಲದಲ್ಲಿ ಸ್ನಾನ, ದಾನ, ವ್ರತ ಹಾಗೂ ನಿಯಮಗಳನ್ನು ಆಚರಿಸು. ತುಲಸೀ ಹಾಗೂ ಪುಷ್ಪಗಳೊಂದಿಗೆ ಶ್ರೀಹರಿಯ ಪೂಜೆಯನ್ನು ಮಾಡು. ಬಗೆಬಗೆಯ ದೀಪಗಳನ್ನು ದಾನಮಾಡು. ನಮಸ್ಕಾರ ಪ್ರದಕ್ಷಿಣೆಗಳನ್ನು ಮಾಡು.

**ತುಲಸೀವನಮಧ್ಯೇ ಚ ಧಾತ್ರೀಮೂಲೇ ಚ ಕಾರ್ತಿಕೇ ।**
**ಕುರ್ಯಾದ್ಧರ್ಯರ್ಚನಂ ವಿಪ್ರ ವೈಕುಂಠಂ ಯಾತಿ ಸ ಧ್ರುವಮ್ ॥**
–ಪದ್ಮಪುರಾಣ (೩/೨೨/೨೫)

ಕಾರ್ತೀಕಮಾಸದಲ್ಲಿ ತುಲಸಿಯ ವನದ ಮಧ್ಯದಲ್ಲಿ ಧಾತ್ರಿಯ ಬುಡದಲ್ಲಿ ಶ್ರೀಹರಿಯ ಪೂಜೆಯನ್ನು ಮಾಡು. ಎಲೈ ಬ್ರಾಹ್ಮಣನೇ, ಹೀಗೆ ಮಾಡುವವನು ನಿಶ್ಚಿತವಾಗಿ ವೈಕುಂಠವನ್ನು ಸೇರುವನು.

**ಧಾತ್ರೀಫಲವಿಮಿಶ್ರೈಶ್ಚ ತುಲಸೀಪತ್ರಮಿಶ್ರಿತೈಃ ।**
**ಜಲೈಃ ಸ್ನಾತಿ ನರಸ್ತಸ್ಯ ಗಂಗಾಸ್ನಾನಫಲಂ ಸ್ಮೃತಮ್ ॥**
– ಸ್ಕಂದಪುರಾಣ (೨/೪/೧೩/೧೬), ಸ್ಕಂದಪುರಾಣ(೨/೪/೨೩/೬)

ಧಾತ್ರಿಯ ಫಲಗಳಿಂದ ಮಿಶ್ರಿತವಾದ ಹಾಗೂ ತುಲಸಿಪತ್ರಗಳಿಂದ ಮಿಶ್ರಿತವಾದ ನೀರಿನಿಂದ ಸ್ನಾನಮಾಡುವ ನರನಿಗೆ ಗಂಗಾಸ್ನಾನದ ಫಲವು ಲಭಿಸುವುದು ಎಂಬುದಾಗಿ ಸ್ಮೃತಿಗಳಲ್ಲಿ ಉಕ್ತವಾಗಿದೆ.

**ಧಾತ್ರೀಫಲಂ ಚ ತುಲಸೀ ಮೃತ್ತಿಕಾ ದ್ವಾರಕೋದ್ಭವಾ ।**
**ಸಫಲಂ ಜೀವಿತಂ ತಸ್ಯ ತ್ರಿತಯಂ ಯಸ್ಯ ವೇಶ್ಮನಿ ॥**

– ಸ್ಕಂದಪುರಾಣ (೨/೪/೧೨/೮೬)

ಧಾತ್ರೀಫಲ, ತುಲಸಿ ಹಾಗೂ ದ್ವಾರಕೆಯಲ್ಲಿನ ಮೃತ್ತಿಕೆ (ಗೋಪೀಚಂದನ) ಈ ಮೂರೂ ಯಾರ ಮನೆಯಲ್ಲಿರುವವೋ ಅವನ ಜೀವನ ಸಫಲವೆನ್ನಿಸುವುದು.

**ಧಾತ್ರೀಫಲಂ ಚ ತುಲಸೀ ಮೃತ್ತಿಕಾ ದ್ವಾರಕೋದ್ಭವಾ ।**
**ಯಸ್ಯ ದೇಹೇ ಸ್ಥಿತಾ ನಿತ್ಯಂ ಸ ಜೀವನ್ಮುಕ್ತ ಉಚ್ಯತೇ ॥**

– ಪದ್ಮಪುರಾಣ (೬/೧೦೭/೨೧)

ಧಾತ್ರೀಫಲ, ತುಲಸಿ ಹಾಗೂ ದ್ವಾರಕೆಯ ಮೃತ್ತಿಕೆ ಎಂದರೆ ಗೋಪೀಚಂದನ – ಈ ಮೂರೂ ಯಾರ ದೇಹದಲ್ಲಿ ಸದಾ ಇರುವುದೋ ಅವನು ಜೀವನ್ಮುಕ್ತ ಎನ್ನಿಸುವನು.

**ಸಂಪ್ರಾಪ್ತಂ ಕಾರ್ತಿಕಂ ದೃಷ್ಟ್ವಾ ನಿಯಮೇನ ಜನಾರ್ದನಃ ।**
**ಪೂಜನೀಯೋ ಮಹದ್ಭಿಶ್ಚ ಕೋಮಲೈಸ್ತುಲಸೀದಲೈಃ ॥**

– ಪದ್ಮಪುರಾಣ, ಉತ್ತರಖಂಡ (೬)

ಕಾರ್ತಿಕಮಾಸ ಬಂದದ್ದನ್ನು ನೋಡಿ ನಿಯಮದಿಂದ ಕೋಮಲವಾದ ತುಲಸೀದಳಗಳಿಂದ ಜನಾರ್ದನನನ್ನು ಮಹಾತ್ಮರು ಪೂಜಿಸಬೇಕು.

**ಕಾರ್ತಿಕೇ ತುಲಸೀಪತ್ರಂ ಯೋ ಭಕ್ತ್ಯಾ ವಿಷ್ಣವೇಽರ್ಪಯೇತ್ ।**
**ಸಂಸಾರಾಚ್ಚ ವಿನಿರ್ಮುಕ್ತೋ ಯಾತಿ ವಿಷ್ಣೋಃ ಪರಂ ಪದಮ್ ॥**

– ಸ್ಕಂದಪುರಾಣ (೨/೪/೬/೧೬)

ಕಾರ್ತೀಕಮಾಸದಲ್ಲಿ ಭಕ್ತಿಯಿಂದ ತುಲಸೀಪತ್ರವನ್ನು ಯಾವನು ವಿಷ್ಣುವಿಗೆ ಸಮರ್ಪಿಸುವನೋ ಅವನು ಸಂಸಾರದಿಂದ ಮುಕ್ತನಾಗಿ ವಿಷ್ಣುವಿನ ಪರಮಪದವನ್ನು ಹೊಂದುವನು.

**ಪ್ರಾತಃ ಸ್ನಾತ್ವಾ ಶುಚಿರ್ಭೂತ್ವಾ ಕಾರ್ತಿಕೇ ವಿಷ್ಣುತತ್ಪರಃ ।**
**ದೇವಂ ದಾಮೋದರಂ ಪೂಜ್ಯ ಕೋಮಲೈಸ್ತುಲಸೀದಲೈಃ ।**
**ಸ ತು ಮೋಕ್ಷಮವಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ॥**

– ಸ್ಕಂದಪುರಾಣ (೨/೪/೮/೨)

ಕಾರ್ತೀಕಮಾಸದಲ್ಲಿ ಪ್ರಾತಃಕಾಲದಲ್ಲಿ ಸ್ನಾನಮಾಡಿ ಶುಚಿರ್ಭೂತನಾಗಿ ಕೋಮಲವಾದ ತುಲಸೀದಳಗಳಿಂದ ದೇವನಾದ ದಾಮೋದರನನ್ನು ಪೂಜಿಸಿದವನು ಮೋಕ್ಷವನ್ನು ಪಡೆದು-ಕೊಳ್ಳುವನು; ಈ ಬಗ್ಗೆ ವಿಚಾರ ಮಾಡಬೇಕಾಗಿಲ್ಲ.

ತುಲಸೀಪತ್ರಲಕ್ಷೇಣ ಕಾರ್ತಿಕೇ ಯೋಽರ್ಚಯೇದ್ಧರಿಮ್ ।
ಪತ್ರೇ ಪತ್ರೇ ಮುನಿಶ್ರೇಷ್ಠ ಮೌಕ್ತಿಕಂ ಲಭತೇ ಫಲಮ್ ॥

– ಸ್ಕಂದಪುರಾಣ (೨/೪/೨/೩೪)

ಕಾರ್ತೀಕಮಾಸದಲ್ಲಿ ಲಕ್ಷತುಲಸೀಪತ್ರಗಳಿಂದ ಶ್ರೀಹರಿಯನ್ನು ಪೂಜಿಸುವವನು ಒಂದೊಂದು ಎಲೆಯ ಸಮರ್ಪಣೆಗೂ ಮುಕ್ತಿಯಲ್ಲಿ ದೊರೆಯುವ ಫಲವನ್ನು ಪಡೆಯುವನು.

ತುಲಸೀದಲಪುಷ್ಪಾಣಿ ಯೋ ದದ್ಯಾದ್ಧರಯೇ ಮುನೇ ।
ಕಾರ್ತಿಕೇ ಸಫಲಂ ಪಾಪಂ ಸೋಽತ್ರ ಜನ್ಮಾರ್ಜಿತಂ ದಹೇತ್ ॥

– ಪದ್ಮಪುರಾಣ, ಉತ್ತರಖಂಡ – ೬

ಕಾರ್ತೀಕಮಾಸದಲ್ಲಿ ತುಲಸೀದಳಗಳನ್ನೂ ಹೂವುಗಳನ್ನೂ ಸಮರ್ಪಿಸುವವನ ಜನ್ಮ ಸಫಲವೆನ್ನಿಸುವುದು, ಅವನು ಜನ್ಮಜನ್ಮಗಳಲ್ಲಿ ಮಾಡಿದ ಪಾಪಗಳನ್ನು ಬೂದಿಮಾಡಿಕೊಳ್ಳುವನು.

ಕಾರ್ತಿಕೇ ಚೈವ ಮಾಘೇ ತು ತುಲಸ್ಯಾ ಪೂಜಯೇದ್ಧರಿಮ್ ।
ವೈಶಾಖೇ ತು ವಿಶೇಷೇಣ ಪೂಜನಂ ಚ ಹರೇಃ ಸ್ಮೃತಮ್ ॥

– ಪದ್ಮಪುರಾಣ (೬/೧೯/೧೫೫)

ಕಾರ್ತೀಕ, ಮಾಘ ಹಾಗೂ ವೈಶಾಖಮಾಸಗಳಲ್ಲಿ ತುಲಸಿಯಿಂದ ಶ್ರೀಹರಿಯನ್ನು ವಿಶೇಷವಾಗಿ ಪೂಜಿಸಬೇಕು ಎಂಬುದಾಗಿ ಸ್ಮೃತಿಗಳಲ್ಲಿ ಹೇಳಲ್ಪಟ್ಟಿದೆ.

ಧಾತ್ರೀತುಲಸ್ಯೌ ತದ್ರಾಗಾತ್ ತಸ್ಯ ಪ್ರೀತಿಪ್ರದೇ ಸದಾ ।
ತತೋ ವಿಸ್ಮೃತದುಃಖೋಽಸೌ ವಿಷ್ಣುಸ್ತಾಭ್ಯಾಂ ಸಹೈವ ತು ॥
ವೈಕುಂಠಮಗಮದ್ಧೃಷ್ಟಃ ಸರ್ವದೇವನಮಸ್ಕೃತಃ ॥

ಕಾರ್ತಿಕೋದ್ಯಾಪನೇ ವಿಷ್ಣೋಸ್ತಸ್ಮಾತ್ಪೂಜಾ ವಿಧೀಯತೇ ।
ತುಲಸೀಮೂಲದೇಶೇ ತು ಪ್ರೀತಿದಾ ಸಾ ಯತಃ ಸ್ಮೃತಾ ॥

– ಸ್ಕಂದಪುರಾಣ (೨/೪/೨೩/೬-೮)

ಧಾತ್ರೀ ಹಾಗೂ ತುಲಸೀ ಇಬ್ಬರೂ ಭಕ್ತಿಯಿಂದ ಶ್ರೀಹರಿಯ ಬಳಿಗೆ ಧಾವಿಸಿದರು. ಕೂಡಲೇ ಹರ್ಷಿಸಿದ ಮಹಾವಿಷ್ಣುವು ಅವರಿಬ್ಬರೊಂದಿಗೆ ಸಕಲ ದೇವತೆಗಳಿಂದ ನಮಸ್ಕೃತನಾಗಿ ವೈಕುಂಠಕ್ಕೆ ತೆರಳಿದನು. ಆದ್ದರಿಂದ ಕಾರ್ತಿಕದ ಕೊನೆಯಲ್ಲಿ ತುಲಸಿಯ ಸನ್ನಿಧಿಯಲ್ಲಿ ಧಾತ್ರಿಪೂಜೆಯು ಸಹ ವಿಹಿತವಾಗಿದೆ.

**ಸ್ನಾನಂ ಚ ದೀಪದಾನಂ ಚ ತುಲಸೀವನಪಾಲನಮ್ ।**
**ಭೂಮಿಶಯ್ಯಾ ಬ್ರಹ್ಮಚರ್ಯಂ ತಥಾ ದ್ವಿದಲವರ್ಜನಮ್ ॥**

**ವಿಷ್ಣುಸಂಕೀರ್ತನಂ ಸತ್ಯಂ ಪುರಾಣಶ್ರವಣಂ ತಥಾ ।**
**ಕಾರ್ತಿಕೇ ಮಾಸಿ ಕುರ್ವಂತಿ ಜೀವನ್ಮುಕ್ತಾಸ್ತ ಏವ ಹಿ ॥**

– ಸ್ಕಂದಪುರಾಣ (೨/೪/೩/೧೦-೧೨)

ಕಾರ್ತೀಕಮಾಸದಲ್ಲಿ ದೀಪದಾನ, ತುಲಸೀವನ ಪಾಲನೆ, ನೆಲದ ಮೇಲೆ ಮಲಗುವುದು, ಬ್ರಹ್ಮಚರ್ಯ, ದ್ವಿದಳಧಾನ್ಯಗಳನ್ನು ತೊರೆಯುವುದು, ವಿಷ್ಣುಸಂಕೀರ್ತನೆ, ಪುರಾಣಶ್ರವಣ – ಇವುಗಳನ್ನು ಮಾಡುವವರು ಜೀವನ್ಮುಕ್ತರೇ ಸರಿ.

★★★

# ತುಲಸೀಪೂಜೆಯ ಫಲ

ಭಗವಂತನು ಪೂಜ್ಯನಾಗಿರುವಂತೆ ಅವನ ಭಕ್ತವರ್ಗದ ದೇವತೆಗಳು, ವೈಷ್ಣವ ಜನರು ಪೂಜ್ಯರಾಗಿರುವಂತೆ ಪೂಜಾಸಾಧನ ದ್ರವ್ಯಗಳು ಸಹ ಪೂಜ್ಯವಾಗಿವೆ. ಕಲಶಪೂಜೆ, ಶಂಖಪೂಜೆ, ಘಂಟಾಪೂಜೆ ಮೊದಲಾದವುಗಳು ಇದಕ್ಕೆ ನಿದರ್ಶನ. ಅದರಂತೆ ಭಗವತ್ಪೂಜೆಯ ಸರ್ವಶ್ರೇಷ್ಠ ಪರಿಕರವಾದ ತುಲಸಿಯು ಸಹ ನಿತ್ಯಪೂಜೆಗೆ ಅರ್ಹಳಾಗಿರುವಳು. ಉಳಿದವುಗಳ ಪೂಜೆ ಸಂಕ್ಷಿಪ್ತವಾಗಿದ್ದರೆ, ತುಲಸಿಯ ಪೂಜೆ ಮಾತ್ರ ವಿಸ್ತಾರವಾಗಿಯೇ ನಡೆಯಬೇಕು ಎಂಬುದು ವಿಶೇಷ. ಅದಕ್ಕೆ ಮುಖ್ಯಕಾರಣ ತುಲಸಿಯಲ್ಲಿ ಮುಖ್ಯವಾಗಿ ಮಹಾಲಕ್ಷ್ಮೀ ನೆಲೆಸಿರುವುದೇ ಆಗಿದೆ. ಪೂಜಾದ್ರವ್ಯಗಳನ್ನು ಅವುಗಳಿಗೆ ವಿಹಿತವಾದ ದೇವತೆಗಳನ್ನು ಆಹ್ವಾನಿಸಿ ಪೂಜಿಸಬೇಕು. ಆದರೆ, ತುಲಸಿಗೆ ಪ್ರತ್ಯೇಕವಾದ ಆವಾಹನೆಯ ಅಗತ್ಯವೇ ಇರದು. ಅದರಲ್ಲಿ ಮಹಾಲಕ್ಷ್ಮಿಯ ನಿತ್ಯ ಸನ್ನಿಧಾನ ಎಂಬುದರಿಂದಾಗಿ ಇಂತಹ ವಿಶೇಷ ಮಹತ್ತ್ವ. ತುಲಸಿಯಿಂದ ಹರಿಯನ್ನು ಪೂಜಿಸುವುದು ಫಲದಾಯಕವೆಂಬುದು ಸರ್ವವಿದಿತ. ಆದರೆ, ಕೇವಲ ತುಲಸಿಯನ್ನೇ ಸಾಕ್ಷಾತ್ತಾಗಿ ಅನುಸಂಧಾನಪೂರ್ವಕವಾಗಿ ಪೂಜಿಸುವುದೂ ಸಹ ತಾರಕ ಎಂಬುದು ವಿಶೇಷ. ತುಲಸಿಯಲ್ಲಿ ಮಹಾಲಕ್ಷ್ಮಿಯ ಸನ್ನಿಧಾನ; ಮಹಾಲಕ್ಷ್ಮಿಯಲ್ಲಿ ಶ್ರೀಹರಿಯ ನಿತ್ಯ ಸನ್ನಿಧಾನ. ಅದರಿಂದಾಗಿಯೇ ತುಲಸೀ ಪೂಜೆಯೂ ಸಹ ಶ್ರೀಹರಿಪೂಜೆಯಂತೆಯೇ ಮಾನ್ಯವಾಗುವುದು ಎಂದು ಭಾವ.

**ಸುಕೃತೋ ದುಷ್ಕೃತೋ ವಾऽಪಿ ತುಲಸ್ಯಾ ಯೋऽರ್ಚಯೇದ್ಧರಿಮ್ ।**
**ದೇಹಾಂತೇ ದಿವ್ಯಯಾನೇನ ವಿಷ್ಣುಭಕ್ತೈಃ ಸ ನೀಯತೇ ॥**

– ವಿಷ್ಣುಧರ್ಮೋತ್ತರ (೧೫/೨೨)

ಒಳ್ಳೆಯವನೋ ಕೆಟ್ಟವನೋ ಯಾವನೇ ಆದರೂ ತುಲಸಿಯಿಂದ ಶ್ರೀಹರಿಯನ್ನು ಪೂಜಿಸಿದಲ್ಲಿ ದೇಹ ಅಳಿದ ಮೇಲೆ ದಿವ್ಯಯಾನದಲ್ಲಿ ವಿಷ್ಣುಭಕ್ತರಿಂದ ಕರೆದೊಯ್ಯಲ್ಪಡುವನು.

**ತುಲಸೀಮಂಜರೀಭಿರ್ಯಃ ಕುರ್ಯಾದ್ಧರಿಪದಾರ್ಚನಮ್ ।**
**ನ ಸ ಗರ್ಭಮವಾಪ್ನೋತಿ ಮುಕ್ತಿಭಾಗೀ ನ ಸಂಶಯಃ ॥**

– ವಿಷ್ಣುಧರ್ಮೋತ್ತರ (೧೫/ ೩೪)

ಯಾವನು ತುಲಸಿಮಂಜರಿಗಳಿಂದ ಶ್ರೀಹರಿಯ ಪಾದಗಳನ್ನು ಪೂಜಿಸುವನೋ ಅವನು ಮತ್ತೆ ಗರ್ಭವನ್ನು ಹೊಂದುವುದಿಲ್ಲ ; ಮುಕ್ತಿಗೇ ಪಾತ್ರನಾಗುವನು; ಸಂಶಯವಿಲ್ಲ.

**ಏಕಕಾಲಂ ದ್ವಿಕಾಲಂ ವಾ ತ್ರಿಕಾಲಂ ವಾऽಪಿ ಯೋ ನರಃ ।**
**ಸಂಪೂಜ್ಯ ತುಲಸೀಂ ದೇವೀಂ ಕೃತಕೃತ್ಯೋ ಭವಿಷ್ಯತಿ ॥**
**[೧೨]ನರಃ ಸಾಯುಜ್ಯಮಾಪ್ನೋತಿ ತಸ್ಯೈವ ಜಗತೀಪತೇಃ ॥**

– ವಿಷ್ಣುಧರ್ಮೋತ್ತರ (೧೫/೩೭)

ಒಂದು ಕಾಲದಲ್ಲಾಗಲಿ, ಎರಡು ಕಾಲದಲ್ಲಾಗಲಿ, ಅಥವಾ ಮೂರುಕಾಲದಲ್ಲಾಗಲಿ ಯಾವ ಮನುಷ್ಯನು ತುಲಸಿಯನ್ನು ಪೂಜಿಸುವನೋ ಅವನು ಕೃತಕೃತ್ಯನೇ ಆಗುವನು ಹಾಗೂ ಜಗನ್ನಾಥನಾದ ಶ್ರೀಹರಿಯ ಸಾಯುಜ್ಯವನ್ನೇ ಪಡೆಯುವನು.

**ಹೇಮಪುಷ್ಪಸಹಸ್ರೇಣ ಯೋऽರ್ಚಯೇದ್ವತ್ಸರಂ ಹರಿಮ್ ।**
**ತುಲಸೀಪತ್ರಮಾತ್ರಸ್ಯ ಕಲಾಂ ನಾರ್ಹತಿ ಷೋಡಶೀಮ್ ॥**

– ವಿಷ್ಣುಧರ್ಮೋತ್ತರ (೧೫/೧೨)

ಸಾವಿರಾರು ಸುವರ್ಣಪುಷ್ಪಗಳಿಂದ ಒಂದು ವರ್ಷಕಾಲ ಶ್ರೀಹರಿಯನ್ನು ಪೂಜಿಸುವ ಫಲವು ಒಂದೇ ಒಂದು ತುಲಸಿಪತ್ರದಿಂದ ಶ್ರೀಹರಿಯನ್ನು ಪೂಜಿಸುವವನ ಪುಣ್ಯದ ಹದಿನಾರನೆಯ ಒಂದಂಶಕ್ಕೂ ಸಾಟಿ ಎನ್ನಿಸದು.

---

೧೨ ಯೋ ದದ್ಯಾತ್ ತುಲಸೀಪತ್ರಂ ಭಕ್ತ್ಯಾ ವಿಷ್ಣೋಃ ಸಮಾಹಿತಃ ।
ನರಃ ಸಾಯುಜ್ಯಮಾಪ್ನೋತಿ ತಸ್ಯೈವ ಜಗತೀಪತೇಃ ॥ – ವಿಷ್ಣುಧರ್ಮೋತ್ತರ (೧೫/೧೦)

**ತಸ್ಮಾತ್ ಸರ್ವಪ್ರಯತ್ನೇನ ಪೂಜನೀಯಾ ಸದಾ ಬುಧೈಃ।**
**ಪೂಜಿತಾ ತುಲಸೀ ದೇವೀ ಸರ್ವಾನ್ ಕಾಮಾನ್ ಪ್ರಯಚ್ಛತಿ ॥**
– ವಿಷ್ಣುಧರ್ಮೋತ್ತರ (೧೫/೨೩)

ಆದ್ದರಿಂದ ಜ್ಞಾನಿಗಳಾದವರು ಸರ್ವಪ್ರಯತ್ನದಿಂದ ತುಲಸೀದೇವಿಯನ್ನು ಪೂಜಿಸಲೇಬೇಕು. ಹಾಗೆ ಪೂಜಿಸಿದಾಗ ತುಲಸಿಯು ಸಕಲ ಬಯಕೆಗಳನ್ನು ಸಹ ನೀಡುವಳು.

**ತುಲಸೀದಲಮಾಹಾತ್ಮ್ಯಂ ಶ್ರುಣುಷ್ವಾದ್ಯ ಸಮಾಹಿತಃ।**
**ತೇನಾಧೀತಂ ಶ್ರುತಂ ತೇನ ತೇನ ಸರ್ವಮನುಷ್ಠಿತಮ್ ॥**
– ವಿಷ್ಣುಧರ್ಮೋತ್ತರ (೧೪/೪)

ಈಗ ತುಲಸಿದಳಮಾಹಾತ್ಮ್ಯವನ್ನು ಗಮನಕೊಟ್ಟು ಕೇಳಿರಿ, ಅದರಿಂದ ಅಧ್ಯಯನ ಮಾಡಿದ, ಶ್ರವಣಮಾಡಿದ ಸಕಲ ಪುಣ್ಯಕಾರ್ಯಗಳ ಫಲವೂ ಸಹ ಲಭಿಸುವುದು.

**ಚಾಂದ್ರಾಯಣಾಯುತಂ ಯಸ್ತು ಕುರುತೇ ಕಾಯಶೋಧನಮ್ ।**
**ತುಲಸೀಸೇವನಾದೇವ ಹೇರಂಬೋ ವಿಜಿತೇಂದ್ರಿಯಃ ॥**
**ತಾರಕಂ ಸಮರೇ ಹತ್ವಾ ದೇವಸೇನಾಧಿಪೋಽಭವತ್ ॥**
– ಗರುಡಪುರಾಣ (೧೩/೪)

ಹತ್ತುಸಾವಿರ ಚಾಂದ್ರಾಯಣವ್ರತಗಳನ್ನು ಮಾಡಿದಾಗ ದೇಹಕ್ಕೆ ಲಭಿಸುವ ಶುದ್ಧಿಯು ತುಲಸಿಯ ಸೇವನೆಯಿಂದಲೇ ಲಭಿಸುವುದು. ಅದರಿಂದಾಗಿಯೇ ಷಣ್ಮುಖನು ಜಿತೇಂದ್ರಿಯನೆನ್ನಿಸಿ ಯುದ್ಧದಲ್ಲಿ ತಾರಕಾಸುರನನ್ನು ಸಂಹರಿಸಿ, ದೇವತೆಗಳ ಸೇನಾಧಿಪತಿಯಾದನು.

**ತುಲಸೀಸೇವನಾದೇವ ಪಕ್ಷಿರಾಜೋ ಮಹಾಬಲಃ।**
**ವಿಷ್ಣುವಾಹನತಾಂ ಪ್ರಾಪ್ತೋ ಜಹಾರಾಮೃತಮುತ್ತಮಮ್ ॥**
– ಗರುಡಪುರಾಣ (೧೩/೫)

ತುಲಸಿಯನ್ನು ಸೇವಿಸಿದ್ದರಿಂದಲೇ ಪಕ್ಷಿರಾಜನಾದ ಗರುಡನು ಮಹಾಬಲಶಾಲಿಯಾಗಿ ವಿಷ್ಣುವಿಗೆ ವಾಹನವಾದನು; ಉತ್ತಮವಾದ ಅಮೃತವನ್ನು ತಂದನು.

**ಆರಾಧ್ಯ ನಂದೀ ದೇವೇಶೀಂ ಶಂಭೋರಾರಾಧನಕ್ಷಮಃ।**
**ಅಚಲಾ ಛಲಾಶ್ಚಾಗಾಃ ತುಲಸೀಸೇವಯಾಽನಘ ॥**
**ಬಭೂವುರ್ಭೂಮಿಧರಣೇ ಪಟೀಯಾಂಸಃ ಸುರಾಯುಷಃ।**
– ಗರುಡಪುರಾಣ (೧೩/೬,೭)

**ಸುಕೃತೋ ದುಷ್ಕೃತೋ ವಾऽಪಿ ತುಲಸ್ಯಾ ಯೋऽರ್ಚಯೇದ್ಧರಿಮ್ ।**
**ದೇಹಾಂತೇ ದಿವ್ಯಯಾನೇನ ವಿಷ್ಣುಭಕ್ತ್ಯೈಃ ಸ ನೀಯತೇ ॥**

– ವಿಷ್ಣುಧರ್ಮೋತ್ತರ (೧೫/೨೨)

ಒಳ್ಳೆಯವನೋ ಕೆಟ್ಟವನೋ ಯಾವನೇ ಆದರೂ ತುಲಸಿಯಿಂದ ಶ್ರೀಹರಿಯನ್ನು ಪೂಜಿಸಿದಲ್ಲಿ ದೇಹ ಅಳಿದ ಮೇಲೆ ದಿವ್ಯಯಾನದಲ್ಲಿ ವಿಷ್ಣುಭಕ್ತರಿಂದ ಕರೆದೊಯ್ಯಲ್ಪಡುವನು.

**ತುಲಸೀಮಂಜರೀಭಿರ್ಯಃ ಕುರ್ಯಾದ್ಧರಿಪದಾರ್ಚನಮ್ ।**
**ನ ಸ ಗರ್ಭಮವಾಪ್ನೋತಿ ಮುಕ್ತಿಭಾಗೀ ನ ಸಂಶಯಃ ॥**

– ವಿಷ್ಣುಧರ್ಮೋತ್ತರ (೧೫/ ೩೪)

ಯಾವನು ತುಲಸಿಮಂಜರಿಗಳಿಂದ ಶ್ರೀಹರಿಯ ಪಾದಗಳನ್ನು ಪೂಜಿಸುವನೋ ಅವನು ಮತ್ತೆ ಗರ್ಭವನ್ನು ಹೊಂದುವುದಿಲ್ಲ ; ಮುಕ್ತಿಗೇ ಪಾತ್ರನಾಗುವನು; ಸಂಶಯವಿಲ್ಲ.

**ಏಕಕಾಲಂ ದ್ವಿಕಾಲಂ ವಾ ತ್ರಿಕಾಲಂ ವಾऽಪಿ ಯೋ ನರಃ ।**
**ಸಂಪೂಜ್ಯ ತುಲಸೀಂ ದೇವೀಂ ಕೃತಕೃತ್ಯೋ ಭವಿಷ್ಯತಿ ॥**
**[೧೨]ನರಃ ಸಾಯುಜ್ಯಮಾಪ್ನೋತಿ ತಸ್ಯೈವ ಜಗತೀಪತೇಃ ॥**

– ವಿಷ್ಣುಧರ್ಮೋತ್ತರ (೧೫/೩೭)

ಒಂದು ಕಾಲದಲ್ಲಾಗಲಿ, ಎರಡು ಕಾಲದಲ್ಲಾಗಲಿ, ಅಥವಾ ಮೂರುಕಾಲದಲ್ಲಾಗಲಿ ಯಾವ ಮನುಷ್ಯನು ತುಲಸಿಯನ್ನು ಪೂಜಿಸುವನೋ ಅವನು ಕೃತಕೃತ್ಯನೇ ಆಗುವನು ಹಾಗೂ ಜಗನ್ನಾಥನಾದ ಶ್ರೀಹರಿಯ ಸಾಯುಜ್ಯವನ್ನೇ ಪಡೆಯುವನು.

**ಹೇಮಪುಷ್ಪಸಹಸ್ರೇಣ ಯೋऽರ್ಚಯೇದ್ವತ್ಸರಂ ಹರಿಮ್ ।**
**ತುಲಸೀಪತ್ರಮಾತ್ರಸ್ಯ ಕಲಾಂ ನಾರ್ಹತಿ ಷೋಡಶೀಮ್ ॥**

– ವಿಷ್ಣುಧರ್ಮೋತ್ತರ (೧೫/೧೨)

ಸಾವಿರಾರು ಸುವರ್ಣಪುಷ್ಪಗಳಿಂದ ಒಂದು ವರ್ಷಕಾಲ ಶ್ರೀಹರಿಯನ್ನು ಪೂಜಿಸುವ ಫಲವು ಒಂದೇ ಒಂದು ತುಲಸಿಪತ್ರದಿಂದ ಶ್ರೀಹರಿಯನ್ನು ಪೂಜಿಸುವವನ ಪುಣ್ಯದ ಹದಿನಾರನೆಯ ಒಂದಂಶಕ್ಕೂ ಸಾಟಿ ಎನ್ನಿಸದು.

---

೧೨ ಯೋ ದದ್ಯಾತ್ ತುಲಸೀಪತ್ರಂ ಭಕ್ತ್ಯಾ ವಿಷ್ಣೋಃ ಸಮಾಹಿತಃ ।
ನರಃ ಸಾಯುಜ್ಯಮಾಪ್ನೋತಿ ತಸ್ಯೈವ ಜಗತೀಪತೇಃ ॥ – ವಿಷ್ಣುಧರ್ಮೋತ್ತರ (೧೫/೧೦)

ತಸ್ಮಾತ್ ಸರ್ವಪ್ರಯತ್ನೇನ ಪೂಜನೀಯಾ ಸದಾ ಬುಧೈಃ।
ಪೂಜಿತಾ ತುಲಸೀ ದೇವೀ ಸರ್ವಾನ್ ಕಾಮಾನ್ ಪ್ರಯಚ್ಛತಿ ॥
- ವಿಷ್ಣುಧರ್ಮೋತ್ತರ (೧೫/೨೩)

ಆದ್ದರಿಂದ ಜ್ಞಾನಿಗಳಾದವರು ಸರ್ವಪ್ರಯತ್ನದಿಂದ ತುಲಸೀದೇವಿಯನ್ನು ಪೂಜಿಸಲೇಬೇಕು. ಹಾಗೆ ಪೂಜಿಸಿದಾಗ ತುಲಸಿಯು ಸಕಲ ಬಯಕೆಗಳನ್ನು ಸಹ ನೀಡುವಳು.

ತುಲಸೀದಲಮಾಹಾತ್ಮ್ಯಂ ಶ್ರುಣುಷ್ವಾದ್ಯ ಸಮಾಹಿತಃ।
ತೇನಾಧೀತಂ ಶ್ರುತಂ ತೇನ ತೇನ ಸರ್ವಮನುಷ್ಠಿತಮ್ ॥
- ವಿಷ್ಣುಧರ್ಮೋತ್ತರ (೧೪/೪)

ಈಗ ತುಲಸಿದಳಮಾಹಾತ್ಮ್ಯವನ್ನು ಗಮನಕೊಟ್ಟು ಕೇಳಿರಿ, ಅದರಿಂದ ಅಧ್ಯಯನ ಮಾಡಿದ, ಶ್ರವಣಮಾಡಿದ ಸಕಲ ಪುಣ್ಯಕಾರ್ಯಗಳ ಫಲವೂ ಸಹ ಲಭಿಸುವುದು.

ಚಾಂದ್ರಾಯಣಾಯುತಂ ಯಸ್ತು ಕುರುತೇ ಕಾಯಶೋಧನಮ್।
ತುಲಸೀಸೇವನಾದೇವ ಹೇರಂಬೋ ವಿಜಿತೇಂದ್ರಿಯಃ॥
ತಾರಕಂ ಸಮರೇ ಹತ್ವಾ ದೇವಸೇನಾಧಿಪೋऽಭವತ್ ॥
- ಗರುಡಪುರಾಣ (೧೩/೪)

ಹತ್ತುಸಾವಿರ ಚಾಂದ್ರಾಯಣವ್ರತಗಳನ್ನು ಮಾಡಿದಾಗ ದೇಹಕ್ಕೆ ಲಭಿಸುವ ಶುದ್ಧಿಯು ತುಲಸಿಯ ಸೇವನೆಯಿಂದಲೇ ಲಭಿಸುವುದು. ಅದರಿಂದಾಗಿಯೇ ಷಣ್ಮುಖನು ಜಿತೇಂದ್ರಿಯನೆನ್ನಿಸಿ ಯುದ್ಧದಲ್ಲಿ ತಾರಕಾಸುರನನ್ನು ಸಂಹರಿಸಿ, ದೇವತೆಗಳ ಸೇನಾಧಿಪತಿಯಾದನು.

ತುಲಸೀಸೇವನಾದೇವ ಪಕ್ಷಿರಾಜೋ ಮಹಾಬಲಃ।
ವಿಷ್ಣುವಾಹನತಾಂ ಪ್ರಾಪ್ತೋ ಜಹಾರಾಮೃತಮುತ್ತಮಮ್ ॥
- ಗರುಡಪುರಾಣ (೧೩/೫)

ತುಲಸಿಯನ್ನು ಸೇವಿಸಿದ್ದರಿಂದಲೇ ಪಕ್ಷಿರಾಜನಾದ ಗರುಡನು ಮಹಾಬಲಶಾಲಿಯಾಗಿ ವಿಷ್ಣುವಿಗೆ ವಾಹನವಾದನು; ಉತ್ತಮವಾದ ಅಮೃತವನ್ನು ತಂದನು.

ಆರಾಧ್ಯ ನಂದೀ ದೇವೇಶೀಂ ಶಂಭೋರಾರಾಧನಕ್ಷಮಃ।
ಅಚಲಾ ಛಲಾಶ್ಚಾಗಾಃ ತುಲಸೀಸೇವಯಾऽನಘ ॥
ಬಭೂವುರ್ಭೂಮಿಧರಣೇ ಪಟೀಯಾಂಸಃ ಸುರಾಯುಷಃ।
- ಗರುಡಪುರಾಣ (೧೩/೬,೭)

ದೇವತೆಗಳ ಒಡತಿಯಾದ ತುಲಸಿಯನ್ನು ಆರಾಧಿಸಿದ್ದರಿಂದಲೇ ನಂದಿಯು ಶಿವನ ಪೂಜೆಯನ್ನು ಮಾಡುವ ಅರ್ಹತೆಯನ್ನು ಪಡೆದುಕೊಂಡನು. ಚಲಿಸುತ್ತಿದ್ದ ಬೆಟ್ಟಗಳು ತುಲಸಿಯ ಸೇವನೆಯಿಂದಲೇ ಸ್ಥಿರವೆನ್ನಿಸುವಂತಾಗಿ, ಭೂಧರಗಳೆನ್ನಿಸಿದವು.



ಸರ್ವೇಷಾಮಪಿ ಜಂತೂನಾಂ ಋಷೀಣಾಮಪಿ ಯೋಗಿನಾಮ್ ।
ಪತಿವ್ರತಾನಾಂ ನಾರೀಣಾಂ ಸಾ ಪೂಜ್ಯಾ ಕಾರ್ಯಸಿದ್ಧಯೇ ॥

- ಗರುಡಪುರಾಣ (೧೩/೮)

ಸಕಲ ಪ್ರಾಣಿಗಳಿಗೂ, ಋಷಿಗಳಿಗೂ, ಯೋಗಿಗಳಿಗೂ ಪತಿವ್ರತಾಸ್ತ್ರೀಯರಿಗೂ ಕಾರ್ಯಸಿದ್ಧಿಗಾಗಿ ತುಲಸಿಯು ಪೂಜ್ಯಳೆನ್ನಿಸಿರುವಳು.

ರಂಭಾ ಹ್ಯಾಪ್ಸರಸಾಂ ಮಧ್ಯೇ ತುಲಸೀಸೇವಯಾ ಪುರಾ ।
ದೇವೈರ್ದತ್ತಂ ವರಂ ಲಬ್ಧ್ವಾ ದೇವೇಂದ್ರಪ್ರಿಯತಾಮಗಾತ್ ।
ಅತಶ್ಚ ತುಲಸೀ ಪೂಜ್ಯಾ ವಿಶೇಷೇಣ ಹರೇರ್ದಿನೇ ॥

- ಗರುಡಪುರಾಣ (೧೩/೯)

ಅಪ್ಸರೆಯರಲ್ಲಿ ಒಬ್ಬಳಾದ ರಂಭೆಯು ಹಿಂದೆ ತುಲಸಿಯನ್ನು ಸೇವಿಸಿದ್ದರಿಂದಲೇ ದೇವತೆಗಳಿಂದ ವರಪಡೆದು, ದೇವೇಂದ್ರನಿಗೆ ಪ್ರಿಯಳೆನ್ನಿಸಿದಳು. ಆದ್ದರಿಂದ ತುಲಸಿಯು ಹರಿದಿನದಲ್ಲಿ ವಿಶೇಷವಾಗಿ ಪೂಜ್ಯಳೆನ್ನಿಸಿರುವಳು.

ಅರ್ಧೋದಯೇ ಮಾಘಮಾಸೇ ಸ್ನಾಯಾತ್ ತನ್ಮೂಲಪಾಂಸುಭಿಃ ।
ಕುಲತ್ರಯಂ ಸಮುದ್ಧಾರ್ಯ ವಿಷ್ಣುಲೋಕೇ ಮಹೀಯತೇ ॥

- ಗರುಡಪುರಾಣ (೧೩/೧೦ )

ಮಾಘಮಾಸದಲ್ಲಿ ಅರ್ಧೋದಯ ಪರ್ವಕಾಲದಲ್ಲಿ ಶ್ರೀತುಲಸಿಯ ಮೃತ್ತಿಕೆಯಿಂದ ಸ್ನಾನಮಾಡಬೇಕು. ಅದರಿಂದ ಮೂರು ಕುಲಗಳನ್ನು ಸಹ ಉದ್ಧರಿಸಿ ವಿಷ್ಣುಲೋಕದಲ್ಲಿ ಗೌರವಿಸಲ್ಪಡುವನು.



ಶ್ರೀಮತ್ತುಲಸ್ಯಾಽರ್ಚಯತೇ ಸಕೃಚ್ಚ ಪತ್ರೈಃ ಸುಗಂಧೈರ್ವಿಮಲೈಶ್ಚ ಖಂಡಿತೈಃ ।
ಯಸ್ತಸ್ಯ ಪಾಪಂ ಪಟಸಂಸ್ಥಿತಂ ತದಾ ನಿರೀಕ್ಷಯಿತ್ವಾ ಪರಿಮಾರ್ಜಯೇದ್ಯಮಃ ॥

ಪರಿಮಳಭರಿತವಾದ ಹಾಗೂ ನಿರ್ಮಲವಾದ ತುಲಸಿಪತ್ರಗಳನ್ನು ಬಿಡಿಸಿ, ಅವುಗಳಿಂದ ಒಮ್ಮೆಯಾದರೂ ಶ್ರೀಹರಿಯನ್ನು ಯಾವನು ಪೂಜಿಸುವನೋ ಅಂತಹವನ ಪಟ್ಟಿಯಲ್ಲಿರುವ ಪಾಪಗಳನ್ನೆಲ್ಲಾ ಯಮನು ತೊಡೆದುಹಾಕುವನು.

**ಪ್ರಯಾಗಸ್ನಾನಯುಕ್ತಾನಾಂ ಕಾಶ್ಯಾಂ ಪ್ರಾಣವಿಮೋಕ್ಷಣೇ ।**
**ಯತ್ಫಲಂ ವಿಹಿತಂ ವೇದೈಸ್ತುಲಸೀಪೂಜನೇನ ತತ್ ॥**

– ಪದ್ಮಪುರಾಣ (೬/೬೫/೨೫)

ಪ್ರಯಾಗದಲ್ಲಿ ಸ್ನಾನವನ್ನು ಮಾಡಿ, ಕಾಶಿಯಲ್ಲಿ ಪ್ರಾಣಬಿಡುವವನಿಗೆ ವೇದಗಳಲ್ಲಿ ಹೇಳಿರುವ ಫಲವು ತುಲಸಿಪೂಜೆಯಿಂದಲೇ ಲಭಿಸುವುದು.

**ಯುಕ್ತೋ ಯದಿ ಸದಾ ಪಾಪೈಃ ಸುಕೃತಂ ನಾರ್ಜಿತಂ ಕ್ವಚಿತ್ ।**
**ತಥಾऽಪಿ ಗೀಯತೇ ಮೋಕ್ಷಸ್ತುಲಸೀ ಪೂಜಿತಾ ಯದಿ ॥**

– ಪದ್ಮಪುರಾಣ (೬/೬೫/೨೬)

ಸಕಲ ಪಾಪಗಳಿಂದಲೂ ಕೂಡಿ, ಸುಕೃತವನ್ನು ಮಾಡಿ ಒಮ್ಮೆಯೂ ಮಾಡದವನೂ ಸಹ ತುಲಸಿಯನ್ನು ಪೂಜಿಸಿದಲ್ಲಿ ಮೋಕ್ಷವನ್ನು ಪಡೆದುಕೊಳ್ಳುವನು.

**ಯಸ್ತು ಶ್ರೀತುಲಸೀಪತ್ರಂ ವಿಷ್ಣೋಃ ಶಿರಸಿ ಯೋಜಯೇತ್ ।**
**ಸ ಹಿ ದೇವಗಣೈಃ ಸ್ವರ್ಗೇ ವಿಷ್ಣುವತ್ ಪರಿಪೂಜ್ಯತೇ ॥** – ಪದ್ಮಪುರಾಣ

ಯಾವನು ಶ್ರೀತುಲಸೀಪತ್ರವನ್ನು ಮಹಾವಿಷ್ಣುವಿನ ಶಿರಸ್ಸಿನಮೇಲೆ ಅರ್ಪಿಸುವನೋ ಅವನು ಸ್ವರ್ಗದಲ್ಲಿ ದೇವತೆಗಳ ಗುಂಪಿನಿಂದ ವಿಷ್ಣುವಿನಂತೆ ಗೌರವಿಸಲ್ಪಡುವನು.

★★★

## ತುಲಸಿಯ ಪೂಜೆಗೆ ವಿಹಿತವಾದ ವಿಶೇಷ ಕಾಲ

ಅಶ್ವತ್ಥ, ಸಮುದ್ರ ಮೊದಲಾದವುಗಳು ಪವಿತ್ರ ಎಂದು ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿದ್ದರೂ ಸಹ ಅವುಗಳು ಸರ್ವದಾ ಸೇವ್ಯ ಎನ್ನಿಸಿಲ್ಲ. ಅಶ್ವತ್ಥದ ಸ್ಪರ್ಶವು ರಾತ್ರಿಕಾಲದಲ್ಲಿ ಸರ್ವದಾ ಸರ್ವಥಾ ನಿಷಿದ್ಧ; ಹಗಲಿನಲ್ಲೂ ಸಹ ಶನಿವಾರದ ಹೊರತು ಇತರ ದಿನಗಳಲ್ಲೂ ನಿಷಿದ್ಧ. ಅದರಂತೆ ಸಮುದ್ರಸ್ನಾನವು ಪರ್ವಕಾಲಗಳಲ್ಲಿ ಮಾತ್ರವೇ ವಿಹಿತ. ಇತರ ದಿನಗಳಲ್ಲಿ ಅದರ ಸ್ಪರ್ಶವೂ ಸಹ ವಿಹಿತವಲ್ಲ. ಅಗ್ನಿಯು ತುಂಬಾ ಪವಿತ್ರವೇ ಆದರೂ ಅದನ್ನು ಸರ್ವದಾ ಸರ್ವಥಾ ಸ್ಪರ್ಶಿಸುವಂತಿಲ್ಲ. ಸಾಲಿಗ್ರಾಮಾದಿಗಳು ಪವಿತ್ರವೇ ಆದರೂ ಎಲ್ಲರೂ ಅವುಗಳನ್ನು ಪೂಜಿಸುವಂತಿಲ್ಲ. ಪ್ರತಿಮೆಗಳ ಪೂಜೆಗಂತೂ ವಿಶೇಷವಾದ ಅರ್ಹತೆಯೇ ಅಗತ್ಯ. ಆದರೆ ತುಲಸಿಯು ಹಾಗಲ್ಲ. ಅದರ ಸೇವೆ, ದರ್ಶನ, ಸ್ಪರ್ಶನ ಮೊದಲಾದವು ಸದಾ ಪುಣ್ಯಕರ. ವಿಶೇಷ ಪರ್ವಕಾಲಗಳಲ್ಲಂತೂ ತುಲಸಿಯ ದರ್ಶನಾದಿಗಳು ಮಹಾಪುಣ್ಯಕರ. ಹೀಗೆ ತುಲಸಿಯ ಮಹಿಮೆ ಇತರ ಪವಿತ್ರವಸ್ತುಗಳಿಗಿಂತಲೂ ಸಹ ಹೆಚ್ಚು ಪಾವನ ಎನ್ನಿಸಿ ವಿಶೇಷವಾಗಿ ಮಾನ್ಯವಾಗಿದೆ.

ರಾಕಾಯಾಂ ಫಾಲ್ಗುನೇ ಮಾಸಿ ದರ್ಶೇ ವಾ ದ್ವಾದಶೀದಿನೇ ।
ರಾತ್ರೌ ದೀಪಪ್ರದಾನಾಚ್ಚ ಪರಮಾನ್ನಸಮರ್ಪಣಮ್ ॥
ಜನ್ಮಮೃತ್ಯುಜರಾದಿಭ್ಯೋ ಮೋಕ್ಷಮಾರ್ಗಂ ಚ ವಿಂದತಿ ॥

- ಗರುಡಪುರಾಣ (೧೩/೧೧,೧೨)

ಫಾಲ್ಗುನದ ಹುಣ್ಣಿಮೆ, ಅಮಾವಾಸ್ಯೆ, ದ್ವಾದಶೀದಿನಗಳ ರಾತ್ರಿಯಲ್ಲಿ ದೀಪವನ್ನು ಹಚ್ಚಿಟ್ಟು ಪರಮಾನ್ನದಿಂದ ತುಲಸಿಯನ್ನು ಪೂಜಿಸುವವರಿಗೆ ಜನ್ಮ, ಮೃತ್ಯು, ಮುಪ್ಪು ಮೊದಲಾದವುಗಳು ಪರಿಹಾರವಾಗಿ ಮೋಕ್ಷದ ಮಾರ್ಗ ತಿಳಿಯುವುದು.

ಆರಭ್ಯ ದ್ವಾದಶೀಂ ಶುಕ್ಲಾಮಾಷಾಢೀಂ ದಾನವೇಶ್ವರ ॥
ಆಕಾರ್ತಿಕೀಂ ಪ್ರಕುರ್ವಾಣಃ ಪೂಜಾಂ ಕ್ಷೀರಾಬ್ಧಿನಾಯಿಕಾಮ್ ।
ಏಕೈಕಸ್ಯಾಃ ಫಲೇನೈವ ಪುತ್ರಪೌತ್ರಾದಿಸಂಪದಃ ॥

- ಗರುಡಪುರಾಣ (೧೩/೧೩)

ಆಷಾಢಮಾಸದ ಶುಕ್ಲಪಕ್ಷದ ದ್ವಾದಶಿಯಂದು ಪ್ರಾರಂಭಿಸಿ, ಕಾರ್ತೀಕ ಮುಗಿಯು-ವರೆಗೂ ಮಾಡುವ ತುಲಸೀಪೂಜೆಯ ಪ್ರತಿಯೊಂದು ಬಗೆಯ ಸೇವೆಗೂ ಪುತ್ರ, ಪೌತ್ರ ಮೊದಲಾದ ಸಂಪತ್ತುಗಳು ಲಭಿಸುವವು.

ಧನಧಾನ್ಯಸಮೃದ್ಧಿಂ ಚ ರಾಜ್ಯಂ ಬಂಧುಸಮೃದ್ಧಿತಾಮ್ ।
ಏತಾನವಾಪ್ಯ ಸುಚಿರಂ ಮೋಕ್ಷಂ ಪ್ರಾಪ್ನೋತ್ಯನುತ್ತಮಮ್ ॥

- ಗರುಡಪುರಾಣ (೧೩/೧೪ )

ಇಂತಹ ತುಲಸೀಪೂಜೆಯಿಂದ ಧನಧಾನ್ಯಗಳ ಸಮೃದ್ಧಿಯನ್ನೂ, ರಾಜ್ಯವನ್ನೂ, ಬಂಧು ಸಮೃದ್ಧಿಯನ್ನೂ ಬಹುಕಾಲ ಹೊಂದಿ ಸರ್ವಶ್ರೇಷ್ಠವಾದ ಮೋಕ್ಷವನ್ನು ಪಡೆಯುವನು.

ಜಯಂತೀ ರಾಮನವಮೀ ವಿಜಯಾದಶಮೀ ತಥಾ ।
ಪೌರ್ಣಮಾಸೀ ಚ ವೈಶಾಖೇ ಜ್ಯೇಷ್ಠಾಯಾಃ ಶುಕ್ಲಪಂಚಮೀ ॥

ಸಿತಾ ನವಮ್ಯಾಶ್ವಯುಜೇ ಕಾರ್ತಿಕ್ಯಾಂ ಕೃತ್ತಿಕಾಂತಿಕಾಃ ।
ಮಾರ್ಗೇ ತ್ರಿಂಶದ್ದಿನೇ ಚೈವ ಸಂಕ್ರಾಂತ್ಯಾಂ ಮಕರೇ ರವೌ ॥

ಏತೇ ಕಾಲಾ ಮಹಾಪುಣ್ಯಾಸ್ತಥಾ ಮನ್ವಾದಯೋಽಪಿ ಚ ।
ಪೂಜಯೇತ್ ತೇಷು ಗೋವಿಂದಂ ಬಿಲ್ವೈಶ್ಚ ತುಲಸೀದಲೈಃ ॥

ಶತಪತ್ರೈಶ್ಚ ದೂರ್ವಾಭಿಃ ಪ್ರತಿನಿತ್ಯಮತಂದ್ರಿತಃ ।
ತುಲಸೀಪತ್ರಸಂಯುಕ್ತಮಂಜರೀಭಿಃ ಸಹಸ್ರಕೈಃ ॥

**ಏತತ್ಪೂಜಾಫಲಂ ವಕ್ತುಂ ಬ್ರಹ್ಮಕಲ್ಪೈರ್ನ ಪಾರ್ಯತೇ।**
**ಕಿಂಚ ವಿಷ್ಣೋಃ ಪದಂ ಪ್ರಾಪ್ಯ ಪುನರ್ಜನ್ಮ ನ ವಿದ್ಯತೇ॥** – ಗರುಡಪುರಾಣ

ಕೃಷ್ಣಜಯಂತೀ, ರಾಮನವಮೀ ಹಾಗೆಯೇ ವಿಜಯದಶಮೀ, ವೈಶಾಖಮಾಸದ ಹುಣ್ಣಿಮೆ, ಜ್ಯೇಷ್ಠಮಾಸ ಶುಕ್ಲಪಕ್ಷದ ಪಂಚಮೀ, ಆಶ್ವೀಜಮಾಸ ಶುಕ್ಲಪಕ್ಷದ ನವಮೀ (ಮಹಾನವಮೀ), ಕೃತ್ತಿಕಾನಕ್ಷತ್ರದವರೆಗಿನ ಕಾರ್ತೀಕಮಾಸದ ಒಟ್ಟು ೩೦ ದಿನಗಳು, ಮಕರಸಂಕ್ರಾಂತಿ ಹಾಗೂ ಮನ್ವಾದಿಗಳು ಶ್ರೀತುಲಸಿಯ ಪೂಜೆಗೆ ಅತ್ಯಂತ ಮಹತ್ತ್ವದ ದಿನಗಳು. ಆ ದಿನಗಳಲ್ಲಿ ತುಲಸೀದಳಗಳಿಂದ ಶ್ರೀಹರಿಯನ್ನು ವಿಶೇಷವಾಗಿ ಪೂಜಿಸಬೇಕು. ಕಮಲ, ಗರಿಕೆ ಮೊದಲಾದವುಗಳೊಂದಿಗೆ ತುಲಸೀಪತ್ರದಿಂದಕೂಡಿದ ಸಾವಿರ ಸಂಖ್ಯೆಯ ಮಂಜರಿಗಳಿಂದ ಪೂಜಿಸಬೇಕು. ಇಂತಹ ಪೂಜೆಗೆ ಲಭಿಸುವ ಫಲವನ್ನು ತಿಳಿಸಲು ಬ್ರಹ್ಮಕಲ್ಪಗಳೂ ಸಾಲವು. ಮುಖ್ಯವಾಗಿ ಶ್ರೀವಿಷ್ಣುವಿನ ಸನ್ನಿಧಿಯನ್ನು ತಲುಪಿ ಮತ್ತೊಮ್ಮೆ ಜನಿಸದಂತಾಗುವುದು.

***

# ತುಲಸೀಪೂಜೆ

**ಹರಿಃ ಸಂಪ್ರಾಪ್ಯ ತುಲಸೀಂ ರೇಮೇ ಚ ರಮಯಾ ಸಹ।**
**ರಮಾಸಮಾಂ ತಾಂ ಸೌಭಾಗ್ಯಾಂ ಚಕಾರ ಗೌರವೇಣ ಚ।**

– ಬ್ರಹ್ಮವೈವರ್ತ್ಯಪುರಾಣ, ಪ್ರಕೃತಿಖಂಡ (೨/೨೨/೪)

ತುಲಸಿಯು ಮಹಾಲಕ್ಷ್ಮಿಯೊಂದಿಗೆ ಶ್ರೀಹರಿಯನ್ನುಸೇರಿ ಆನಂದಿಸಿದಳು. ಅವಳನ್ನು ಶ್ರೀಹರಿಯು ಮಹಾಲಕ್ಷ್ಮಿಗೆ ಸಮಳನ್ನಾಗಿಸಿದ.

***

# ಉತ್ಥಾನದ್ವಾದಶಿಯಂದು ತುಲಸೀಪೂಜೆಯ ವಿಶೇಷ

ತುಲಸಿಯ ಪೂಜೆ ಪ್ರತಿದಿನದ ಮುಖ್ಯಕರ್ತವ್ಯಗಳಲ್ಲೊಂದು. ವರ್ಷದ ಪ್ರತಿದಿನವೂ ತುಲಸಿಯು ಪೂಜ್ಯಳೇ ಆಗಿರುವಳು. ಆದರೆ ಕಾರ್ತೀಕಮಾಸದಲ್ಲಿ ತುಲಸಿಯ ಪೂಜೆಗೆ ವಿಶೇಷ ಮಹತ್ವ. ಪ್ರತಿನಿತ್ಯ ಭಗವಂತನ ಆರಾಧನೆ ವಿಹಿತವಾಗಿದ್ದರೂ ಶ್ರೀಕೃಷ್ಣಜಯಂತೀ, ರಾಮನವಮಿ ಮೊದಲಾದ ವಿಶೇಷ ದಿವಸಗಳಲ್ಲಿ ಹೆಚ್ಚಿನ ಪೂಜೆ ಹೇಗೋ ಹಾಗೆ ಉತ್ಥಾನದ್ವಾದಶಿಯಂದು ತುಲಸಿಯ ಪೂಜೆಗೆ ಹೆಚ್ಚಿನ ಮಹತ್ತ್ವವನ್ನು ತಿಳಿಸಿರುವರು. ಕಾರ್ತೀಕಮಾಸದ ಹುಣ್ಣಿಮೆಯು ತುಲಸಿಯ ಪ್ರಾದುರ್ಭಾವದ ದಿನ ಎಂಬುದಾಗಿ ಮಹತ್ತ್ವಪೂರ್ಣವೆನ್ನಿಸಿದ್ದರೆ, ಉತ್ಥಾನ ದ್ವಾದಶಿಯು ತುಲಸಿಯ ವಿವಾಹದ ಪರ್ವಕಾಲ

ಎಂಬ ಕಾರಣದಿಂದ ವಿಶೇಷವೆನ್ನಿಸುವುದು. ಪ್ರತಿದ್ವಾದಶಿಯಂದು ತುಲಸಿಯ ಪೂಜೆ ಮಹತ್ತ್ವ ಪಡೆದುಕೊಂಡಿದ್ದರೆ ಉತ್ಥಾನ ದ್ವಾದಶಿಯಂದು ವಿವಾಹದ ನಿಮಿತ್ತದ ವಿಶೇಷಪೂಜೆ ಎಂಬ ಕಾರಣದಿಂದ ಮಹತ್ತ್ವ ಪಡೆದಿದೆ. ಉಳಿದ ಮಾಸಗಳಲ್ಲಿ ತುಲಸಿಪೂಜೆಗೆ ಇರುವ ಮಹತ್ತ್ವ ತುಲಸಿಯ ಜಯಂತಿ, ವಿವಾಹ ಮೊದಲಾದ ಕಾರಣದಿಂದ ಕಾರ್ತಿಕಮಾಸ ಮಹತ್ತ್ವ ಪಡೆದುಕೊಂಡಿದೆ.

**ದ್ವಾದಶ್ಯಾಂ ಕಾರ್ತಿಕೇ ಮಾಸಿ ಸಹಸ್ರೈಃ ತುಲಸೀದಲೈಃ।**
**ಬಿಲ್ವಪತ್ರಸಹಸ್ರೈರ್ವಾ ಹರೇಃ ಪೂಜಾ ವಿಮುಕ್ತಿದಾ ॥** – ಪದ್ಮಪುರಾಣ

ಕಾರ್ತಿಕಮಾಸದಲ್ಲಿ ದ್ವಾದಶಿಯಂದು ಸಾವಿರ ತುಲಸಿದಳಗಳಿಂದಾಗಲಿ, ಸಾವಿರ ಬಿಲ್ವಪತ್ರೆಗಳಿಂದಾಗಲಿ ಶ್ರೀಹರಿಯನ್ನು ಪೂಜಿಸುವುದು ಮುಕ್ತಿಗೆ ಸಾಧನವಾಗುವುದು.

**ವಿಷ್ಣೋರುತ್ಥಾನದಿವಸೇ ಜಾಗರಿತ್ವಾ ನಿಶಾಂ ಪ್ರತೀ।**
**ಘೃತಮುದ್ಗಗುಡಕ್ಷೀರಮಿಶ್ರಾನ್ನೈಃ ......... ॥** – ಪದ್ಮಪುರಾಣ

**ಯಥಾಕ್ರಮಂ ಪೂಜಯಿತ್ವಾ ಕುಲಕೋಟಿಸಮನ್ವಿತಃ।**
**ಚರಿತ್ವಾ ಸರ್ವಲೋಕೇಷು ವಿಷ್ಣುಸಾಯುಜ್ಯಮಾಪ್ನುಯಾತ್ ॥** – ಪದ್ಮಪುರಾಣ

ಹಿಂದಿನ ದಿನ ರಾತ್ರಿಯಲ್ಲಿ ಜಾಗರಣೆಯನ್ನು ಮಾಡಿ, ವಿಷ್ಣುವು ಯೋಗನಿದ್ರೆಯಿಂದೇಳುವ ಉತ್ಥಾನದ್ವಾದಶಿಯಂದು ಘೃತ, ಹೆಸರು, ಬೆಲ್ಲ, ಕ್ಷೀರ, ಇವುಗಳಿಂದ ಮಿಶ್ರಿತವಾದ ಅನ್ನಗಳಿಂದ ಕ್ರಮವಾಗಿ ವಿಷ್ಣುವನ್ನು ತುಲಸಿದಳಗಳಿಂದ ಪೂಜಿಸಿ ಬಳಿಕ ಕುಲಕೋಟಿಯ ಸಮೇತ ಪಾರಣ ಮಾಡುವುದು ವಿಷ್ಣುಸಾಯುಜ್ಯಪ್ರಾಪ್ತಿಗೆ ಕಾರಣವಾಗುವುದು.

**ದೀಪಮಾರೋಪಯೇತ್ಸಾಯಂ ಕಾರ್ತಿಕೇ ಪ್ರತಿವಾಸರಮ್ ।**
**ನಿವೇದ್ಯ ಪಾಯಸಾನ್ನಂ ಚ ಸಿದ್ಧಿಮಿಷ್ಟಾಮವಾಪ್ನುಯಾತ್ ॥** – ಪದ್ಮಪುರಾಣ

ಕಾರ್ತಿಕಮಾಸದಲ್ಲಿ ಪ್ರತಿದಿನವೂ ಸಾಯಂಕಾಲ ತುಲಸಿಯ ಮುಂದೆ ದೀಪವನ್ನು ಹಚ್ಚಿಟ್ಟು ಪಾಯಸಾನ್ನವನ್ನು ನೈವೇದ್ಯವನ್ನಾಗಿ ಸಮರ್ಪಿಸುವುದು ಇಷ್ಟಸಿದ್ಧಿಗೆ ಕಾರಣ–ವಾಗುವುದು.

**ಯಃ ಕಶ್ಚಿತ್ ತುಲಸೀಮೂಲೇ ಕಾರ್ತಿಕೇ ಕೇಶವಪ್ರಿಯಃ।**
**ದೀಪಂ ದದಾತಿ ವಿಪ್ರೇಂದ್ರ ಸ ಲಭೇದ್ವೈಷ್ಣವಂ ಪದಮ್ ॥** – ಪದ್ಮಪುರಾಣ

ವಿಷ್ಣುಭಕ್ತನಾದ ಯಾವನೇ ಆಗಲಿ, ಕಾರ್ತಿಕಮಾಸದಲ್ಲಿ ತುಲಸಿಯ ಹತ್ತಿರ ದೀಪವನ್ನು ಹಚ್ಚಿಡುವವನು ವೈಷ್ಣವಲೋಕವನ್ನು ಪಡೆಯುವನು.

**ಕಾರ್ತಿಕ್ಯಾಂ ಪೌರ್ಣಮಾಸ್ಯಾಂ ವಾ ಮಹಾದೀಪಂ ಸಮಾಚರೇತ್ ।**
**ಜ್ಞಾನಂ ಚ ವಿಪುಲಂ ಪ್ರಾಪ್ಯ ವಿಷ್ಣುಸೇವಾಧಿಕೋ ಭವೇತ್ ॥** - ಪದ್ಮಪುರಾಣ

ಕಾರ್ತೀಕಮಾಸದಲ್ಲಿ ಹುಣ್ಣಿಮೆಯಂದು ಹೆಚ್ಚಿನ ದೀಪಗಳನ್ನು ತುಲಸಿಯ ಮುಂದೆ ಹಚ್ಚಿಡಬೇಕು. ಅದರಿಂದ ಹೆಚ್ಚಿನ ಜ್ಞಾನವನ್ನು ಪಡೆದು ವಿಷ್ಣುವಿನ ಸೇವೆಯಲ್ಲಿ ಅಧಿಕ ಎನ್ನಿಸುವನು.

**ಬಿಂಬಮಪ್ಯರ್ಚಿತಂ ದೃಷ್ಟ್ವಾ ಸಹೋಮಾಸೇ ಚ ಮಾಮಕಮ್ ।**
**ತುಲಸೀಪತ್ರನಿಚಯೈಃ ಮುಚ್ಯತೇ ಬ್ರಹ್ಮಹತ್ಯಯಾ ॥** - ಪದ್ಮಪುರಾಣ

ಕಾರ್ತೀಕಮಾಸದಲ್ಲಿ ತುಲಸಿಯ ಪತ್ರಗಳ ರಾಶಿಯಿಂದ ಶ್ರೀಹರಿಯ ಪ್ರತಿಮೆಗೆ ಪೂಜೆ ಸಲ್ಲಿಸುವವನು ಬ್ರಹ್ಮಹತ್ಯಾಪಾಪದಿಂದಲೂ ಮುಕ್ತನಾಗುವನು.

**ಸಂಪ್ರಾಪ್ತಂ ಕಾರ್ತಿಕಂ ದೃಷ್ಟ್ವಾ ನಿಯಮೇನ ಜನಾರ್ದನಃ ।**
**ಪೂಜನೀಯೋ ಮಹದ್ಭಿಶ್ಚ ಕೋಮಲೈಸ್ತುಲಸೀದಲೈಃ ॥** - ಪದ್ಮಪುರಾಣ

ಕಾರ್ತೀಕಮಾಸವು ಬಂದಿದ್ದನ್ನು ಗಮನಿಸಿ, ನಿಯಮದಿಂದ ಜನಾರ್ದನನನ್ನು ಕೋಮಲವಾದ ತುಲಸಿಯ ದಳಗಳಿಂದ ಪೂಜಿಸಬೇಕು.

**ತುಲಸೀದಲಪುಷ್ಪಾಣಿ ಯೋ ದದ್ಯಾದ್ಧರಯೇ ಮುನೇ ।**
**ಕಾರ್ತಿಕೇ ಸಕಲಂ ಪಾಪಂ ಸೋಽತ್ರ ಜನ್ಮಾರ್ಜಿತಂ ದಹೇತ್ ॥** - ಪದ್ಮಪುರಾಣ

ಕಾರ್ತೀಕಮಾಸದಲ್ಲಿ ಜನಾರ್ದನನಿಗೆ ತುಲಸಿಯದಳಗಳನ್ನು ಪುಷ್ಪಗಳನ್ನು ಯಾವನು ಸಮರ್ಪಿಸುವನೋ ಅವನು ಜನ್ಮಪೂರ್ತಿಮಾಡಿದ ಪಾಪಗಳನ್ನೆಲ್ಲ ಬೂದಿಮಾಡಿಕೊಳ್ಳುವನು.

★★★

## ಇತರ ಮಾಸಗಳಲ್ಲೂ ತುಲಸೀಪೂಜೆಯು ವಿಹಿತ

ಇತರ ಮಾಸಗಳಲ್ಲಿ ಸಹ ತುಲಸಿಯನ್ನು ಬಗೆಬಗೆಯಾಗಿ ಪೂಜಿಸುವುದು ವಿಹಿತ. ಅದರಿಂದಲೂ ಸಹ ಅನೇಕ ಬಗೆಯ ಫಲಗಳು ಲಭಿಸುವುದು ನಿಶ್ಚಿತ.

**ಮಾರ್ಗೇ ತುಲಸ್ಯಾ ಪೂಜಾ ಚ ಪಾಯಸಾನ್ನನಿವೇದನಮ್ ।**
**ಪ್ರತ್ಯಹಂ ಧೇನುಸಾಹಸ್ರದಾನಪುಣ್ಯಫಲಂ ನೃಣಾಮ್ ॥** - ಪದ್ಮಪುರಾಣ

ಮಾರ್ಗಶಿರಮಾಸದಲ್ಲಿ ಪ್ರತಿನಿತ್ಯ ಪಾಯಸಾನ್ನವನ್ನು ನಿವೇದಿಸಿ ತುಲಸಿಯನ್ನು ಪೂಜಿಸುವುದು ಮನುಷ್ಯರಿಗೆ ಸಾವಿರ ಗೋವುಗಳನ್ನು ದಾನಮಾಡಿದ ಪುಣ್ಯವು ಲಭಿಸುವುದು.

**ಪುಷ್ಯಮಾಸೇ ವಿಶೇಷಣ ಶುಕ್ಲಪಕ್ಷೇ ಭೃಗೋರ್ದಿನೇ ।**
**ಯಃ ಪೂಜಯೇತ್ ಷೋಡಶಭಿಃ ತುಲಸೀಮುಪಚಾರಕೈಃ ।**
**ತಸ್ಯ ಸಾ ವಾಂಛಿತಫಲಂ ಪ್ರಯಚ್ಛತಿ ನ ಸಂಶಯಃ ॥** – ಪದ್ಮಪುರಾಣ

ಪುಷ್ಯಮಾಸದಲ್ಲಿ ಅದರಲ್ಲೂ ಸಹ ಶುಕ್ಲಪಕ್ಷದ ಶುಕ್ರವಾರದಂದು ತುಲಸಿಯನ್ನು ಷೋಡಶೋಪಚಾರಗಳಿಂದ ಪೂಜಿಸಬೇಕು. ಅವನ ಬೇಡಿಕೆದ ಫಲವನ್ನು ತುಲಸಿಯು ನೀಡುವಳು; ಸಂಶಯವಿಲ್ಲ.

**ಶ್ರೀಖಂಡಂ ಚಂದನಂ ವಾಽಪಿ ತುಲಸೀಕಾಷ್ಠಸಂಯುತಮ್ ।**
**ಕರ್ಪೂರಾಗರುಸಂಯುಕ್ತಂ ದತ್ವಾ ಮಾಧವತೋಷಭಾಕ್ ॥** – ಪದ್ಮಪುರಾಣ

**ದ್ವಾದಶ್ಯಾಂ ಮಾಘಮಾಸೇ ತು ಶುಕ್ಲಾಯಾಂ ಪೂಜಯೇತ್ ಸುಧೀಃ ।**
**ಅಶ್ವಮೇಧಫಲಂ ತಸ್ಯ ದದಾತಿ ತುಲಸೀ ಶುಭಾ ॥** – ಪದ್ಮಪುರಾಣ

ಶ್ರೀಖಂಡವನ್ನಾಗಲಿ, ಗಂಧವನ್ನಾಗಲಿ ಕರ್ಪೂರ ಹಾಗೂ ಅಗರುಗಳನ್ನು ಸೇರಿಸಿ ಮಾಘ ಮಾಸದಲ್ಲಿ ತುಲಸಿಯ ಕಾಷ್ಠಗಳೊಂದಿಗೆ ಒಟ್ಟುಮಾಡಿ ಪೂಜಿಸಿದರೆ ಮಾಧವನಾದ ಶ್ರೀಹರಿಯು ಸಂತೋಷಪಡುವನು. ಮಾಘಮಾಸದಲ್ಲಿ ಶುಕ್ಲಪಕ್ಷದ ದ್ವಾದಶಿಯಂದು ನಿರ್ಮಲಮನಸ್ಸಿನಿಂದ ಪೂಜಿಸಬೇಕು. ಮಂಗಳಕರೆಯಾದ ತುಲಸಿಯು ಅವರಿಗೆ ಅಶ್ವಮೇಧ ಯಾಗದ ಫಲವನ್ನು ನೀಡುವಳು.

**ರಾಕಾಯಾಂ ಫಾಲ್ಗುನೇ ಮಾಸಿ ದರ್ಶೇ ದ್ವಾದಶೀದಿನೇ ।**
**ರಾತ್ರೌ ದೀಪಪ್ರದಾನಾಚ್ಚ ಪರಮಾನ್ನಸಮರ್ಪಣಾತ್ ।**
**ಜನ್ಮಮೃತ್ಯುಜರಾಹೀನಃ ಮೋಕ್ಷಮಾರ್ಗಂ ಚ ವಿಂದತಿ ॥** – ಪದ್ಮಪುರಾಣ

ಫಾಲ್ಗುಣಮಾಸದ ಹುಣ್ಣಿಮೆ, ಅಮಾವಾಸ್ಯೆ, ದ್ವಾದಶೀ ದಿನಗಳಂದು ರಾತ್ರಿಯಲ್ಲಿ ತುಲಸಿಯ ಮುಂದೆ ದೀಪವನ್ನು ಹಚ್ಚಿ ಪರಮಾನ್ನವನ್ನು ಸಮರ್ಪಿಸಿ, ಪೂಜಿಸುವವನು ಹುಟ್ಟು-ಸಾವು-ಮುಪ್ಪುಗಳನ್ನು ಕಳೆದುಕೊಂಡು ಮೋಕ್ಷದ ಹಾದಿಯನ್ನು ತಿಳಿಯುವನು.

**ಉಕ್ತೇಷು ಮಾಸೇಷ್ವೇಕಮಾಸಪೂಜಾಂ ಕರೋತಿ ಯಃ ।**
**ಸರ್ವಭೋಗಸಮಾಯುಕ್ತಃ ಮೋಕ್ಷಮಂತೇ ಪ್ರಪದ್ಯತೇ ॥** – ಪದ್ಮಪುರಾಣ

ಹೀಗೆ ತಿಳಿಸಿದ ಮಾಸಗಳಲ್ಲಿ ಒಂದು ತಿಂಗಳಾದರೂ ಸಹ ಶ್ರೀತುಲಸಿಯನ್ನು ಪೂಜಿಸುವವನು ಸಕಲ ಭೋಗಗಳಿಂದ ಕೂಡಿ ಕೊನೆಯಲ್ಲಿ ಮೋಕ್ಷವನ್ನು ಹೊಂದುವನು.

**ಏವಂ ದ್ವಾದಶಮಾಸಾನಾಂ ಪೂಜಾ ನಾರೀ ನರೋಽಥ ವಾ ।**
**ಕರೋತಿ ತತ್ಫಲಂ ವಕ್ತುಂ ವಿಷ್ಣುನಾಽಪಿ ನ ಶಕ್ಯತೇ ॥** – ಪದ್ಮಪುರಾಣ

ಹೀಗೆ ಹನ್ನೆರೆಡು ತಿಂಗಳುಗಳಲ್ಲೂ ಪುರುಷನಾಗಲಿ, ಸ್ತ್ರೀಯಾಗಲಿ ತುಲಸಿಯನ್ನು ಪೂಜಿಸುವವನಿಗೆ ಲಭಿಸುವ ಫಲವನ್ನು ವರ್ಣಿಸಲು ವಿಷ್ಣುವೂ ಸಹ ಶಕ್ತನಾಗನು.

ಪಕ್ಷೇ ಪಕ್ಷೇ ತು ಸಂಪ್ರಾಪ್ತೇ ದ್ವಾದಶ್ಯಾಂ ವೈಶ್ಯಸತ್ತಮ ।
ಬ್ರಹ್ಮಾದಯೋಽಪಿ ಕುರ್ವಂತಿ ತುಲಸೀವನಪೂಜನಮ್ ॥

– ಪದ್ಮಪುರಾಣ (೬/೨೪೪/೭)

ಬ್ರಹ್ಮ ಮೊದಲಾದವರು ಪ್ರತಿಪಕ್ಷದಲ್ಲೂ ಸಹ ದ್ವಾದಶಿಯಂದು ತುಲಸೀವನವನ್ನು ಪೂಜಿಸುವರು.

★★★

## ವಿವಿಧ ಮಾಸಗಳಲ್ಲಿ ಪೂಜೆಯ ವಿಶೇಷ

ಚೈತ್ರೇ ವಿಷುವಕಾಲೇ ಚ ರಾಕಾಯಾಮಪಿ ಯತ್ನತಃ ।
ಪಾಯಸಾನ್ನಪ್ರದಾನೇನ ಪರಾಂ ಸಿದ್ಧಿಮವಾಪ್ನುಯಾತ್ ॥ – ಸ್ಕಂದಪುರಾಣ

ಚೈತ್ರಮಾಸದ ವಿಷುವಪುಣ್ಯಕಾಲದಂದು ಹಾಗೂ ಹುಣ್ಣಿಮೆಯಂದು ವಿಶೇಷ ಪ್ರಯತ್ನದಿಂದ ಪಾಯಸಾನ್ನವನ್ನು ತುಲಸಿಗೆ ನಿವೇದಿಸಿದರೆ, ಉತ್ತಮಸಿದ್ಧಿಯು ಲಭಿಸುವುದು.

ಶುಕ್ಲಾ ತೃತೀಯಾ ವೈಶಾಖೀ ಅಕ್ಷಯಾ ಪರಿಕೀರ್ತಿತಾ ।
ತಸ್ಯಾಂ ವಾ ಪೌರ್ಣಮಾಸ್ಯಾಂ ವಾ ದಧ್ಯನ್ನಸ್ಯ ನಿವೇದನಾತ್ ।
ವಾಮನಂ ಲೋಕಮಾಸಾದ್ಯ ತತ್ರೈವ ಪರಿಮುಚ್ಯತೇ ॥ – ಸ್ಕಂದಪುರಾಣ

ವೈಶಾಖಮಾಸದ ಶುಕ್ಲಪಕ್ಷದ ತೃತೇಯಾ ತಿಥಿಯು ಅಕ್ಷಯತೃತೀಯಾ ಎನಿಸಿದೆ. ಅಂದು ಅಥವಾ ಆ ಮಾಸದ ಹುಣ್ಣಿಮೆಯಂದು ತುಲಸಿಗೆ ಮೊಸರನ್ನವನ್ನು ನಿವೇದಿಸುವುದರಿಂದ ವಾಮನ ಲೋಕವನ್ನು ಪಡೆದು, ಮುಕ್ತನಾಗಬಹುದು.

ಚಂದ್ರಾತಪಂ ವಾ ಛತ್ರಂ ವಾ ತುಲಸ್ಯೈ ಯಸ್ತು ಯಚ್ಛತಿ ।
ವಿಶೇಷತೋ ನಿದಾಘೇಷು ಸ ಮುಕ್ತಃ ಸರ್ವಪಾತಕೈಃ ॥ – ಸ್ಕಂದಪುರಾಣ

ವಿಶೇಷವಾಗಿ ಬೇಸಿಗೆಯಲ್ಲಿ ಛತ್ರ ಅಥವಾ ಶ್ವೇತಚ್ಛತ್ರವನ್ನು ತುಲಸಿಗೆ ಸಮರ್ಪಿಸುವವನು ಸಕಲ ಪಾಪಗಳಿಂದ ಮುಕ್ತನಾಗುವನು.

ವೈಶಾಖೇಽಕ್ಷತಧಾರಾಭಿಃ ಅದ್ಭಿರ್ಯಸ್ತುಲಸೀಂ ಜನಃ ।
ಸೇಚಯೇತ್ ಸೋಽಶ್ವಮೇಧಸ್ಯ ಫಲಂ ಪ್ರಾಪ್ನೋತಿ ನಿತ್ಯಶಃ ॥– ಸ್ಕಂದಪುರಾಣ

ವೈಶಾಖಮಾಸದಲ್ಲಿ ಪ್ರತಿದಿನ ಅಕ್ಷತೆಧಾರೆಗಳಿಂದ ಕೂಡಿದ ಜಲದಿಂದ ತುಲಸಿಯನ್ನು ಪ್ರೋಕ್ಷಿಸುವವನು ಅಶ್ವಮೇಧದ ಫಲವನ್ನು ಪಡೆಯುವನು.

**ಜ್ಯೇಷ್ಠೇ ಮಾಸಿ ಚ ದೇವೇಶೀಂ ದಶಮ್ಯಾದಿದಿನತ್ರಯೇ।**
**ತೋಷಯಿತ್ವಾ ಯವಾನ್ನೇನ ವಿಷ್ಣೋರ್ವಲ್ಲಭತಾಮಿಯಾತ್ ॥**

– ಸ್ಕಂದಪುರಾಣ

ಜ್ಯೇಷ್ಠಮಾಸದಲ್ಲಿ ದಶಮಿ ಮೊದಲಾದ ದಿನತ್ರಯಗಳಂದು ಯವಾನ್ನವನ್ನು ತುಲಸಿಗೆ ಸಮರ್ಪಿಸುವವನು ವಿಷ್ಣುವಿಗೆ ಪ್ರಿಯನೆನ್ನಿಸುವನು.

**ಗ್ರೀಷ್ಮಕಾಲೇ ದ್ವಿಜಶ್ರೇಷ್ಠ ಸುಗಂಧೈಃ ಶೀತಲೈರ್ಜಲೈಃ।**
**ತುಲಸೀಸೇಚನಂ ಕೃತ್ವಾ ನರೋ ನಿರ್ವಾಣಮಾಪ್ನುಯಾತ್ ॥** – ಸ್ಕಂದಪುರಾಣ

ಗ್ರೀಷ್ಮಕಾಲದಲ್ಲಿ ಪರಿಮಳಭರಿತವಾದ ಶೀತಲ ಜಲಗಳಿಂದ ತುಲಸಿಗೆ ನೀರೆರೆಯುವವನು ಮುಕ್ತಿಯನ್ನು ಪಡೆಯುವನು.

**ಆಷಾಢಮಾಸಿ ಶುಕ್ಲಾಯಾಮೇಕಾದಶ್ಯಾಂ ವ್ರತೀ ನರಃ।**
**ಸಹಸ್ರದಲಸಂಯುಕ್ತಂ ತುಲಸೀದಾನಪೂಜನಾತ್ ॥**

**ಬಿಲ್ವಪತ್ರಾರ್ಚನಾದ್ವಾಽಪಿ ಕೇಶವಸ್ಯ ಪ್ರಸಾದತಃ।**
**ದಾರಿದ್ರ್ಯನಾಶನಂ ಧರ್ಮ್ಯಂ ಯಶೋ ವಿದ್ಯಾಮವಾಪ್ನುಯಾತ್ ॥**

– ಸ್ಕಂದಪುರಾಣ

ಆಷಾಢಮಾಸದ ಶುಕ್ಲಪಕ್ಷದ ಏಕಾದಶಿಯಂದು ವ್ರತಶೀಲನಾಗಿ ಕಮಲಪುಷ್ಪದೊಂದಿಗೆ ತುಲಸಿಯನ್ನು ಪೂಜಿಸುವುದು, ದಾನಮಾಡುವುದು, ಬಿಲ್ವಪತ್ರೆಗಳನ್ನು ಸಮರ್ಪಿಸುವುದು. ಶ್ರೀಕೇಶವನ ಅನುಗ್ರಹಕ್ಕೆ ಪಾತ್ರನನ್ನಾಗಿಸಿ, ದಾರಿದ್ರ್ಯವನ್ನು ನೀಗಿಸುವುದು, ಧರ್ಮಕ್ಕೆ ಸಾಧನವಾಗಿಸುವುದು, ಕೀರ್ತಿ ಮತ್ತು ವಿದ್ಯೆಯನ್ನು ಸಂಪಾದಿಸಿಕೊಡುವುದು.

**ಶುಭವಾರೇ ತಿಥೌ ಹೃತ್ವಾ ಸಹಸ್ರಂ ತುಲಸೀದಲಮ್ ।**
**ಭಾದ್ರೇ ಶುಕ್ಲಚತುರ್ದಶ್ಯಾಮರ್ಚಯೇತ್ ಪುರುಷೋತ್ತಮಮ್ ॥**

– ಸ್ಕಂದಪುರಾಣ

ಶುಭವಾರ ಶುಭತಿಥಿಗಳಂದು ಸಾವಿರ ತುಲಸಿದಳಗಳನ್ನು ಸಂಗ್ರಹಿಸಿ, ಭಾದ್ರಪದಮಾಸದ ಶುಕ್ಲಪಕ್ಷದ (ಅನಂತ) ಚತುರ್ದಶಿಯಂದು ಪುರುಷೋತ್ರಮನಾದ ಶ್ರೀಹರಿಯನ್ನು ಪೂಜಿಸಬೇಕು.

**ಅನಂತಾಯ ನಮ ಇತ್ಯುಕ್ತ್ವಾ ಬಿಲ್ವೈರ್ದೂರ್ವಾಸಹಸ್ರಕೈಃ।**
**ಅಣಿಮಾದಿಗುಣಾನ್ ಪ್ರಾಪ್ಯ ನಾಕ್ಷತ್ರಂ ಸ್ಥಾನಮಾಪ್ನುಯಾತ್ ॥**

– ಸ್ಕಂದಪುರಾಣ

'ಅನಂತಾಯ ನಮಃ' ಎಂದು ನುಡಿದು, ಬಿಲ್ವಪತ್ರಗಳಿಂದಲೂ ಸಾವಿರ ಗರಿಕೆಗಳಿಂದಲೂ ತುಲಸಿಯಿಂದ ಪೂಜಿಸುವವನು ಅಣಿಮಾ ಮೊದಲಾದ ಯೋಗಸಿದ್ಧಿಯನ್ನು ಪಡೆದು, ನಕ್ಷತ್ರ ಲೋಕವನ್ನು ಸೇರುವನು.

ತಥಾ ಭಾದ್ರಪದೇ ಮಾಸಿ ಗಜಚ್ಛಾಯಾಸಮಾಹ್ವಯೇ ।
ತುಲಸೀದಲಮಿಶ್ರೇಣ ನೈವೇದ್ಯೇನೈವ ಚಕ್ರಿಣಃ ॥

ಭೋಜಯೇತ್ ಸಪಿತೄನ್ ಭಕ್ತ್ಯಾ ವಿಧಿನಾ ಪಾರ್ವಣೇನ ಚ ।
ಸಹಸ್ರವಾರ್ಷಿಕೀಂ ತೃಪ್ತಿಂ ಪಿತರೋ ಯಾಂತಿ ನಾನ್ಯಥಾ ॥. – ಸ್ಕಂದಪುರಾಣ

ಅದರಂತೆ ಭಾದ್ರಪದಮಾಸದಲ್ಲಿ ಗಜಚ್ಛಾಯಾ ಯೋಗ ಒದಗಿದಾಗ ಚಕ್ರಪಾಣಿಯಾದ ಶ್ರೀಹರಿಯನ್ನು ತುಲಸಿದಳಮಿಶ್ರಿತವಾದ ನೈವೇದ್ಯವನ್ನು ಸಮರ್ಪಿಸಿ, ಆ ಬಳಿಕ ಪಿತೃಗಳನ್ನು ಪಾರ್ವಣವಿಧಿಯಿಂದ ಪೂಜಿಸುವುದರಿಂದ ಪಿತೃಗಳು ಸಾವಿರವರ್ಷಗಳ ಕಾಲ ತೃಪ್ತರಾಗುವರು.

ತನ್ಮಾಸಪೂರ್ಣಿಮಾಯಾಂ ವಾ ಭೂತೇ ವಾ ಹರಿವಾಸರೇ ।
ನಿವೇದ್ಯ ದೇವ್ಯೈ ಮಾಷಾನ್ನಂ ಯಮಲೋಕಂ ನ ಪಶ್ಯತಿ ॥... – ಸ್ಕಂದಪುರಾಣ

ಆ ಮಾಸದ ಹುಣ್ಣಿಮೆಯಂದು, ಏಕಾದಶಿಯಂದು ತುಲಸಿಗೆ ಉದ್ದಿನ ಭಕ್ಷ್ಯವನ್ನು ಸಮರ್ಪಿಸುವವನು ಯಮಲೋಕವನ್ನು ಕಾಣಲಾರನು.

★★★

## ಚಾತುರ್ಮಾಸ್ಯದಲ್ಲಿ ತುಲಸೀ ಪೂಜೆಯ ಮಹಿಮೆ

ಪ್ರತಿದಿನವೂ, ಪ್ರತಿಪಕ್ಷವೂ, ಪ್ರತಿಮಾಸವೂ ತುಲಸೀಪೂಜೆಗೆ ಪ್ರಶಸ್ತವೇ ಆಗಿದೆ. ಅದರಲ್ಲೂ ಕಾರ್ತೀಕಮಾಸದಲ್ಲಿ ತುಲಸೀಪೂಜೆಗೆ ಹೆಚ್ಚು ಮಹತ್ತ್ವ. ಕಾರ್ತೀಕದಂತೆ ಅದರ ಹಿಂದಿನ ಉಳಿದ ಮೂರು ತಿಂಗಳುಗಳು ಸೇರಿ ಚಾತುರ್ಮಾಸ್ಯ ಎನ್ನಿಸುವುದು ಎಂದರೆ ಆಷಾಢ ಶುಕ್ಲ ಏಕಾದಶಿಯಿಂದ ಪ್ರಾರಂಭಿಸಿ, ಕಾರ್ತೀಕಶುಕ್ಲ ದ್ವಾದಶಿಯವರೆಗಿನ ನಾಲ್ಕು ತಿಂಗಳುಗಳು ಚಾತುರ್ಮಾಸ್ಯವೆಂಬುದಾಗಿ ಪ್ರಸಿದ್ಧವಾಗಿದೆ. ಅಂತಹ ಚಾತುರ್ಮಾಸ್ಯಕಾಲವು ಮಾಘ, ವೈಶಾಖ ಮಾಸಗಳಿಗಿಂತಲೂ ಹೆಚ್ಚು ಪ್ರಶಸ್ತವಾದುದು. ಅವುಗಳಲ್ಲೂ ಉತ್ತರೋತ್ತರ ಪ್ರಾಬಲ್ಯ ಎಂಬುದು ಇನ್ನೊಂದು ವಿಶೇಷ. ಆ ಸಮಯದಲ್ಲಿ ತುಲಸೀಪೂಜೆಯು ಮತ್ತಷ್ಟು ಮಹತ್ತ್ವಪೂರ್ಣವಾದುದು ಎಂದು ತಿಳಿಯಬೇಕು.

ಶಯನೇ ಪರಿವೃತ್ತೌ ಚ ಸಮುತ್ಥಾನೇ ಚ ಚಕ್ರಿಣಃ ।
ವಿಶೇಷಾತ್ ಪೂಜಿತಾ ದೇವೀ ಸಾಲೋಕ್ಯಾದಿಫಲಪ್ರದಾ ॥

– ಬ್ರಹ್ಮವೈವರ್ತಪುರಾಣ (೨/೨೨/೨೬)

ಶಯನೈಕಾದಶೀ(ಆಷಾಢಶುಕ್ಲ ಏಕಾದಶೀ), ಪರಿವರ್ತನ (ಭಾದ್ರಪದಶುಕ್ಲ) ದ್ವಾದಶೀ, ಹಾಗೂ ಉತ್ಥಾನ (ಕಾರ್ತೀಕಶುಕ್ಲ) ದ್ವಾದಶೀ ಈ ಮೂರು ದಿವಸಗಳಲ್ಲಿ ವಿಶೇಷವಾಗಿ ಪೂಜಿಸಿದರೆ ತುಲಸಿಯು ಸಾಲೋಕ್ಯ ಮೊದಲಾದ ಫಲಗಳನ್ನು ನೀಡುವಳು.

ಇತ್ಯೇವಂ ಸ್ತವನಂ ಕೃತ್ವಾ ತತ್ರ ತಸ್ಥೌ ರಮಾಪತಿಃ ।
ದದರ್ಶ ತುಲಸೀಂ ಸಾಕ್ಷಾತ್ ಪಾದಪದ್ಮೇ ನತಾಂ ಸತೀಮ್ ॥

ರುದತೀಮಭಿಮಾನೇನ ಮಾನಿನೀಂ ಮಾನಪೂಜಿತಾಮ್ ।
ಪ್ರಿಯಾಂ ದೃಷ್ಟ್ವಾ ಪ್ರಿಯಃ ಶೀಘ್ರಂ ವಾಸಯಾಮಾಸ ವಕ್ಷಸಿ ॥

– ಬ್ರಹ್ಮವೈವರ್ತಪುರಾಣ (೨/೨೨/೨೭, ೨೮)

ಹೀಗೆ ಸ್ತುತಿಸಿ, ನಿಂತಂತಹ ಪಾವನಿಯಾದ ತುಲಸಿಯನ್ನು ಲಕ್ಷ್ಮೀಪತಿಯಾದ ನಾರಾಯಣನನ್ನು ಕಂಡನು. ಅಭಿಮಾನದಿಂದಾಗಿ ರೋದಿಸುತ್ತಿದ್ದ ಮಾನದಿಂದ ಪೂಜಿತಳಾದ ಪ್ರಿಯೆಯಾದ ತುಲಸಿಯನ್ನು ಕಂಡು ಕೂಡಲೇ ಶ್ರೀಹರಿಯು ಅವಳನ್ನು ತನ್ನ ವಕ್ಷಸ್ಥಳದಲ್ಲಿ ನೆಲೆಸುವಂತೆ ಮಾಡಿದನು.

ಭಾರತ್ಯಾಜ್ಞಾಂ ಗೃಹೀತ್ವಾ ಚ ಸ್ವಾಲಯಂ ಪ್ರಯಯೌ ಹರಿಃ ।
ಭಾರತ್ಯಾ ಸಹ ತತ್ಪ್ರೀತಿಂ ಕಾರಯಾಮಾಸ ಸತ್ವರಮ್ ॥

– ಬ್ರಹ್ಮವೈವರ್ತಪುರಾಣ (೨/೨೨/೨೯)

ಭಾರತಿಯ ಅನುಮತಿಯನ್ನು ಪಡೆದುಕೊಂಡು ಅವಳನ್ನು ಕರೆದುಕೊಂಡು ಶ್ರೀಹರಿಯು ತನ್ನ ಲೋಕಕ್ಕೆ ತೆರಳಿದ; ಭಾರತಿಗೆ ತುಲಸಿಯೊಂದಿಗೆ ಮೈತ್ರಿಯನ್ನು ಕೂಡಲೇ ಏರ್ಪಡಿಸಿದ.

ವರಂ ವಿಷ್ಣುರ್ದದೌ ತಸ್ಯೈ ವಿಶ್ವಪೂಜ್ಯಾ ಭವೇತಿ ಚ ।
ಶಿರೋಧಾರ್ಯಾ ಚ ಸರ್ವೇಷಾಂ ವಂದ್ಯಾ ಮಾನ್ಯಾ ಮಮೇತಿ ಚ ॥

– ಬ್ರಹ್ಮವೈವರ್ತಪುರಾಣ (೨/೨೨/೩೦)

ತುಲಸಿಗೆ ವಿಷ್ಣುವು ವಿಶ್ವಪೂಜ್ಯಳಾಗು, ಸಕಲರಿಂದಲೂ ಶಿರಸ್ಸಿನಲ್ಲಿ ಧರಿಸಲ್ಪಡು, ಎಲ್ಲರಿಗೂ ವಂದ್ಯಳಾಗು, ನನಗೂ ಮಾನ್ಯಳಾಗು ಎಂದು ವರವನ್ನು ನೀಡಿದ.

ವಿಷ್ಣೋರ್ವರೇಣ ಸಾ ದೇವೀ ಪರಿತುಷ್ಟಾ ಬಭೂವ ಹ ।
ಸರಸ್ವತೀ ತಾಮಾಶ್ಲಿಷ್ಯ ವಾಸಯಾಮಾಸ ಸನ್ನಿಧೌ ॥
ಲಕ್ಷ್ಮೀರ್ಗಂಗಾ ಸಸ್ಮಿತಾ ತಾಂ ಸಮಾಶ್ಲಿಷ್ಯ ಚ ನಾರದ ।
ಗೃಹಂ ಪ್ರವೇಶಯಾಮಾಸ ವಿನಯೇನ ಸತೀಂ ಮುದಾ ॥

– ಬ್ರಹ್ಮವೈವರ್ತಪುರಾಣ (೨/೨೨/೩೧, ೩೨)

ವಿಷ್ಣುವಿನ ವರದಿಂದಾಗಿ ತುಲಸೀದೇವಿಯು ತುಂಬಾ ಸಂತುಷ್ಟನಾದನು. ಸರಸ್ವತೀ ಅವಳನ್ನು ಆಲಿಂಗಿಸಿಕೊಂಡು ತನ್ನ ಸನ್ನಿಧಿಯಲ್ಲಿ ನೆಲೆಸುವಂತೆ ಮಾಡಿದಳು. ಮಹಾಲಕ್ಷ್ಮಿ ಹಾಗೂ ಗಂಗೆಯರು ಮಂದಹಾಸದಿಂದ ತುಲಸಿಯನ್ನು ಆಲಿಂಗಿಸಿಕೊಂಡು ಆನಂದದಿಂದ ಮನೆತುಂಬಿಸಿಕೊಂಡರು.

## ಕಾರ್ತಿಕಮಾಸದಲ್ಲಿ ತುಲಸೀ ವಿವಾಹವು ಕರ್ತವ್ಯ

**ಕಾರ್ತಿಕಶುಕ್ಲನವಮೀಮವಾಪ್ಯ ವಿಜಿತೇಂದ್ರಿಯಃ ।**
**ಹರಿಂ ವಿಧಾಯ ಸೌವರ್ಣಂ ತುಲಸ್ಯಾ ಸಹಿತಂ ವಿಭುಮ್ ॥**

**ಪೂಜಯೇದ್ವಿಧಿವದ್ಭಕ್ತ್ಯಾ ವ್ರತೀ ತತ್ರ ದಿನತ್ರಯಮ್ ।**
**ಏವಂ ಯಥೋಕ್ತವಿಧಿನಾ ಕುರ್ಯಾದ್ವೈವಾಹಿಕೀಂ ವಿಧಿಮ್[೧೩] ॥**

– ವರಾಹಪುರಾಣ

ಕಾರ್ತಿಕಮಾಸದ ಶುಕ್ಲಪಕ್ಷದ ನವಮಿಯಂದು ಜಿತೇಂದ್ರಿಯನಾಗಿದ್ದು ತುಲಸೀ ಸಹಿತವಾದ ಶ್ರೀಹರಿಯ ಚಿನ್ನದ ವಿಗ್ರಹವನ್ನು ಮಾಡಿ ಭಕ್ತಿಯಿಂದ ವಿಧ್ಯುಕ್ತವಾಗಿ ಮೂರುದಿನಗಳ ಕಾಲ ಪೂಜಿಸಬೇಕು. ದ್ವಾದಶಿಯಂದು ಶಾಸ್ತ್ರೋಕ್ತವಿಧಿಯಿಂದ ತುಲಸೀವಿವಾಹವನ್ನು ಮಾಡಬೇಕು.

## ಉತ್ಥಾನದ್ವಾದಶಿಯಂದು ತುಲಸೀವಿವಾಹ

**ತತಃ ಕಾರ್ತಿಕಮಾಸಸ್ಯ ದ್ವಾದಶ್ಯಾಂ ಪರಮೋತ್ಸವಮ್ ।**
**ಪ್ರಾತರ್ವಿಧಾಯ ಕುರ್ವೀತ ಸಾಯಂ ದಾಮೋದರಾರ್ಚನಮ್ ॥**

**ತುಲಸೀಸನ್ನಿಧೌ ಕೃತ್ವಾ ಪತಾಕಾಧ್ವಜಶೋಭಿತಮ್ ।**
**ಪುಷ್ಪಮಾಲಾಸಮಾಕೀರ್ಣಂ ನಾನಾರತ್ನೋಪಶೋಭಿತಮ್ ॥**

**ಶತಶೋ ಘೃತದೀಪೈಶ್ಚ ಪರಿತೋ ದೀಪ್ತತಾಂ ಗತಮ್ ।**
**ಮಂಡಪಂ ತತ್ರ ಕುರ್ವೀತ ತೋರಣೈರುಪಶೋಭಿತಮ್ ॥**

**ಮುಕ್ತಾದಾಮಭಿರಾಚ್ಛನ್ನಂ ರಮ್ಯಸಿಂಹಾಸನೇ ಸ್ಥಿತಮ್ ।**
**ಪೂಜಯೇತ್ ಪರಯಾ ಭಕ್ತ್ಯಾ ಪಂಚರಾತ್ರೋಕ್ತಮಾರ್ಗತಃ ।**
**ನವನೀತಂ ದಧಿ ಕ್ಷೀರಂ ತಥೈವ ಚ ಘನಂ ಘೃತಮ್ ॥**

**ವಿವಿಧೈಃ ಖಾದ್ಯನೈವೇದ್ಯೈರ್ಜಲೇನ ಚ ಸುಗಂಧಿನಾ ।**
**ಯುಕ್ತಂ ನಿವೇದಯೇನ್ಮಹ್ಯಂ ತಾಂಬೂಲಂ ಸಲವಂಗಕಮ್ ॥**

೧೩ ತುಲಸ್ಯಾ ಸಹ ಹರೇರ್ವಿವಾಹಂ ನವಮ್ಯಾದಿದಿನತ್ರಯಮುಪೋಷ್ಯ ದ್ವಾದಶ್ಯಾಂ ವ್ರತಂ ಸಮಾಪಯೇತ್ ।

ಪುಷ್ಪಾಣಿ ಚ ವಿಚಿತ್ರಾಣಿ ಸುಗಂಧೀನಿ ಬಹೂನಿ ಚ ।
ದಕ್ಷಿಣಾಂ ಚಾಪಿ ವಿಧಿವದರ್ಪಯಿತ್ವಾದಲೈಃ ಶುಭೈಃ ॥

ತುಲಸ್ಯಾ ವಾಽಥ ಧಾತ್ರ್ಯಾಶ್ಚ ಫಲೈಶ್ಚಾಪಿ ಪ್ರಪೂಜಯೇತ್ ।
ಸದೈವ ತುಲಸೀ ಸೇವ್ಯಾ ತಥಾ ಧಾತ್ರೀ ಪ್ರಕೀರ್ತಿತಾ ॥

ಸಪ್ತಮೀರವಿವಾರಾಭ್ಯಾಂ ವಿನಾ ತಾಂ ಭಕ್ಷಯೇತ್ ಸದಾ ।
ನ ಶಾಕವ್ರತಹಾನಿಃ ಸ್ಯಾತ್ ತಸ್ಯಾ ಭಕ್ಷಣತಃ ಕ್ವಚಿತ್ ॥

ಕೇಶದುಷ್ಟಂ ಭಾವದುಷ್ಟಂ ಯಚ್ಚಾನ್ಯತ್ ಕ್ಷುದ್ರದೋಷವತ್ ।
ಅನ್ನಂ ವಿಶುದ್ಧತಾಮೇತಿ ಧಾತ್ರೀಫಲಸಮಾಗಮಾತ್ ॥

ಯತಃ ಸಾ ಮತ್ಪ್ರಿಯಾ ದೇವಿ ತತೋ ಹಂತಿ ಚ ಪಾತಕಮ್ ।
ತದರ್ಪಣೇನ ಮೇ ಪ್ರೀತಿರ್ಜಾಯತೇ ದೇವಿ ಸರ್ವದಾ ॥

ತತೋ ನೀರಾಜಯೇನ್ಮಾಂ ಚ ಲಕ್ಷ್ಮೀಸಹಿತಮೀಶ್ವರಮ್ ।
ಗೀತಾನಾಮಸಹಸ್ರಾಭ್ಯಾಂ ಸ್ತವರಾಜೇನ ವಾ ಪುನಃ ॥

ಅನುಸ್ಮೃತ್ಯಾ ಗಜೇಂದ್ರಸ್ಯ ಮೋಕ್ಷಣೇನ ಸ್ತುವೀತ ಮಾಮ್ ।
ಸರ್ವಸ್ತೋತ್ರಸಮೂಹೇಭ್ಯೋ ವೈದಿಕೇಭ್ಯೋಽಪಿ ಮೇ ಪ್ರಿಯಮ್ ॥

ಪಂಚಕಂ ತೇನ ಮಾಂ ನಿತ್ಯಂ ಸ್ತುವೀತಾನೇನ ಭಕ್ತಿಮಾನ್ ।
ಅಥವಾಽಷ್ಟಶತಂ ನಾಮ್ನಾಂ ಜಪೇದ್ಭಕ್ತಿಸಮನ್ವಿತಃ ॥

ತತೋ ಗುರುಂ ಬ್ರಾಹ್ಮಣಾಂಶ್ಚ ಮಾತಾಪಿತೃಮುಖಾನಪಿ ।
ಪೂಜಯೇತ್ ಪರಯಾ ಭಕ್ತ್ಯಾ ತೇಽಪ್ಯುಕ್ತಾ ಮಮ ಮೂರ್ತಯಃ ॥

ಮನ್ನಿವೇದಿತಶೇಷೇಣ ತೇಷಾಂ ಪೂಜಾಂ ಸಮಾಚರೇತ್ ।
ದಕ್ಷಿಣಾಖಾದ್ಯದಾನಾದ್ಯೈಸ್ತತೋ ಭಾರ್ಯಾಯುತಃ ಸ್ವಯಮ್ ॥

ಸುಹೃದ್ಭಿಃ ಪುತ್ರಪೌತ್ರಾದ್ಯೈರ್ಭೃತ್ಯೈರ್ದೀನೈಃ ಸಹೈವ ತು ।
ಮನ್ನಿವೇದಿತಮಶ್ನೀಯಾತ್ ಮಹೋತ್ಸವಸಮನ್ವಿತಃ ॥ – ವರಾಹಪುರಾಣ

ಅನಂತರ ಕಾರ್ತಿಕಮಾಸದ ದ್ವಾದಶೀ ಉತ್ಥಾನದ್ವಾದಶೀ ಎಂಬ ಪುಣ್ಯತಿಥಿ. ಅಂದು ಪ್ರಾತಃಕಾಲದಲ್ಲಿ ಹಾಗೂ ಸಾಯಂಕಾಲದಲ್ಲಿ ತುಲಸೀ ಸನ್ನಿಧಾನದಲ್ಲಿ ಪತಾಕೆ, ಧ್ವಜ ಮೊದಲಾದ ಅಲಂಕಾರಗಳೊಂದಿಗೆ ದಾಮೋದರರೂಪದ ಶ್ರೀಹರಿಯನ್ನು ಪೂಜಿಸಬೇಕು. ಬಗೆಬಗೆಯ ಹೂಮಾಲೆಗಳು, ಅನೇಕ ತರನಾದ ರತ್ನಗಳು, ನೂರಾರು ತುಪ್ಪದ ದೀಪಗಳು ಮೊದಲಾದ ವೈಭವದಿಂದ ಶ್ರೀಹರಿಯನ್ನು ಆರಾಧಿಸಬೇಕು. ತೋರಣಗಳಿಂದ ಕಂಗೊಳಿಸುವ ಮಂಟಪವನ್ನು ನಿರ್ಮಿಸಬೇಕು. ಮುತ್ತಿನಮಾಲೆಗಳಿಂದ ಅಲಂಕೃತವಾದ ರಮ್ಯವಾದ

ಸಿಂಹಾಸನದಲ್ಲಿ ಮಂಡಿಸಿದ ದಾಮೋದರಮೂರ್ತಿಯನ್ನು ಪಂಚರಾತ್ರದಲ್ಲಿ ನಿರೂಪಿಸಿರುವ ವಿಧಿಗೆ ಅನುಗುಣವಾಗಿ ಭಕ್ತಿಯಿಂದ ಪೂಜಿಸಬೇಕು. ಬೆಣ್ಣೆ ಮೊಸರು ಹಾಲು ಹಾಗೂ ಗಟ್ಟಿ ತುಪ್ಪಗಳನ್ನು ಬಗೆಬಗೆಯ ಭಕ್ಷ್ಯಭೋಜ್ಯಪದಾರ್ಥಗಳನ್ನು ಪರಿಮಳಭರಿತವಾದ ಜಲವನ್ನು ಲವಂಗಸಹಿತವಾದ ತಾಂಬೂಲವನ್ನು ನನಗೆ ಸಮರ್ಪಿಸಬೇಕು. ಅದರಂತೆ ಬಗೆಬಗೆಯ ಪರಿಮಳಭರಿತ ಪುಷ್ಪಗಳನ್ನು ಸಮರ್ಪಿಸಬೇಕು. ದಕ್ಷಿಣೆಯನ್ನು ನೀಡಬೇಕು. ಬಳಿಕ ಮಂಗಳಕರವಾದ ತುಲಸೀದಳಗಳಿಂದಲೂ ಧಾತ್ರೀಫಲಗಳಿಂದಲೂ ಪೂಜೆಯನ್ನು ಸಲ್ಲಿಸ-ಬೇಕು. ತುಲಸಿಯನ್ನು ಸದಾ ಸೇವಿಸಬೇಕು. ಸಪ್ತಮೀ ಹಾಗೂ ಭಾನುವಾರಗಳನ್ನು ಹೊರತುಪಡಿಸಿ, ಧಾತ್ರಿಯನ್ನು ಉಪಯೋಗಿಸಬೇಕು. ಇವುಗಳನ್ನು ಹಾಗೆ ಸ್ವೀಕರಿಸುವುದರಿಂದ ವ್ರತಭಂಗವೆನ್ನಿಸದು. ಧಾತ್ರೀಫಲವನ್ನು ಒಡಗೂಡಿಸುವುದರಿಂದ ಕೇಶದುಷ್ಟ ಭಾವದುಷ್ಟ ಮೊದಲಾದ ಕ್ಷುದ್ರದೋಷಗಳು ಪರಿಹಾರವಾಗಿ ಅನ್ನವು ಪರಿಶುದ್ಧ ಎನ್ನಿಸುವುದು. ಧಾತ್ರಿಯು ನನಗೆ ಪ್ರಿಯವಾದ್ದರಿಂದ ಹಾಗೆ ಅದು ಪಾಪವನ್ನು ಪರಿಹರಿಸುವ ಸಾಮರ್ಥ್ಯವನ್ನು ಹೊಂದಿರುವುದು. ಅದನ್ನು ಸಮರ್ಪಿಸುವುದರಿಂದ ನನಗೆ ಪ್ರೀತಿಹುಟ್ಟುವುದು. ಬಳಿಕ ಲಕ್ಷ್ಮೀಸಮೇತನಾದ ನನ್ನನ್ನು ಆರಾಧಿಸಬೇಕು. ಗೀತಾ, ವಿಷ್ಣುಸಹಸ್ರನಾಮ, ಭೀಷ್ಮಸ್ತವರಾಜ, ಅನುಸ್ಮೃತಿ ಹಾಗೂ ಗಜೇಂದ್ರಮೋಕ್ಷಗಳಿಂದ ನನ್ನನ್ನು ವಿಶೇಷವಾಗಿ ಸ್ತುತಿಸಬೇಕು. ಈ ಐದು ಇತರ ವೇದೋಕ್ತವಾದ ಸಕಲಸ್ತೋತ್ರಸಮೂಹಗಳಿಗಿಂತಲೂ ಮಿಗಿಲಾದವು. ಇದರಿಂದ ನನ್ನನ್ನು ಪ್ರತಿನಿತ್ಯವೂ ಸ್ತುತಿಸಬೇಕು. ಅಷ್ಟೋತ್ತರಶತನಾಮಸ್ತೋತ್ರದಿಂದಲೂ ನನ್ನನ್ನು ಆರಾಧಿಸಬಹುದು. ಅನಂತರ ಗುರುಗಳನ್ನು ಬ್ರಾಹ್ಮಣರನ್ನು ತಂದೆತಾಯಿ ಮೊದಲಾದವರನ್ನು ಭಕ್ತಿಯಿಂದ ಆರಾಧಿಸಬೇಕು. ಇವರೆಲ್ಲರೂ ನನ್ನ ಪ್ರತಿಮೆಗಳೆನ್ನಿಸುವರು. ಇವರಿಗೆ ನನಗೆ ಸಮರ್ಪಿಸಿದ ನೈವೇದ್ಯಶೇಷವನ್ನು ನೀಡಬೇಕು. ದಕ್ಷಿಣೆ ಮೊದಲಾದವುಗಳನ್ನು ನೀಡಬೇಕು. ಪತ್ನಿಯೊಂದಿಗೆ ಹಾಗೂ ಸ್ನೇಹಿತರು ಮಕ್ಕಳು ಮೊಮ್ಮಕ್ಕಳು ಸೇವಕರು ಮೊದಲಾದವರೊಂದಿಗೆ ನನ್ನ ನೈವೇದ್ಯವನ್ನು ಮಹೋತ್ಸವದೊಂದಿಗೆ ಭುಂಜಿಸಬೇಕು.

## ತುಲಸೀವಿವಾಹದಂದು ವಿಶೇಷ

ಪ್ರತಿಪದ್ದಿನಮಾರಭ್ಯ ದ್ವಾದಶೀ ಸಮುಪಸ್ಥಿತಾ ।
ತಾವಚ್ಛಾಕಾನಿ ಸಂತ್ಯಜ್ಯ ಪೂರ್ವೋಕ್ತದ್ವಿದಲಾನಿ ಚ ॥

ದಧಿ ಕ್ಷೀರಂ ತಥಾ ತ್ಯಕ್ತ್ವಾ ಚರನ್ ಧರ್ಮಮಾನಸಃ ।
ದಶಮ್ಯಾಂ ಪ್ರಾತರುತ್ಥಾಯ ದಂತಧಾವನಪೂರ್ವಕಮ್ ॥

ಸ್ನಾತ್ವಾ ವಿಷ್ಣುಂ ಸಮಭ್ಯರ್ಚ್ಯ ತುಲಸ್ಯಾ ಕೋಮಲೈರ್ದಲೈಃ ।
ಪೂರ್ವೋಕ್ತೇನ ವಿಧಾನೇನ ಭುಕ್ತ್ವಾ ನಾರಾಯಣಾಗ್ರತಃ ॥

ತತಃ ಪ್ರಾತಃ ಸಮುತ್ಥಾಯ ಉಪೋಷ್ಯ ವಿಧಿವದ್ದ್ವಿಜಃ ।
ರಾತ್ರೌ ಜಾಗರಣಂ ಕುರ್ಯಾತ್ ಪುರಾಣಪಠಣಾದಿಭಿಃ ॥

ದ್ವಾದಶ್ಯಾಂ ಪ್ರಾತರುತ್ಥಾಯ ಸ್ನಾತ್ವಾ ಕರ್ಮ ಸಮಾಪ್ಯ ಚ ।
ಅಭ್ಯರ್ಚ್ಯ ವಿಷ್ಣುಂ ದೇವೇಶಮುಪವಾಸಂ ಸಮರ್ಪಯೇತ್ ॥

ಏಕಾದಶ್ಯಾಂ ನಿರಾಹಾರಃ ಸ್ಥಿತ್ವಾಽಹಮಪರೇಽಹನಿ ।
ಭೋಕ್ಷ್ಯಾಮಿ ಪುಂಡರೀಕಾಕ್ಷ ಶರಣಂ ಭವ ಮೇಽಚ್ಯುತ ॥

ಅಜ್ಞಾನತಿಮಿರಾಂಧಸ್ಯ ವ್ರತೇನಾನೇನ ಕೇಶವ ।
ಪ್ರಸೀದ ಸುಮುಖೋ ನಾಥ ಜ್ಞಾನದೃಷ್ಟಿಪ್ರದೋ ಭವ ॥

ಕರಾವಲಂಬನಂ ದೇಹಿ ಶ್ರೀಕೃಷ್ಣ ಕಮಲೇಕ್ಷಣ ।
ಭವಪಂಕಾರ್ಣವೇ ಘೋರೇ ಮಜ್ಜತೋ ಮಮ ಸರ್ವದಾ ॥

ತ್ರಾಹಿ ತ್ರಾಹಿ ಜಗನ್ನಾಥ ವಾಸುದೇವಾಚ್ಯುತಾವ್ಯಯ ।
ಮಾಂ ಸಮುದ್ಧರ ಗೋವಿಂದ ದುಃಖಸಂಸಾರಸಾಗರಾತ್ ॥

ಏವಂ ಪ್ರಾರ್ಥ್ಯ ಚ ಸಂಪೂಜ್ಯ ಲಕ್ಷ್ಮೀದಾಮೋದರಂ ವಿಭುಮ್ ।
ದದ್ಯಾತ್ ಸಂಪೂಜ್ಯ ವಿಧಿವತ್ ಪಶ್ಚಾತ್ ತಸ್ಮೈ ಕುಟುಂಬಿನೇ ॥

ದೇವದೇವ ಜಗನ್ನಾಥ ಲಕ್ಷ್ಮೀದಾಮೋದರಪ್ರಭೋ ।
ಚಾತುರ್ಮಾಸ್ಯೇ ತ್ವಯಾಽಽಜ್ಞಪ್ತಃ ಕೃತ್ವಾ ವ್ರತಚತುಷ್ಟಯಮ್ ॥

ನವಮೂರ್ತಿಂ ಪ್ರದಾಸ್ಯಾಮಿ ತ್ವತ್ಪ್ರಸಾದಾಭಿಕಾಂಕ್ಷಯಾ ।
ಮಂತ್ರೇಣಾನೇನ ತಾಂ ದದ್ಯಾದರ್ಚಿತಂ ತುಲಸೀದಲೈಃ ॥

ತತೋ ಗೋಮಿಥುನಂ ದತ್ವಾ ಬ್ರಾಹ್ಮಣಾನ್ ಭೋಜಯೇತ್ ಸುಧೀ ।
ಪಶ್ಚಾಚ್ಚ ಬಂಧುಭಿಃ ಸಾಕಂ ಸ್ವಯಂ ಭುಂಜೀತ ವಾಗ್ಯತಃ ॥

ಆಸಾಯಾಹ್ನಂ ಪುರಾಣಾದ್ಯೈರಹಃಶೇಷಂ ಕ್ಷಪೇದ್ಬುಧಃ ।
ಅಸ್ತಂಗತೇ ದಿನಕರೇ ಪುನಃ ಸ್ನಾತ್ವಾ ಯಥಾ ವಿಧಿ ॥

ವೃಂದಾವನೇ ತತಃ ಕುರ್ಯಾನ್ಮಂಟಪಂ ಚತುರಸ್ರಕಮ್ ।
ಪುಷ್ಪಮಾಲ್ಯೈಃ ಫಲೈರ್ದೀಪೈರ್ನಾರಿಕೇಲಾದಿಭಿಃ ಶುಭೈಃ ॥

ಪೂಗೀಫಲೈರಿಕ್ಷುದಂಡೈ ರಂಭಾಸ್ತಂಭೈಶ್ಚ ಶೋಭಿತಮ್ ।
ಪೂಜಯೇತ್ ತತ್ರ ದೇವೇಶಂ ಕ್ಷೀರಾಂಬುಧಿಸಮನ್ವಿತಮ್ ॥

ಪಾರಣಾಹೇ ಪೂರ್ವರಾತ್ರೇ ಘಟಾದೀನ್ ವಾದಯೇನ್ ಮುಹುಃ।
ದೇವಮುತ್ಥಾಪಯೇದತ್ರ ಮಹಾಪೂಜಾದಿಪೂರ್ವಕಮ್[೧೪] ॥

ಅತ್ರೈವ ದೇವದೇವಸ್ಯ ಸ್ನಾನಪೂರ್ವಮಹದ್ಭವೇತ್।
ಮಹಾಪೂಜಾಂ ತತಃ ಕೃತ್ವಾ ದೇವಮುತ್ಥಾಪಯೇತ್ ಸುಧೀಃ ॥

– ವರಾಹಪುರಾಣ

ಕಾರ್ತಿಕಮಾಸದ ಶುಕ್ಲಪಕ್ಷದ ದ್ವಾದಶಿಯು ಉತ್ಥಾನದ್ವಾದಶಿ ; ಅದು ಯೋಗನಿದ್ರೆಯನ್ನು ಪೂರೈಸಿ ಶ್ರೀಹರಿಯು ಎದ್ದೇಳುವ ದಿವಸ. ಆ ಮುನ್ನ ದಶಮಿಯಂದು ಪ್ರಾತಃಕಾಲದಲ್ಲಿ ಎದ್ದು ದಂತಧಾವನವನ್ನು ಪೂರೈಸಿ, ಸ್ನಾನಮಾಡಿ ವಿಷ್ಣುವನ್ನು ತುಲಸಿಯ ಕೋಮಲದಳಗಳಿಂದ ಪೂಜಿಸಬೇಕು. ಮಾರನೆಯದಿನ ಏಕಾದಶಿಯಂದು ಉಪವಾಸವಿದ್ದು ರಾತ್ರಿಯಲ್ಲಿ ಜಾಗರಣೆ ಮಾಡಬೇಕು. ದ್ವಾದಶಿಯಂದು ಬೆಳಿಗ್ಗೆ ಎದ್ದು ಸ್ನಾನ ಪೂಜಾದಿಗಳನ್ನು ಪೂರೈಸಿ, ಉಪವಾಸವನ್ನು ಶ್ರೀಹರಿಗೆ ಸಮರ್ಪಿಸಬೇಕು. ಲಕ್ಷ್ಮೀದಾಮೋದರನಾದ ಶ್ರೀಹರಿಯನ್ನು ವಿಶೇಷವಾಗಿ ಪ್ರಾರ್ಥಿಸಿ "ನಾನು ಚಾತುರ್ಮಾಸ್ಯವ್ರತವನ್ನು ನಿನ್ನ ಆದೇಶದಂತೆ ನಿನ್ನ ಅನುಗ್ರಹಕ್ಕೋಸ್ಕರವಾಗಿ ಪೂರೈಸಿರುವೆನು" ಎಂದು ಸಮರ್ಪಿಸಬೇಕು. ಆ ಬಳಿಕ ಎರಡು ಗೋವುಗಳನ್ನು ದಾನ ಮಾಡಿ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಆ ಬಳಿಕ ಬಂಧುಗಳೊಂದಿಗೆ ತಾನೂ ಸಹ ಭೋಜನವನ್ನು ಪೂರೈಸಬೇಕು. ಸೂರ್ಯನು ಅಸ್ತಮಿಸಿದ ಮೇಲೆ ಮತ್ತೊಮ್ಮೆ ವಿಧ್ಯುಕ್ತವಾಗಿ ಸ್ನಾನಮಾಡಿ ವೃಂದಾವನದ ಬಳಿಯಲ್ಲಿ ಚೌಕಾಕಾರದ ಮಂಟಪವನ್ನು ನಿರ್ಮಿಸಬೇಕು. ಅದನ್ನು ಪುಷ್ಪ ಫಲ, ತೆಂಗು, ಅಡಿಕೆ, ಕಬ್ಬು, ಬಾಳೆ ಮೊದಲಾದವುಗಳಿಂದ ಅಲಂಕರಿಸಬೇಕು. ಅಲ್ಲಿ ಕ್ಷೀರಾಂಬುಧಿಸಮೇತನಾದ ಶ್ರೀಹರಿಯನ್ನು ಪೂಜಿಸಬೇಕು. ಪಾರಣೆಯ ದಿನದಂದು ಬೆಳಗಿನಜಾವದಲ್ಲಿ ವಾದ್ಯಘೋಷಪೂರ್ವಕವಾಗಿ ಶ್ರೀಹರಿಯನ್ನು ಎಬ್ಬಿಸಿ ಮಹಾಪೂಜಾದಿಗಳನ್ನು ಪೂರೈಸಿರಬೇಕು (ಬ್ರಹ್ಮಪುರಾಣ ಮೊದಲಾದವುಗಳಲ್ಲಿ ಈ ಪ್ರಬೋಧೋತ್ಸವವನ್ನು ಏಕಾದಶಿಯಂದೇ ಆಚರಿಸಲು ವಿಹಿತವಾಗಿದೆ).

★★★

## ತುಲಸಿಯಿಂದ ವಿಷ್ಣುವಿನ ಪೂಜೆ

ವಿಷ್ಣುಪೂಜೆಯು ಮೋಕ್ಷಪ್ರಾಪ್ತಿಯ ಮುಖ್ಯಸಾಧನಗಳಲ್ಲೊಂದು. ಅಂತಹ ಪೂಜೆಗೆ ಬಗೆಬಗೆಯ ದ್ರವ್ಯಗಳು ವಿಹಿತ. ಅದರಲ್ಲಿ ತುಲಸಿಗೆ ಅಗ್ರಸ್ಥಾನ. ಪುಷ್ಪಗಳು, ಪತ್ರಗಳು, ಬಗೆಬಗೆಯ ಗಂಧಗಳ ಲೇಪನ, ಚಿಗುರುಗಳು ಶ್ರೀಹರಿಯ ಪೂಜೆಗೆ ವಿಹಿತ. ಆದರೆ, ತುಲಸಿಗೆ

೧೪ ಮಹಾಪೂಜಾ – ಪಂಚಾಮೃತಪೂರ್ವಿಕಾ। ಬ್ರಹ್ಮಾದೌ ಏಕಾದಶ್ಯಾಂ ಪ್ರಬೋಧ ಉಕ್ತಃ। –ಚಾ.ಮೀ.

ಇವುಗಳಲ್ಲಿ ಅಗ್ರಸ್ಥಾನ. ಇತರ ಯಾವುದೇ ಪೂಜಾದ್ರವ್ಯವೂ ಲಭಿಸದಿದ್ದಾಗ, ಕೇವಲ ತುಲಸಿಯಿಂದಲೇ ಶ್ರೀಹರಿಯನ್ನು ಪೂಜಿಸಬಹುದು. ಇತರ ದ್ರವ್ಯಗಳಿಂದ ಪೂಜಿಸುವಾಗಲೂ ಸಹ ಅವುಗಳೊಂದಿಗೆ ತುಲಸಿಯನ್ನು ಸೇರಿಸಲೇಬೇಕು. ತುಲಸಿಯ ಸಂಪರ್ಕವಿಲ್ಲದ ಪುಷ್ಪ ಮೊದಲಾದವುಗಳ ಪೂಜೆಯನ್ನು ಶ್ರೀಹರಿಯು ಸರ್ವಥಾ ಸ್ವೀಕರಿಸಲಾರ ಎಂಬುದು ಶಾಸ್ತ್ರಗಳಲ್ಲಿ ಬಗೆಬಗೆಯಾಗಿ ನಿರೂಪಿತವಾಗಿದೆ. ಇತರ ಪುಷ್ಪಗಳ ಪೂಜೆಯಿಂದ ಒಂದೊಂದು ತೆರನಾದ ಫಲವು ನಿರೂಪಿತವಾಗಿದ್ದರೆ, ತುಲಸಿಯಿಂದ ಆಗುವ ಪೂಜೆಗೆ ಸಕಲವಿಧವಾದ ಫಲವೂ ಸಹ ಒಟ್ಟಾಗಿಯೇ ನಿರೂಪಿತವಾಗಿದೆ. ಆದರಿಂದಾಗಿಯೇ ''ಒಲ್ಲನೋ ಹರಿ ಕೊಳ್ಳನೋ ಎಲ್ಲ ಸಾಧನವಿದ್ದು ತುಲಸಿಯಿಲ್ಲದ ಪೂಜೆ'' ಎಂದು ಶ್ರೀಪುರಂದರ ದಾಸರು ಕೊಂಡಾಡಿರುವರು.

**ತತೋಽತೀವ ಪ್ರಿಯಕರಾ ತುಲಸೀ ಜಗತಾಂ ಪತೇಃ ।**
**ಸಾ ತು ದೇವಗಣೈಃ ಸರ್ವೈರ್ವಿಷ್ಣುವತ್ ಪೂಜ್ಯತೇ ಪ್ರಿಯಾ ।**
**ನಾರಾಯಣೋ ಜಗತ್ರಾತ್ರಾ ತುಲಸೀ ತಸ್ಯ ವಲ್ಲಭಾ ॥**

– ಸ್ಕಂದಪುರಾಣ (೨/೪/೮/೩೭-೩೮)

ಜಗತ್ತಿನ ಸ್ವಾಮಿಯಾದ ಶ್ರೀವಿಷ್ಣುವಿಗೆ ತುಲಸಿಯು ಅತ್ಯಂತ ಪ್ರಿಯಕರವಾದುದು. ವಿಷ್ಣುವಿಗೆ ಪ್ರಿಯಳಾದ ಅದು ದೇವತೆಗಳ ಗುಂಪಿನಿಂದಲೂ ಸಹ ವಿಷ್ಣುವಿನಂತೆಯೇ ಪೂಜಿಸಲ್ಪಡುವುದು. ನಾರಾಯಣನು ಜಗತ್ತಿನ ರಕ್ಷಕ; ತುಲಸಿ ಅವನ ಪ್ರಿಯೆ.

**ನಾನ್ಯೈಃ ಪುಷ್ಪೈಸ್ತಥಾ ಪತ್ರೈರ್ನಾನ್ಯೈರ್ಗಂಧಾನುಲೇಪನೈಃ ।**
**ತುಷ್ಯತೇ ದೈತ್ಯಹಾ ವಿಷ್ಣುಸ್ತುಲಸ್ಯಾಶ್ಚ ದಲಂ ವಿನಾ ॥**

– ಪದ್ಮಪುರಾಣ, ಸೃಷ್ಟಿಖಂಡ (೫/೫೮/೧೧೩)

ತುಲಸಿಯ ಹೊರತು, ಬೇರೆ ಪುಷ್ಪಗಳಿಂದಾಗಲಿ, ಪತ್ರಗಳಿಂದಾಗಲಿ, ಗಂಧಗಳ ಲೇಪನದಿಂದಾಗಲಿ ಅಸುರಾರಿಯಾದ ವಿಷ್ಣುವು ಸಂತುಷ್ಟನಾಗಲಾರ.

**ಅನೇನ ಪೂಜಿತೋ ಯೇನ ಹರಿರ್ನಿತ್ಯಂ ಪರಾಶಯಾ ।**
**ತೇನ ದತ್ತಂ ಹುತಂ ಜ್ಞಾತಂ ಕೃತಂ ಯಜ್ಞವ್ರತಾದಿಕಮ್ ॥**

– ಪದ್ಮಪುರಾಣ, ಸೃಷ್ಟಿಖಂಡ (೫/೫೮/೧೧೪)

ಇತರ ಫಲಗಳ ಅಪೇಕ್ಷೆಯನ್ನು ತೊರೆದು ತುಲಸಿಯಿಂದ ಶ್ರೀಹರಿಯನ್ನು ಪೂಜಿಸಿದರೆ ದಾನ ಹೋಮ, ಜ್ಞಾನ, ಯಜ್ಞ, ವ್ರತ ಮೊದಲಾದ ಸಕಲ ಸತ್ಕರ್ಮಗಳ ಫಲವೂ ಲಭಿಸುವುದು.

**ಜನ್ಮಜನ್ಮನಿ ಭಾಸಿತ್ವಂ ಸುಖಂ ಭೋಗ್ಯಂ ಯಶಃಶ್ರಿಯೌ ।**
**ಕುಲಂ ಶೀಲಂ ಕಲತ್ರಂ ಚ ಪುತ್ರಂ ದುಹಿತರಸ್ತಥಾ ॥**
**ಧನಂ ರಾಜ್ಯಮಾರೋಗ್ಯಂ ಚ ಜ್ಞಾನಂ ವಿಜ್ಞಾನಮೇವ ಚ ।**

**ವೇದವೇದಾಂಗಶಾಸ್ತ್ರಂ ಚ ಪುರಾಣಾಗಮಸಂಹಿತಾಃ।**
**ಸರ್ವಂ ಕರಗತಂ ಮನ್ಯೇ ತುಲಸ್ಯಾ ಅರ್ಚನೇ ಹರೇಃ॥**

- ಪದ್ಮಪುರಾಣ, ಸೃಷ್ಟಿಖಂಡ (೫/೫೮/೧೧೫-೧೧೭)

ಶ್ರೀಹರಿಯನ್ನು ತುಲಸಿಯಿಂದ ಪೂಜಿಸಿದರೆ ಜನ್ಮಜನ್ಮಗಳಲ್ಲಿ ಶೋಭೆ, ಸುಖಭೋಗಗಳು, ಕೀರ್ತಿ, ಸಂಪತ್ತು, ಕುಲ, ಶೀಲ, ಪತ್ನಿ, ಪುತ್ರರು, ಪುತ್ರಿಯರು, ಧನ, ರಾಜ್ಯ, ಆರೋಗ್ಯ , ಜ್ಞಾನ, ವಿಜ್ಞಾನ, ವೇದವೇದಾಂಗಗಳ ಶಾಸ್ತ್ರಗಳು ಪುರಾಣ, ಆಗಮ ಸಂಹಿತೆಗಳು ಸಕಲವೂ ಸಹ ಕರಗತವಾಗುವವು.

**ತುಲಸೀದಲೇನ ಚೈಕೇನ ಪೂಜಯಿತ್ವಾ ಹರಿಂ ನರಃ।**
**ವೈಷ್ಣವತ್ವಮವಾಪ್ನೋತಿ ಕಿಮನ್ಯೈಃ ಶಾಸ್ತ್ರವಿಸ್ತರೈಃ॥**

- ಪದ್ಮಪುರಾಣ (೫/೫೮/೧೩೮)

ಮಾನವನು ಒಂದೇ ಒಂದು ತುಲಸೀದಳದಿಂದ ಶ್ರೀಹರಿಯನ್ನು ಪೂಜಿಸಿದರೆ ವೈಷ್ಣವತ್ವವನ್ನು ಹೊಂದುವನು. ಇತರ ಹೆಚ್ಚಿನ ಶಾಸ್ತ್ರಗಳಿಂದೇನು?

**ಅರ್ಚಿತಃ ಕೇಶವೋ ಯೇನ ಶಾಖಾಮೃದುಲಪಲ್ಲವೈಃ।**
**ನ ಪಿಬೇತ್ ಸ ಪಯೋ ಮಾತುಸ್ತುಲಸ್ಯಾಃ ಕೋಟಿಸಂಖ್ಯಕೈಃ॥**

-ಪದ್ಮಪುರಾಣ (೫/೫೮/೧೩೯)

ಯಾವನು ಕೋಟಿಸಂಖ್ಯೆಯಲ್ಲಿ ತುಲಸಿಯ ಶಾಖೆಗಳಿಂದ, ಕೋಮಲವಾದ ಎಸಳುಗಳಿಂದ ಬ್ರಹ್ಮರುದ್ರಪ್ರವರ್ತಕನಾದ ಶ್ರೀಹರಿಯನ್ನು ಅರ್ಚಿಸುವನೋ ಅವನು ಮತ್ತೊಮ್ಮೆ ತಾಯಿಯ ಹಾಲನ್ನು ಕುಡಿಯಲಾರ.

**ಭಾವಯೇತ್ ಪುರುಷಾನ್ಮರ್ತ್ಯಃ ಶತಶೋಽಥ ಸಹಸ್ರಶಃ।**
**ಪೂಜಯಿತ್ವಾ ಹರಿಂ ನಿತ್ಯಂ ಕೋಮಲೈಸ್ತುಲಸೀದಲೈಃ॥**

- ಪದ್ಮಪುರಾಣ (೫/೫೮/೧೪೦)

ನೂರುಗಟ್ಟಲೆ, ಸಾವಿರಗಟ್ಟಲೆ ಕೋಮಲವಾದ ತುಲಸೀದಳಗಳಿಂದ ಶ್ರೀಹರಿಯನ್ನು ನಿತ್ಯ ಪೂಜಿಸಿ, ಪ್ರಾರ್ಥಿಸಿಕೊಳ್ಳಬೇಕು.

**ನಿತ್ಯಂ ಯಸ್ತುಲಸೀಂ ದತ್ವಾ ಪೂಜಯೇನ್ಮಾಂ ಚ ಮಾನವಃ।**
**ಲಕ್ಷಾಶ್ವಮೇಧಜಂ ಪುಣ್ಯಂ ಲಭತೇ ನಾತ್ರ ಸಂಶಯಃ॥**

- ಬ್ರಹ್ಮವೈವರ್ತಪುರಾಣ (೨/೨೧/೪೫)

ಯಾವ ಮಾನವನು ನಿತ್ಯವೂ ತುಲಸಿಯನ್ನು ಸಮರ್ಪಿಸಿ, ನನ್ನನ್ನು ಪೂಜಿಸುವನೋ ಅವನು ಲಕ್ಷ ಅಶ್ವಮೇಧಗಳಿಂದ ಲಭಿಸುವ ಪುಣ್ಯವನ್ನು ಹೊಂದುವನು. ಈ ಬಗ್ಗೆ ಸಂಶಯಬೇಡ.

**ಯತ್ಫಲಂ ಸರ್ವಪುಷ್ಪೈಶ್ಚ ಸರ್ವಪತ್ರೇಣ ಯತ್ಫಲಮ್ ।**
**ತುಲಸ್ಯಾಸ್ತದ್ದಲಾರ್ಧೇನ ಪುಣ್ಯಂ ಸ್ಯಾದ್ವಿಷ್ಣುಪೂಜನೇ ॥**

– ಪದ್ಮಪುರಾಣ, ಉತ್ತರಖಂಡ (೬)

ಸಕಲ ಪುಷ್ಪಗಳನ್ನೂ ಸಕಲ ಪತ್ರಗಳನ್ನೂ ಸಮರ್ಪಿಸಿದಾಗ ಯಾವ ಫಲವು ಲಭಿಸುವುದೋ ಆ ಪುಣ್ಯವು ತುಲಸಿಯ ಅರ್ಧ ದಳದಿಂದಲೇ ವಿಷ್ಣುವನ್ನು ಪೂಜಿಸಿದಾಗ ಲಭಿಸುವುದು.

**ಯದ್ಧರ್ಮಕರ್ಮ ಕುರುತೇ ಮನುಜಃ ಪೃಥಿವ್ಯಾಂ**
**ನಾರಾಯಣಪ್ರಿಯತಮಾಂ ತುಲಸೀಂ ವಿನಾ ಚ ।**
**ತತ್ಸರ್ವಮೇವ ವಿಫಲಂ ಭವತಿ ದ್ವಿಜೇಂದ್ರ**
**ಪದ್ಮೇಕ್ಷಣೋಽಪಿ ನ ಹಿ ತುಷ್ಯತಿ ದೇವದೇವಃ ॥**

– ಪದ್ಮಪುರಾಣ, ಕ್ರಿಯಾಯೋಗಸಾರ

ನಾರಾಯಣನಿಗೆ ಅತ್ಯಂತ ಪ್ರಿಯವಾದ ತುಲಸಿಯನ್ನು ಬಿಟ್ಟು ಮಾನವನು ಭೂಮಿಯಲ್ಲಿ ಯಾವ ಧರ್ಮಕರ್ಮಗಳನ್ನು ಆಚರಿಸುವನೋ ಅವೆಲ್ಲವೂ ಸಹ ವ್ಯರ್ಥವೆನ್ನಿಸುವವು; ಪುಂಡರೀಕಾಕ್ಷನಾದ ದೇವದೇವನಾದ ಶ್ರೀಹರಿಯು ಸರ್ವಥಾ ಸಂತುಷ್ಟನಾಗಲಾರ.

**ಭವತ್ಯಾ ಸಂಪೂಜಿತೋ ನಿತ್ಯಂ ತುಲಸ್ಯಾಸ್ತು ದಲಾರ್ಧತಃ ।**
**ಸ್ವಯಂ ಪ್ರತ್ಯಕ್ಷಮಾಯಾತಿ ಭಗವಾನ್ ಹರಿರೀಶ್ವರಃ ॥**

– ಸ್ಕಂದಪುರಾಣ (೨/೪/೮/೫)

ನೀನು ತುಲಸಿಯ ಅರ್ಧದಳದಿಂದಲಾದರೂ ಭಗವಂತನಾದ ಈಶ್ವರನಾದ ಶ್ರೀಹರಿಯನ್ನು ಚೆನ್ನಾಗಿ ಪೂಜಿಸಿದಲ್ಲಿ ಅವನು ಪ್ರತ್ಯಕ್ಷ ಕಾಣಿಸಿಕೊಳ್ಳುವನು.

**ಕೋಮಲೈಸ್ತುಲಸೀಪತ್ರೈರರ್ಚಯಂತಿ ಹರಿಂ ತು ಯೇ ।**
**ಯಮಸ್ಯ ಸದನಂ ವಿಪ್ರ ತೇ ನ ಯಾಂತಿ ಮಹಾಶಯಾಃ ॥**

– ಪದ್ಮಪುರಾಣ (೬/೨೫/೪೩)

ಕೋಮಲವಾದ ತುಲಸೀ ಪತ್ರಗಳಿಂದ ಯಾರು ಶ್ರೀಹರಿಯನ್ನು ಅರ್ಚಿಸುವರೋ ಅಂತಹ ಮಹಾಶಯರು ಯಮನ ಲೋಕವನ್ನು ಹೊಂದಲಾರರು.

ತುಲಸೀಮಂಜರೀಭಿರ್ಯಃ ಕುರ್ಯಾದ್ಧರಿಹರಾರ್ಚನಮ್ ।
ನ ಸ ಗರ್ಭಗೃಹಂ ಯಾತಿ ಮುಕ್ತಿಭಾಗೀ ನ ಸಂಶಯಃ ॥
- ಪದ್ಮಪುರಾಣ (೬/೧೦೭/೧೩) (೬/೨೪೪/೧೧);ಸ್ಕಂದಪುರಾಣ (೨/೪/೨೩/೧೩)

ತುಲಸಿಯ ಮಂಜರಿಗಳಿಂದ ಯಾವನು ಹರಿ ಹಾಗೂ ಹರರ ಪೂಜೆಯನ್ನು ಮಾಡು- ವನೋ ಅವನು ಗರ್ಭವೆಂಬ ಗೃಹವನ್ನು ಹೊಂದನು; ಮುಕ್ತಿಗೆ ಪಾತ್ರನಾಗುವನು; ಸಂಶಯವಿಲ್ಲ.

ತಸ್ಮಾತ್ ಸರ್ವಪ್ರಯತ್ನೇನ ತುಲಸ್ಯಾಃ ಕೋಮಲೈರ್ದಲೈಃ ।
ಪೂಜನೀಯೋ ಮಹಾಭಕ್ತ್ಯಾ ಸರ್ವಕ್ಲೇಶವಿನಾಶನಃ ॥
- ಸ್ಕಂದಪುರಾಣ (೨/೪/೭/೮೭)

ಆದ್ದರಿಂದ ಸರ್ವಪ್ರಯತ್ನದಿಂದಲೂ ತುಲಸಿಯ ಕೋಮಲ ದಳಗಳಿಂದ ಸರ್ವಕ್ಲೇಶಗಳನ್ನು ಪರಿಹರಿಸುವಂತಹ ಶ್ರೀಹರಿಯನ್ನು ಮಹಾಭಕ್ತಿಯಿಂದ ಪೂಜಿಸಬೇಕು.

★★★

## ತುಲಸೀಪೂಜೆಯು ದೇವಪೂಜೆಯಂತೆ ಮಾನ್ಯ

ದೇವಪೂಜೆಯು ನಿತ್ಯದ ಅತ್ಯಂತ ಮುಖ್ಯ ಕರ್ತವ್ಯ. ಪ್ರಮಾದ, ಆಲಸ್ಯ, ರೋಗ, ರಾಜಭಯ, ಚೋರಭಯ ಮೊದಲಾದ ಮಹಾ ಆಪತ್ತುಗಳಿಂದಾಗಿ ಒಮ್ಮೊಮ್ಮೆ ದೇವತಾಪೂಜೆಯು ಅತ್ಯಂತ ಅಶಕ್ಯ ಎನ್ನಿಸಬಹುದು. ಅಂತಹ ಸಮಯದಲ್ಲೂ ಪೂಜಾಲೋಪದ ಪಾಪ ತಟ್ಟದಿರುವ ಉಪಾಯವನ್ನಾಗಿ ತುಲಸೀಪೂಜೆಯು ವಿಹಿತವಾಗಿದೆ. ತುಲಸಿಯಲ್ಲಿ ಶ್ರೀಹರಿಯ ವಿಶೇಷ ಸನ್ನಿಧಾನ ಇರುವುದರಿಂದ ಅದು ಪೂಜಾದ್ರವ್ಯ ಮಾತ್ರವಲ್ಲದೆ ಪೂಜ್ಯವಾದ ಪ್ರತೀಕವಾಗಿಯೂ ಸಹ ಮಾನ್ಯವಾಗುವುದು ಎಂದು ಇದರಿಂದ ತಿಳಿಯುವುದು. ಸ್ತ್ರೀಯರಿಗಂತೂ ತುಲಸೀಪೂಜೆಯು ಅವರಿಗೆ ವಿಹಿತವಾದ ದೇವಪೂಜೆ.

ಶ್ರೀವಿಷ್ಣೋಃ ಪೂಜನಾಭಾವೇ ತುಲಸೀಧಾತ್ರೀಪೂಜನಮ್ ॥
- ಸ್ಕಂದಪುರಾಣ (೨/೪/೧/೫೪)

ಶ್ರೀ ವಿಷ್ಣುವಿನ ಪೂಜೆಯು ಕಾರಣಾಂತರದಿಂದ ಸರ್ವಥಾ ಅಶಕ್ಯವೆನ್ನಿಸಿದಾಗ ತುಲಸಿ ಪೂಜೆಯನ್ನು ಧಾತ್ರಿಪೂಜೆಯನ್ನು ಮಾಡಬೇಕು.

ಶಾಲಗ್ರಾಮಶಿಲಾ ವಿಷ್ಣೋ ತುಲಸ್ಯಾಸ್ತವ ಸಂಗಮೇ ।
ಸದಾ ಸಾದೃಶ್ಯರೂಪಾ ಯಾ ಬಹುಪುಣ್ಯವಿವರ್ಧನೀ ॥
- ಶಿವಪುರಾಣ (೨/೫/೪೧/೫೨)

ಸಾಲಿಗ್ರಾಮಶಿಲೆ ಹಾಗೂ ತುಲಸಿಯ ಸಂಗಮ – ಇವು ನಡೆದಾಗ ಅತ್ಯಂತ ಹೆಚ್ಚಿನ ಪುಣ್ಯವು ಲಭಿಸುವುದು.

**ಶಾಲಗ್ರಾಮಂ ಚ ತುಲಸೀಂ ಶಂಖಂ ಚೈಕತ್ರ ಏವ ಹಿ ।**
**ಯೋ ರಕ್ಷತಿ ಮಹಾಜ್ಞಾನೀ ಸ ಭವೇಚ್ಛ್ರೀಹರಿಪ್ರಿಯಃ ॥**

– ಶಿವಪುರಾಣ (೨/೫/೪೧/೫೫)

ಸಾಲಿಗ್ರಾಮ, ತುಲಸಿ ಹಾಗೂ ಶಂಖ – ಈ ಮೂರನ್ನೂ ಒಂದೆಡೆ ಇರಿಸಿ ರಕ್ಷಿಸುವವನು ಮಹಾಜ್ಞಾನಿಯಾಗುವನು; ಶ್ರೀಹರಿಗೆ ಪ್ರಿಯನೂ ಆಗುವನು.

**ಹರಿಲಿಂಗೇಷು ಚಾನ್ಯೇಷು ಶಾಲಗ್ರಾಮಶಿಲಾಸು ಚ ।**
**ತುಲಸೀಗ್ರಹಣಂ ಕೃತ್ವಾ ವಿಷ್ಣೋಃ ಸಾಯುಜ್ಯತಾಂ ವ್ರಜೇತ್ ॥**

– ಪದ್ಮಪುರಾಣ (೫/೫೮/೧೨೮)

ಸಾಲಿಗ್ರಾಮಶಿಲೆಗಳಲ್ಲಿ ಹಾಗೂ ಇತರ ಶ್ರೀಹರಿಯ ಪ್ರತಿಮೆಗಳಲ್ಲಿ ತುಲಸಿಯನ್ನು ಸಮರ್ಪಿಸುವ ಮೂಲಕ ವಿಷ್ಣುವಿನ ಸಾಯುಜ್ಯವು ಲಭಿಸುವುದು.

**ಕಿಂ ಚ ಗಂಗಾಜಲೇನೈವ ಕಿಂ ಚ ಪುಷ್ಕರಸೇವಯಾ ।**
**ತುಲಸೀದಲಮಿಶ್ರೇಣ ಜಲೇನೈವ ಪ್ರಮೋದ್ಯತೇ ॥** – ಪದ್ಮಪುರಾಣ

ಗಂಗಾಜಲವಾಗಲಿ, ಪುಷ್ಕರದ ಸೇವೆಯಾಗಲಿ ಬೇಕಿಲ್ಲ; ಕೇವಲ ತುಲಸೀದಳದಿಂದ ಮಿಶ್ರಿತವಾದ ಜಲದಿಂದಲೇ ಶ್ರೀಹರಿಯು ಸಂತುಷ್ಟನಾಗುವನು.

**ಮಾಧವಃ ಸಮ್ಮುಖೋ ಯಸ್ಯ ಜನ್ಮಜನ್ಮಸು ಧೀಮತಃ ।**
**ತಸ್ಯ ಶ್ರದ್ಧಾ ಭವೇಚ್ಛ್ರುತ್ವಾ ತುಲಸ್ಯಾ ಹರಿಮರ್ಚಿತುಮ್ ॥** – ಪದ್ಮಪುರಾಣ

ಜನ್ಮಜನ್ಮಗಳಲ್ಲಿ ಶ್ರೀಹರಿಯು ಯಾವ ಸುಜೀವಿಗೆ ಪ್ರಸನ್ನನಾಗಿರುವನೋ ಅಂತಹವನಿಗೆ ತುಲಸಿಯಿಂದ ಶ್ರೀಹರಿಯನ್ನು ಅರ್ಚಿಸುವ ಶ್ರದ್ಧೆ ಜನಿಸುವುದು.

**ಸಮಂಜರೀದಲೈರೇವ ತುಲಸ್ಯಾ ವಿಷ್ಣುಮರ್ಚಯೇತ್ ।**
**ತಸ್ಯ ಪುಣ್ಯಫಲಂ ಸ್ಕಂದ ಕಥಿತುಂ ನೈವ ಶಕ್ಯತೇ ॥** – ಪದ್ಮಪುರಾಣ

– ಶಿವಪುರಾಣ (೨/೫/೨೬/೫೪)

ಮಂಜರಿ ಹಾಗೂ ದಳಗಳಿಂದ ಕೂಡಿದ ತುಲಸಿಯಿಂದ ವಿಷ್ಣುವನ್ನು ಅರ್ಚಿಸಬೇಕು. ಅಂತಹವನಿಗೆ ಒದಗುವ ಪುಣ್ಯಫಲವನ್ನು ತಿಳಿಸಲು ಶಕ್ಯವೇ ಇಲ್ಲ.

★★★

# ಗಣೇಶನಿಗೆ ತುಲಸಿಯಿಂದ ಪೂಜೆ ನಿಷಿದ್ಧ

ನೇರವಾಗಿ ತುಲಸಿಯಿಂದ ಪೂಜೆಯು ವಿಹಿತವಾಗಿರುವುದು ಶ್ರೀಹರಿಗೆ ಮಾತ್ರ. ಶ್ರೀಹರಿಗೆ ಅರ್ಪಿಸದೆ ಬೇರಾವ ದೇವತೆಗಳಿಗೂ ಸಹ ತುಲಸಿಯನ್ನು ಮೊದಲಿಗೆ ಅರ್ಪಿಸುವಂತಿಲ್ಲ. ಇತರ ದೇವತೆಗಳಿಗೆ ಅರ್ಪಿಸಬೇಕಾದದ್ದು ಶ್ರೀಹರಿಗೆ ಸಮರ್ಪಿಸಿದ ನಿರ್ಮಾಲ್ಯತುಲಸಿಯನ್ನು ಮಾತ್ರವೇ. ಆದರೆ ಗಣೇಶನಿಗೆ ಮಾತ್ರ ನಿರ್ಮಾಲ್ಯ ತುಲಸಿಯ ಪೂಜೆಯು ಸಹ ವಿಹಿತವಾಗಿಲ್ಲ ಎಂಬುದು ವಿಶೇಷ (ಈ ವಿಷಯವು ಶ್ರೀವಾದಿರಾಜಸ್ವಾಮಿಗಳ ರುಕ್ಮಿಣೀಶವಿಜಯಕೃತಿಯಲ್ಲೂ ಬಂದಿದೆ.)

ತತ್ರಾಪಿ ತುಲಸೀ ಧನ್ಯಾಽತೀವ ಶ್ರೇಷ್ಠಾ ಮಹಾಮುನೇ ।
ತ್ಯಕ್ತ್ವಾ ಗಣೇಶಂ ಸರ್ವೇಷಾಂ ಪ್ರೀತಿದಾ ಸರ್ವಕಾಮದಾ ॥

– ಶಿವಪುರಾಣ (೨/೫೨೬೧/೫೪)

ತುಲಸಿಯು ಪೂಜೆಗೆ ಅತ್ಯಂತ ಶ್ರೇಷ್ಠ ಹಾಗೂ ಧನ್ಯ. ಗಣೇಶನ ಹೊರತು ಇತರ ಎಲ್ಲ ದೇವತೆಗಳಿಗೂ ಸಹ ತುಲಸಿಯು ಪ್ರಿಯವಾದುದು ಹಾಗೂ ಸರ್ವಕಾಮನೆಗಳನ್ನು ಈಡೇರಿಸುವಂತಹುದು.

ಅಕ್ಷತೈರ್ನಾರ್ಚಯೇದ್ವಿಷ್ಣುಂ ನ ತುಲಸ್ಯಾ ವಿನಾಯಕಮ್ ।
ನ ದೂರ್ವಯಾ ಯಜೇದ್ದುರ್ಗಾಂ ಧಸ್ತೂರೇಣ ನ ಭಾಸ್ಕರಮ್ ॥

– ರಾಘವಭಟ್ಟಧೃತಮ್ (ಸ್ಮೃತೌ)

ವಿಷ್ಣುವನ್ನು ಅಕ್ಷತೆಗಳಿಂದ ಪೂಜಿಸಕೂಡದು, ತುಲಸಿಯಿಂದ ವಿನಾಯಕನನ್ನು ಪೂಜಿಸಕೂಡದು, ಗರಿಕೆಯಿಂದ ದುರ್ಗಾಪೂಜೆಯು ವಿಹಿತವಲ್ಲ, ಧತ್ತುರದಿಂದ ಸೂರ್ಯನ ಪೂಜೆಯು ನಿಷಿದ್ಧ.

ಪುಷ್ಪಾಣಾಂ ಸಾರಭೂತಾ ತ್ವಂ ಭವಿಷ್ಯಸಿ ಮನೋರಮೇ ।
ಕಲಾಂಶೇನ ಮಹಾಭಾಗೇ ಸ್ವಯಂ ನಾರಾಯಣಪ್ರಿಯಾ ॥

ಪ್ರಿಯಾ ತ್ವಂ ಸರ್ವದೇವಾನಾಂ ಶ್ರೀಕೃಷ್ಣಸ್ಯ ವಿಶೇಷತಃ ।
ಪೂತಾ ವಿಮುಕ್ತಿದಾ ನೃಣಾಂ ಮಯಾ ಭೋಗ್ಯಾ ನ ನಿತ್ಯಶಃ ॥

– ಬ್ರಹ್ಮವೈವರ್ತಪುರಾಣ (೩/೪೬/೩೨-೩೩)

ಪುಷ್ಪಗಳಿಗಿಂತ ನೀನು ಹೆಚ್ಚು ಶ್ರೇಷ್ಠಳು ಎನ್ನಿಸುವಿ. ನೀನು ಸ್ವತಃ ನಾರಾಯಣನ ಪ್ರಿಯಳಾದ ಮಹಾಲಕ್ಷ್ಮಿಯ ಅಂಶಳೇ ಆಗಿರುವಿ. ಸಕಲ ದೇವತೆಗಳಿಗೂ ವಿಶೇಷವಾಗಿ

ಶ್ರೀಕೃಷ್ಣನಿಗೂ ನೀನು ಪ್ರಿಯಳು, ನೀನು ಪವಿತ್ರಳು, ಮನುಜರಿಗೆ ಮುಕ್ತಿನೀಡುವವಳು; ಆದರೆ ನನಗೆ ಮಾತ್ರ ಪೂಜೆಗೆ ಅರ್ಹಳೆನ್ನಿಸಲಾರೆ. (ಇದು ತುಲಸಿಯನ್ನು ಕುರಿತು ಗಣೇಶನ ವಚನ).

***

## ತುಲಸೀಪೂಜೆಯ ಫಲ

ಭಗವಂತನ ಪೂಜೆಗೆ ವಿಹಿತವಾಗಿರುವ ಪುಷ್ಪಗಳು ಅಸಂಖ್ಯ. ಆದರೆ ತುಲಸಿ ಇಲ್ಲದಿದ್ದಲ್ಲಿ ಎಂತಹ ಪುಷ್ಪವು ಸಹ ಶ್ರೀಹರಿಗೆ ಪ್ರಿಯವೆನ್ನಿಸದು. ಪುಷ್ಪಗಳ ವೈಭವ ಸಾರ್ಥಕವೆನ್ನಿಸುವುದು ತುಲಸಿಯ ಜೊತೆಯಿದ್ದಾಗಲೇ. ಪುಷ್ಪ ಪತ್ರಗಳಿರಲಿ, ಸುವರ್ಣ, ರತ್ನಗಳ ಆಭರಣಗಳು ಸಹ ತುಲಸೀ ಸಮೇತವಾಗಿಯೇ ಸಮರ್ಪಿತವಾಗಿಯೇ ಶ್ರೀಹರಿಗೆ ಪ್ರಿಯವೆನ್ನಿಸುವುವು.

**ತಾವದರ್ಘಂತಿ ಪುಷ್ಪಾಣಿ ತಥಾ ಮುಕ್ತಾಮಯಾನಿ ಚ।**
**ಯಾವನ್ನ ಪ್ರಾಪ್ಯತೇ ಪುಣ್ಯಾ ತುಲಸೀ ವಿಷ್ಣುವಲ್ಲಭಾ ॥** – ಪದ್ಮಪುರಾಣ

ಹೂವುಗಳಾಗಲಿ, ಮುತ್ತುಮೊದಲಾದವುಗಳಾಗಲಿ, ಮೆರೆಯುವುದು ಪುಣ್ಯಕರವಾದ ವಿಷ್ಣುಪ್ರಿಯಳಾದ ತುಲಸಿಯು ಲಭಿಸುವವರೆಗೆ ಮಾತ್ರ (ಇತರ ಪೂಜಾ ಸಾಧನಗಳ ಹಿರಿಮೆ ಏನಿದ್ದರೂ ತುಲಸಿಯ ಅನಂತರ ಎಂದರ್ಥ).

**ಮಣಿಕಾಂಚನಪುಷ್ಪಾಣಿ ತಥಾ ಮುಕ್ತಾಮಯಾನಿ ಚ।**
**ತುಲಸೀದಲಪತ್ರಸ್ಯ ಕಲಾಂ ನಾರ್ಹಂತಿ ಷೋಡಶೀಮ್ ॥** – ಪದ್ಮಪುರಾಣ

ಮಣಿಗಳ, ಸುವರ್ಣಗಳ, ಪುಷ್ಪಗಳ, ಅದರಂತೆ ಮುತ್ತು ಮೊದಲಾದವುಗಳಿಂದ ನಡೆಯುವ ಪೂಜೆಯು ಒಂದು ತುಲಸಿ ದಳದ ಎಲೆಯ ಪೂಜೆಯ ಹದಿನಾರನೆಯ ಒಂದಂಶಕ್ಕೂ ಸಹ ಸಾಟಿ ಎನ್ನಿಸದು.

***

## ದ್ವಾದಶಿಯಂದು ತುಲಸಿಯಿಂದ ಪೂಜೆಯ ವಿಶೇಷ

**ದ್ವಾದಶ್ಯಾಂ ತುಲಸೀಪತ್ರೈಃ ಯಃ ಪೂಜಾಂ ಕುರುತೇ ಹರೇ।**
**ಅಲಂಕೃತಂ ಚ ಸೌವರ್ಣಂ ವಿಮಾನಮಧಿರೋಹತಿ ॥**

– ಪದ್ಮಪುರಾಣ (೧೪/೧೫)

ದ್ವಾದಶಿಯಂದು ತುಲಸಿದಳಗಳಿಂದ ಯಾವ ಮಾನವನು ತುಲಸಿಯಿಂದ ಪೂಜಿಸುವನೋ ಅವನು ಅಲಂಕೃತವಾದ ಸುವರ್ಣದ ವಿಮಾನವನ್ನು ಏರಿ ತೆರಳುವನು.

***

# ತುಲಸಿಯ ನಾಮೋಚ್ಚಾರಣದ ಮಹಿಮೆ

ಸಾಮಾನ್ಯವಾಗಿ ಹೆಸರಿನ ಉಚ್ಚಾರಣೆ ಮಾತ್ರದಿಂದಲೇ ಕಾರ್ಯಸಿದ್ಧಿಯಾಗುವುದು ಅಷ್ಟಾಗಿ ಸಾಧ್ಯವೆನ್ನಿಸುವ ವಿಚಾರವಲ್ಲ. ಅನ್ನ ಎಂದ ತಕ್ಷಣ ಹೊಟ್ಟೆ ತುಂಬಲಾಗಲೀ, ನೀರು ಎಂದ ತಕ್ಷಣ ಬಾಯಾರಿಕೆ ಪರಿಹಾರವಾಗುವುದಾಗಲೀ ಸಾಧ್ಯವಿಲ್ಲ ಎಂಬುದು ಎಲ್ಲರಿಗೂ ತಿಳಿದದ್ದೇ. ಆದರೆ, ಕೆಲವು ವಸ್ತುಗಳು ಹಾಗಲ್ಲ. ಅವುಗಳ ಹೆಸರನ್ನು ಹೇಳುವುದೂ ಸಹ ಅತ್ಯಂತ ತಾರಕ. ಕಳ್ಳ ಅಟ್ಟಿಸಿಕೊಂಡು ಬರುವಾಗ ಪೋಲೀಸ್ ಎಂಬ ಶಬ್ದವನ್ನು ಉಚ್ಚರಿಸುತ್ತಲೇ ಅವರಲ್ಲಿ ಭಯ ಹುಟ್ಟುವುದು. ಅದರೊಂದಿಗೆ ಅವರಿಂದ ಒದಗುವ ಅಪಾಯವೂ ಸಹ ತಪ್ಪುವುದು. ಅದರಂತೆ ಭಗವಂತನಾದ ಶ್ರೀಹರಿಯ ನಾಮೋಚ್ಚಾರಣೆಯ ಮಹಿಮೆ ಅಪಾರವಾದುದು. ಭಗವಂತನ ಒಂದೊಂದು ನಾಮದ ಉಚ್ಚಾರಣೆಯ ಮಹಿಮೆಯೂ ಸಹ ಕೊನೆಯಿಲ್ಲದಷ್ಟು ಪಾಪಗಳನ್ನು ಕೂಡಲೇ ಪರಿಹರಿಸುವಷ್ಟು ಸಮರ್ಥವಾದುದು ಎಂಬ ವಿವರ ಶಾಸ್ತ್ರಗಳಲ್ಲಿ ವಿಶೇಷವಾಗಿ ಪ್ರತಿಪಾದಿತವಾಗಿದೆ. ಆ ರೀತಿಯ ಮಹಿಮೆಯನ್ನು ಹೊಂದಿರುವಂತಹ ವೃಕ್ಷ ಎಂಬುದು ತುಲಸಿಯ ಹಿರಿಮೆ. ತುಲಸಿ ಎಂಬ ಶಬ್ದದ ಉಚ್ಚಾರಣೆಯೇ ಶ್ರೀಹರಿಗೆ ಪ್ರೀತಿ ಹುಟ್ಟಿಸುವಂತಹುದು. ಪಾಪಗಳನ್ನು ಪರಿಹರಿಸುವಂತಹುದು. ಪುಣ್ಯದ ರಾಶಿಯನ್ನೇ ನೀಡುವಂತಹುದು. ಬೇರೆ ಯಾವುದೇ ವೃಕ್ಷಕ್ಕೂ ಸಹ ಈ ಬಗೆಯ ಹಿರಿಮೆ ಶಾಸ್ತ್ರಗಳಲ್ಲಿ ಉಕ್ತವಾಗಿಲ್ಲ.

**ನಾಮೋಚ್ಚಾರೇ ಕೃತೇ ತಸ್ಯಾಃ ಪ್ರೀಣಾತ್ಯಸುರದರ್ಪಹಾ ।**
**ಪಾಪಾನಿ ವಿಲಯಂ ಯಾಂತಿ ಪುಣ್ಯಂ ಭವತಿ ಚಾಕ್ಷಯಮ್ ॥**

**ಸಾ ಕಥಂ ತುಲಸೀ ಲೋಕೈಃ ಪೂಜ್ಯತೇ ವಂದ್ಯತೇ ನ ಹಿ ।**
**ದರ್ಶನಾದೇವ ಯಸ್ಯಾಸ್ತು ದಾನಂ ಕೋಟಿಗವಾಂ ಭವೇತ್ ॥**

– ಪದ್ಮಪುರಾಣ (ಸೃಷ್ಟಿಖಂಡ ೫/೫೯/೫, ೬)

ಶ್ರೀತುಲಸಿಯ ನಾಮವನ್ನು ಉಚ್ಚಾರಮಾಡಿದರೂ ಸಹ ಅಸುರರ ಸೊಕ್ಕನ್ನು ಬಗ್ಗುಬಡಿಯುವ ಶ್ರೀಹರಿಯು ಪ್ರೀತನಾಗುವನು. ಪಾಪಗಳೆಲ್ಲ ಸಂಪೂರ್ಣವಾಗಿ ನಾಶವಾಗುವವು. ಅಕ್ಷಯವಾದ ಪುಣ್ಯಲಭಿಸುವುದು.

★★★

# ತುಲಸೀದೀಪದ ದಾನ

ದೀಪದಾನವು ಸದಾ ವಿಹಿತ. ಅದು ಒಂದು ರೀತಿಯಲ್ಲಿ ಪುತ್ರಸಂತತಿಯ ಕಾರಣವಾಗುವ ಅಪೂರ್ವ ಸಾಧನವಾದರೆ, ಮತ್ತೊಂದು ರೀತಿಯಲ್ಲಿ ಜ್ಞಾನಾಭಿವೃದ್ಧಿಗೆ

ಕಾರಣವಾಗುವ ಸಾಧನವೂ ಆಗಿದೆ : "ದೀಪಸಂಯೋಜನಾತ್ ಜ್ಞಾನಂ ಪುತ್ರಲಾಭೋ ಭವೇದ್ಧ್ರುವಮ್". ಸರ್ವಕಾಲಕ್ಕೂ ವಿಹಿತವಾದ ಈ ದೀಪದಾನವು ಕಾರ್ತಿಕದಲ್ಲಿ ಇನ್ನೂ ವಿಶೇಷವಾಗಿ ವಿಹಿತ. ಅದಕ್ಕೆ ಈ ಮುನ್ನವೇ ತಿಳಿಸಿರುವಂತೆ ಅದು ದೇವತೆಗಳ ಅರುಣೋದಯಕಾಲವಾಗಿರುವುದು ಎಂಬುದು ಮುಖ್ಯ ಕಾರಣ. ಸಕಲ ದಾನಕ್ಕೂ ಸಹ ತುಲಸಿಯು ಅನಿವಾರ್ಯ. ಆದ್ದರಿಂದ ದೀಪದಾನವನ್ನೂ ಸಹ ತುಲಸಿಯ ಸಮೇತವಾಗಿಯೇ ಮಾಡುವುದು ಪುಣ್ಯಕರ. ದೀಪದಾನ ಎಂಬುದಕ್ಕೆ ದೇವರ ಮುಂದೆ ದೀಪವನ್ನು ಹಚ್ಚಿಡುವುದು ಎಂಬುದು ಒಂದು ಅರ್ಥವಾದರೆ ಇತರರಿಗೆ ದೀಪಗಳನ್ನು ದಾನವಾಗಿ ನೀಡುವ ಮೂಲಕ ಅವರೂ ಸಹ ಶ್ರೀಹರಿಯ ಪೂಜೆಗೆ ಭಾಗಿಗಳಾಗುವಂತೆ ಮಾಡುವುದು ಮತ್ತೊಂದು ಕಾರಣ. ಹೀಗೆ ಈ ಎರಡು ಕಾರಣದಿಂದಲೂ ದೀಪದಾನವು ಮಹತ್ತ್ವ ಪಡೆದಿರುವುದರಿಂದ ಈ ಎರಡು ಅರ್ಥದಿಂದಲೂ ಸಹ ತುಲಸಿಯು ಪ್ರಾಧಾನ್ಯ ಪಡೆದುಕೊಳ್ಳುವುದು ಎಂದು ತಿಳಿದುಕೊಳ್ಳಬೇಕು.

**ಯಃ ಕಶ್ಚಿತ್ ತುಲಸೀಮೂಲೇ ಕಾರ್ತಿಕೇ ಕೇಶವಪ್ರಿಯಃ।**
**ದೀಪಂ ದದಾತಿ ವಿಪ್ರೇಂದ್ರ ಸ ಲಭೇದ್ವೈಷ್ಣವಂ ಪದಮ್ ॥**

– ಪದ್ಮಪುರಾಣ, ಉತ್ತರಖಂಡ – ೬

ಕಾರ್ತಿಕಮಾಸದಲ್ಲಿ ವಿಷ್ಣುಭಕ್ತನಾದವನು ತುಲಸಿಯ ಸಮೀಪದಲ್ಲಿ ದೀಪವನ್ನು ದಾನ ಮಾಡಿದರೆ, ವಿಷ್ಣುಲೋಕವನ್ನು ಹೊಂದುವನು.

★★★

## ತುಲಸೀದಾನದ ಮಹತ್ತ್ವ

ದೀಪದಾನದಂತೆ ಮತ್ತೊಂದು ಮಹತ್ತ್ವದ ದಾನ ತುಲಸಿಯ ದಾನ. ಇದು ಭಗವತ್ಪೂಜೆಗೆ ಅತ್ಯಂತ ಮುಖ್ಯವಾಗಿರುವ ಸಾಧನ ಎಂಬುದೇ ಇದಕ್ಕೆ ಮುಖ್ಯಕಾರಣ. ದೀಪವು ಪೂಜೆಯಲ್ಲಿ ಸದಾ ಹೇಗೆ ಅಗತ್ಯವೋ ಪೂಜೆಗೆ ಸಾಧನವಾಗಿ ತುಲಸಿ ಹಾಗೆ ಅಗತ್ಯ. ಬೆಳಕು ನೀಡುವ ಮಟ್ಟಿಗೆ ದೀಪದ ಮಹಿಮೆ ಸೀಮಿತವಾದರೆ, ತುಲಸಿಯ ಮಹಿಮೆ ಸರ್ವತೋಮುಖವಾದದ್ದು. ವಸ್ತುವು ಹೆಚ್ಚು ಉಪಯುಕ್ತವಾದಾಗ ಅದರ ದಾನದ ಮಹತ್ತ್ವವು ಅತಿಶಯವೆನ್ನಿಸುವುದು. ತುಲಸಿಯು ಶ್ರೀಹರಿಗೆ ಅತ್ಯಂತ ಪ್ರಿಯವೆಂಬುವ ಕಾರಣದಿಂದ ಅದರ ದಾನ ಹೆಚ್ಚು ಮಹತ್ತ್ವಪೂರ್ಣ. ಜೊತೆಗೆ ದಾನಮಾಡಿದ ತುಲಸಿಯು ವೃದ್ಧಿಸುವುದರೊಂದಿಗೆ ಫಲದ ಪ್ರವಾಹವನ್ನೇ ನೀಡುತ್ತಾ ಅಕ್ಷಯಫಲಕ್ಕೆ ಕಾರಣವಾಗುವುದು. ಈ ಹಿನ್ನೆಲೆಯಲ್ಲಿ ತುಲಸಿಯ ದಾನವು ಅದರಲ್ಲೂ ಕಾರ್ತೀಕಮಾಸದಲ್ಲಿ ಮತ್ತಷ್ಟು

ಮಹತ್ತ್ವವನ್ನು ಪಡೆದುಕೊಂಡಿದೆ. ಇತರ ದಾನಗಳು ಬೇರೆ ಕಾರಣಗಳಿಗೆ ವಿನಿಯೋಗವಾಗುವ ಅಪಾಯವನ್ನು ಹೊಂದಿವೆ ಎಂದರೆ ಅವುಗಳ ದುರ್ಲಾಭವನ್ನು ಪಡೆಯಲೂ ಸಹ ಸಾಧ್ಯವಿದೆ. ತುಲಸಿಯ ದಾನವು ಹಾಗಲ್ಲ. ಸ್ವತಃ ಸರ್ವಶ್ರೇಷ್ಠವಾಗಿರುವಂತಹ ತುಲಸಿಯು ದಾನ ಪಡೆದವರ ಬಳಿಯೂ ಸಹ ಮುಖ್ಯವಾಗಿ ಪೂಜಾಕಾರ್ಯಕ್ಕೆ ವಿನಿಯೋಗವಾಗುವುದರಿಂದ ಅದು ಅವಿಹಿತ ರೀತಿಯಲ್ಲಿ ವಿನಿಯೋಗವಾಗುವ ಅಪಾಯ ಅತ್ಯಂತ ಕಡಿಮೆ. ಸಹಜವಾಗಿಯೇ ದಾನ ಪಡೆದವರು ಅದನ್ನು ನೇರವಾಗಿ ಪೂಜೆಗೆಂದೋ ಅಥವಾ ಅದನ್ನು ಬೆಳೆಸಿ ಪೋಷಿಸುವ ಮೂಲಕ ಇನ್ನೂ ಹೆಚ್ಚಿನ ರೀತಿಯಲ್ಲಿ ಪೂಜಿಸುವ ಕಾರ್ಯಕ್ಕೋ ವಿನಿಯೋಗಿಸುವುದು ಸಹಜ. ಇತರ ಸಕಲ ದಾನಕಾರ್ಯಗಳಲ್ಲೂ ಇದರ ಉಪಯೋಗವು ಅತ್ಯಂತ ಅನಿವಾರ್ಯ. ಈ ಕಾರಣದಿಂದಲೇ ತುಲಸಿಯ ದಾನವು ಇತರ ದಾನಗಳಿಗಿಂತಲೂ ಹೆಚ್ಚಿನ ಮಹತ್ತ್ವವನ್ನು ಪಡೆದುಕೊಂಡಿದೆ.

**ಕಾರ್ತಿಕೇ ತುಲಸೀಪತ್ರಂ ವಿಷ್ಣವೇ ಯೋ ದದಾತಿ ಚ ।**
**ಗವಾಮಯುತದಾನಸ್ಯ ಫಲಮಾಪ್ನೋತಿ ನಿಶ್ಚಿತಮ್ ॥**

– ಬ್ರಹ್ಮವೈವರ್ತಪುರಾಣ (೨/೨೨/೩೬)

ಕಾರ್ತಿಕಮಾಸದಲ್ಲಿ ವಿಷ್ಣುವಿಗೆ ತುಲಸಿಯ ಪತ್ರವನ್ನು ಸಮರ್ಪಿಸುವವನಿಗೆ ಹತ್ತು ಸಾವಿರ ಗೋವುಗಳನ್ನು ದಾನಮಾಡಿದ ಫಲವು ನಿಶ್ಚಿತವಾಗಿ ಲಭಿಸುವುದು.

**ಮಣಿಕಾಂಚನಪುಷ್ಪಾಣಿ ತಥಾ ಮುಕ್ತಾಫಲಾನಿ ತು ।**
**ತುಲಸೀಪತ್ರದಾನಸ್ಯ ಕಲಾಂ ನಾರ್ಹಂತಿ ಷೋಡಶೀಮ್ ॥**

– ಪದ್ಮಪುರಾಣ, ಉತ್ತರಖಂಡ (೬/೨೪೪/೮)

ಮಣಿಗಳ, ಸುವರ್ಣಗಳ ಪುಷ್ಪಗಳಾಗಲಿ, ಮುಕ್ತಾಫಲಗಳಾಗಲಿ, ಒಂದು ತುಲಸಿ ಎಲೆಯ ದಾನದ ಹದಿನಾರನೆಯ ಒಂದಂಶಕ್ಕೂ ಸಾಟಿ ಎನ್ನಿಸವು.

**ಗವಾಮಯುತದಾನೇನ ಯತ್ಫಲಂ ಲಭತೇ ನರಃ ।**
**ತುಲಸೀಪತ್ರದಾನೇನ ತತ್ಫಲಂ ಕಾರ್ತಿಕೇ ಸತಿ ॥**

–ಬ್ರಹ್ಮವೈವರ್ತಪುರಾಣ (೨/೨೧/೪೨)

ಹತ್ತುಸಾವಿರ ಗೋವುಗಳ ದಾನದಿಂದ ಲಭಿಸುವ ಫಲವನ್ನು ಮಾನವನು ಕಾರ್ತಿಕ ಮಾಸದಲ್ಲಿ ತುಲಸಿಪತ್ರದ ದಾನದಿಂದ ಪಡೆದುಕೊಳ್ಳುವನು.

**ಮಣಿಕಾಂಚನಪುಷ್ಪಾಣಿ ಮುಕ್ತಾವೈಢೂರ್ಯಕಾನಿ ಚ ।**
**ತುಲಸೀಪತ್ರದಾನಸ್ಯ ಕಲಾಂ ನಾರ್ಹಂತಿ ಷೋಡಶೀಮ್ ॥** – (೧೫/೩೧)

ಮಣಿಗಳಾಗಲಿ, ಸುವರ್ಣಗಳ ಪುಷ್ಪಗಳಾಗಲಿ, ಮುತ್ತು, ವೈಢರ್ಯಗಳಾಗಲಿ, ಒಂದು ತುಲಸಿ ಎಲೆಯ ದಾನದ ಹದಿನಾರನೆಯ ಒಂದಂಶಕ್ಕೂ ಸಾಟಿ ಎನ್ನಿಸವು.

**ಸುಧಾಘಟಸಹಸ್ರೇಣ ಯಾ ತುಷ್ಟಿರ್ನ ಭವೇತ್ ಸಮಾ ।**
**ಸಾ ಚ ತುಷ್ಟಿರ್ಭವೇನ್ನೃಣಾಂ ತುಲಸೀಪತ್ರದಾನತಃ ॥**

– ಬ್ರಹ್ಮವೈವರ್ತಪುರಾಣ (೨/೨೧/೪೧)

ಸಾವಿರಾರು ಅಮೃತಕಲಶಗಳಿಂದ ಶ್ರೀಹರಿಗೆ ಲಭಿಸುವ ತುಷ್ಟಿಯು ಮನುಷ್ಯರಿಗೆ ಒಂದು ತುಲಸೀಪತ್ರದ ದಾನದಿಂದ ಲಭಿಸುವುದು.

**ಮಮಾರ್ಚನಾರ್ಥಂ ಭಿಕ್ಷೂಣಾಂ ಯಚ್ಛಂತಿ ತುಲಸೀದಲಮ್ ।**
**ಅನ್ಯೇಷಾಮಪಿ ಭಕ್ತಾನಾಂ ಯಾಂತಿ ತೇ ಪದಮವ್ಯಯಮ್ ॥**

– ಸ್ಕಂದಪುರಾಣ

ನನ್ನ ಪೂಜೆಗೋಸ್ಕರವಾಗಿ ಯತಿಗಳಿಗೆ ಹಾಗೂ ಇತರ ಭಕ್ತರಿಗೆ ತುಲಸಿಯ ದಳಗಳನ್ನು ದಾನನೀಡುವವರು ಅವ್ಯಯವಾದ ವಿಷ್ಣುಲೋಕವನ್ನು ಹೊಂದುವರು.

**ಯಃ ಕುರ್ಯಾದ್ವಿಷ್ಣುಭಕ್ತಾಯ ತುಲಸೀದಾನಮುತ್ತಮಮ್ ।**
**ಗತ್ವಾ ತು ಸ್ವರ್ಗಲೋಕಾನ್ ಸಃ ಸಾರ್ವಭೌಮೋ ಭವೇತ್ ಭುವಿ ।**
**ಸ ದಿವ್ಯಜ್ಞಾನವಾನ್ ಯೋಗೀ ವಿಷ್ಣುಸಾಯುಜ್ಯಮಾಪ್ನುಯಾತ್ ॥**

– ಅಗ್ನಿಪುರಾಣ

ಯಾವನು ವಿಷ್ಣುಭಕ್ತನಿಗೆ ಉತ್ತಮವಾದ ತುಲಸೀದಾನವನ್ನು ಮಾಡುವನೋ ಅವನು ಸ್ವರ್ಗಲೋಕಕ್ಕೆ ತೆರಳಿ ಆ ಬಳಿಕ ಭೂಮಿಯಲ್ಲಿ ಸಾರ್ವಭೌಮನಾಗುವನು; ಅವನು ದಿವ್ಯಜ್ಞಾನವಂತನಾಗಿ ಯೋಗಿಯಾಗಿ ವಿಷ್ಣುಸಾಯುಜ್ಯವನ್ನು ಪಡೆಯುವನು.

***

## ತುಲಸಿಯ ಮೇಲೆ ಬೀಸಿಬರುವ ಗಾಳಿಯ ಮಹತ್ತ್ವ

ತುಲಸಿಯ ದಳ ಮೊದಲಾದವುಗಳು ಪವಿತ್ರ ಎಂಬುದು ಈಗಾಗಲೇ ನಿರೂಪಿತವಾಗಿದೆ. ತುಲಸಿಯ ಸಂಪರ್ಕಪಡೆದ ಪ್ರತಿಯೊಂದು ವಸ್ತುವೂ ಸಹ ಪಾವನವೆನ್ನಿಸುವುದು ಮತ್ತೊಂದು ಹಿರಿಮೆ. ತುಲಸಿಯ ಮೇಲೆ ಬೀಸಿಬಂದ ಗಾಳಿಯು ಸಹ ಪಾಪಪರಿಹಾರಕ ಸಾಮರ್ಥ್ಯವನ್ನು ಹೊಂದಿದ ಹಿರಿಮೆಯಿಂದ ಕೂಡಿದೆ. ಬಿಸಿಪದಾರ್ಥದ ಮೇಲೆ ಬೀಸಿಬರುವ ಗಾಳಿ ಬಿಸಿಯಾಗಿರುವುದು; ತಣ್ಣನೆಯ ಪದಾರ್ಥದ ಮೇಲೆ ಬೀಸಿಬರುವ ಗಾಳಿ ತಣ್ಣಗಿರುವುದು; ಪವಿತ್ರವಾದ ತುಲಸಿಯ ಮೇಲಿನಿಂದ ಬೀಸಿಬರುವ ಗಾಳಿ ಪವಿತ್ರವಾಗಿರುವುದು;

ಅದರೊಂದಿಗೆ ತನ್ನ ಸಂಪರ್ಕದೊಂದಿಗೆ ಬಂದ ವಸ್ತುವಿಗೂ ಪಾವಿತ್ರ್ಯವನ್ನು ನೀಡುವುದು. ತುಲಸಿಮಹಾತ್ಮ್ಯದಲ್ಲಿ ಬರುವ ಪೌಂಡ್ರಕ ಎಂಬ ಪರಮಪಾತಕಿಯಾದ ಬೇಡನೊಬ್ಬನು ತುಲಸಿಯ ಮೇಲಿನಿಂದ ಬೀಸಿಬಂದ ಗಾಳಿಯ ಸಂಪರ್ಕದಿಂದಾಗಿ ಪರಿಶುದ್ಧನಾಗಿ ವೈಕುಂಠವನ್ನು ಪಡೆದುಕೊಂಡ ಕಥೆ ಇದಕ್ಕೆ ಉತ್ತಮ ನಿದರ್ಶನ. ಅಪವಿತ್ರವಾದ ವಸ್ತುವಿನ ಮೇಲೆ ಬೀಸಿಬರುವ ಗಾಳಿ, ದುರ್ವಾಸನೆ ಮೊದಲಾದ ಕಾರಣಗಳಿಂದ ಹೇಯವೆನ್ನಿಸಿದರೆ, ಪವಿತ್ರವಾದ ವಸ್ತುವಿನ ಮೇಲೆ ಬೀಸಿಬರುವ ಗಾಳಿಯು ಉಪಾದೇಯವೆನ್ನಿಸುವುದು ಸಹಜ. ಈ ದೃಷ್ಟಿಯಲ್ಲೂ ತುಲಸಿಗೆ ಅಗ್ರಸ್ಥಾನ. ಮಾವು, ಬೇವು ಮೊದಲಾದ ಸಕಲ ವೃಕ್ಷಗಳ ಮೇಲಿನಿಂದ ಬೀಸಿ ಬರುವ ಗಾಳಿಗೂ ಒಂದಲ್ಲ ಒಂದು ಬಗೆಯ ಮಹತ್ತ್ವವಿರುವುದು ನಿಜವಾದರೂ ತುಲಸಿಯ ಮೇಲಿನಿಂದ ಬೀಸಿಬರುವ ಗಾಳಿಯ ಹಿರಿಮೆ ತೀರಾ ವಿಭಿನ್ನಬಗೆಯದಾಗಿದ್ದು ಸರ್ವೋತ್ಕೃಷ್ಟವಾಗಿದೆ ಎಂದು ತಿಳಿಯಬೇಕು. ಕುರುಕ್ಷೇತ್ರ ಮೊದಲಾದ ಕ್ಷೇತ್ರಗಳ ಮೇಲಿಂದ ಬೀಸಿ ಬರುವ ಗಾಳಿಯೂ ಸಹ ಸಕಲ ಪಾಪಗಳನ್ನು ಪರಿಹರಿಸುವಷ್ಟು ಪಾವನ ಎಂಬುದು ಪುರಾಣಗಳಲ್ಲಿ ಉಕ್ತವಾಗಿದೆ. ಅಂತಹ ಹಿರಿಮೆಯನ್ನು ಸಸ್ಯಗಳಲ್ಲಿ ಪಡೆದಿರುವ ಭಾಗ್ಯ ತುಲಸಿಯದ್ದು.

**ತುಲಸೀಮೂಲಮಾಶ್ರಿತ್ಯ ವಾತೋ ಯತ್ರ ಪ್ರವರ್ತತೇ ।**
**ತದ್ದೇಶವಾಸಿನಾಂ ಮುಕ್ತಿಃ ಕಿಮು ತದ್ಗೃಹವಾಸಿನಾಮ್ ॥**

– ಸ್ಕಂದಪುರಾಣ (೮೨/೨೩)

ತುಲಸಿಯ ಬೇರಿನ ಮೇಲಿಂದ ಬೀಸಿಬರುವ ಗಾಳಿ ತುಂಬಿರುವ ಪ್ರದೇಶದಲ್ಲಿ ವಾಸಿಸುವ ಜನರಿಗೂ ಸಹ ಮುಕ್ತಿಯು ಲಭಿಸುವುದು. ಇನ್ನು ಮನೆಯಲ್ಲಿಯೇ ತುಲಸಿಯು ಇದ್ದರೆ ಹೇಳುವುದೇನಿದೆ?

**ತುಲಸೀವಾಯುಸಂಸ್ಪೃಷ್ಟಃ ಪಾಪಕರ್ಮಾಽಪಿ ಮಾನವಃ ।**
**ವಿಷ್ಣುಸಾಯುಜ್ಯಮಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ॥**

– ಸ್ಕಂದಪುರಾಣ (೮೨/೨೪)

ತುಲಸಿಯ ಮೇಲಿನಿಂದ ಬೀಸಿಬರುವ ಗಾಳಿಯಿಂದ ಸ್ಪರ್ಶಿಸಲ್ಪಟ್ಟ ಪಾಪಕಾರ್ಯಮಾಡಿದ ಮಾನವನು ಸಹ ವಿಷ್ಣುಸಾಯುಜ್ಯವನ್ನು ಹೊಂದುವನು. ಈ ಬಗ್ಗೆ ವಿಚಾರ ಬೇಕಿಲ್ಲ.

**ತುಲಸೀಕಾನನೋದ್ಭೂತೋ ವಾತಿ ವಾಯುರ್ಯತೋ ಯಮ ।**
**ತತ್ರತ್ಯಾಃ ಸರ್ವಮನುಜಾ ನಿಷ್ಪಾಪಾ ನಾತ್ರ ಸಂಶಯಃ ॥**

– ಸ್ಕಂದಪುರಾಣ (೮೨/೭೭)

ತುಲಸಿಯ ವನದ ಮೇಲಿನಿಂದ ಬೀಸಿಬರುವ ಗಾಳಿಯು ಎತ್ತ ಸಾಗುವುದೋ ಅಲ್ಲಿಯ ಸಕಲ ಮನುಷ್ಯರೂ ಪಾಪದಿಂದ ಪರಿಹಾರವನ್ನು ಕಾಣುವರು, ಸಂದೇಹಬೇಡ.

**ತುಲಸೀವಾಯುಸಂಸ್ಪೃಷ್ಟಂ ಕ್ಷೀಣಪಾಪಂ ನರೋತ್ತಮಮ್ ।**
**ಪರಿಹಾರ್ಯಮವೈಹಿ ತ್ವಂ ತ್ವದ್ದೂತಾನಾಂ ಪ್ರಜಾಂತಕ ॥**

– ಸ್ಕಂದಪುರಾಣ (೮೨/೭೮)

''ತುಲಸಿಯ ವನದ ಮೇಲಿನಿಂದ ಬೀಸಿಬರುವ ಗಾಳಿಯಿಂದ ಸ್ಪರ್ಶಿಸಲ್ಪಡುವ ಮನುಷ್ಯನು ಪಾಪಕಳೆದುಕೊಂಡು ಉತ್ತಮನೆನಿಸುವನು. ಯಮನೇ! ಅಂತಹವರ ಬಳಿಗೆ ನಿನ್ನ ದೂತರು ತೆರಳಕೂಡದು ಎಂದು ತಿಳಿ''.

**ಜನ್ಮಪ್ರಭೃತಿ ಯಃ ಪಾಪಂ ಕರೋತಿ ಸತತಂ ಪುಮಾನ್ ।**
**ತುಲಸೀವಾಯುಸಂಸ್ಪೃಷ್ಟಃ ಸ ಯಾತಿ ಮಮ ಸನ್ನಿಧಿಮ್ ॥**

– ಸ್ಕಂದಪುರಾಣ (೮೨/೮೧)

ಹುಟ್ಟಿದಾಗಿನಿಂದ ಸತತವಾಗಿ ಮಾಡುವ ಪಾಪಗಳನ್ನೆಲ್ಲ ಮನುಷ್ಯನು ತುಲಸಿಯ ಗಾಳಿಯ ಸಂಪರ್ಕದಿಂದ ಕಳೆದುಕೊಂಡವನಾಗಿ, ನನ್ನ ಸನ್ನಿಧಿಗೆ ಬರುವನು.

**[೧೫]ತುಲಸೀಗಂಧಮಾದಾಯ ಯತ್ರ ಗಚ್ಛತಿ ಮಾರುತಃ ।**
**ದಿಶೋ ದಶ ಪುನಾತ್ಯಾಶು ಭೂತಗ್ರಾಮಾಂಶ್ಚತುರ್ವಿಧಾನ್ ॥**

– ಪದ್ಮಪುರಾಣ, ಉತ್ತರಖಂಡ – ೬

ತುಲಸಿಯ ಪರಿಮಳವನ್ನು ಹೊತ್ತು ಸಾಗುವ ಗಾಳಿಯು ತಾನು ಹೋಗುವ ಹತ್ತು ದಿಕ್ಕುಗಳನ್ನು ನಾಲ್ಕು ಬಗೆಯ ಭೂತಗಳ ಗುಂಪನ್ನು ಪಾವನವನ್ನಾಗಿಸುವುದು.

**ತಸ್ಮಾತ್ ಶ್ರೀತುಲಸೀವಾಯುಸ್ಪೃಷ್ಟದೇಹೋ ನರೋತ್ತಮಃ ।**
**ಮುಕ್ತಿಮೇವ ಪ್ರಪದ್ಯಂತೇ ಮಹಾಪಾತಕಿನೋಽಪಿ ಚ ॥**

– ಸ್ಕಂದಪುರಾಣ, ಪ್ರಭಾಸಖಂಡೇ, ತುಲಸೀಮಾಹಾತ್ಮ್ಯೇ (ಅ.೮೧/೮೬)

ಆದ್ದರಿಂದ ತುಲಸೀಗಾಳಿಯಿಂದ ಸ್ಪರ್ಶಿಸಲ್ಪಟ್ಟ ದೇಹದ ಉತ್ತಮ ಮಾನವನು ಮುಕ್ತಿಯನ್ನು ಪಡೆಯುವನು; ಮಹಾಪಾತಕಿಗಳೂ ಸಹ ಪರಿಶುದ್ಧರಾಗಿ ಮುಕ್ತಿಹೊಂದುವರು.

★★★

---

೧೫ ತುಲಸೀಗಂಧಮಾಘ್ರಾಯ ಯತ್ರ ಗಚ್ಛತಿ ಮಾರುತಃ ।
ದಿಶೋ ದಶ ಚ ತಾಃ ಪೂತಾ ಭೂತಗ್ರಾಮಶ್ಚತುರ್ವಿಧಃ ॥ – ಪದ್ಮಪುರಾಣ (೬/೨೫/೩.೫)

# ತುಲಸಿಯ ಮೃತ್ತಿಕೆಯೂ ಪವಿತ್ರ

ತುಲಸಿಯು ಇರಲಿ ಅದು ಬೆಳೆಯುವ ಮಣ್ಣು ಸಹ ಅತ್ಯಂತ ಪವಿತ್ರ. ಮಣ್ಣಿಗೆ ತುಲಸಿಯ ಸಂಪರ್ಕ ಲಭಿಸುವುದರಿಂದ ಅದರಲ್ಲಿ ವಿಶೇಷವಾದ ಪಾವಿತ್ರ್ಯ ಮೂಡುವುದು. ಇತರ ಸಸ್ಯಗಳ, ವೃಕ್ಷಗಳ ಬೇರೂ ಸಹ ಭೂಮಿಯೊಳಗೆ ಪ್ರವೇಶಿಸುವುವಾದರೂ ಅವುಗಳಿಗೆ ತುಲಸಿಯಂತೆ ಮಣ್ಣಿಗೂ ಸಹ ಪಾವಿತ್ರ್ಯವನ್ನು ನೀಡುವಂತಹ ವಿಶೇಷ ಸಾಮರ್ಥ್ಯ ಇರುವುದಿಲ್ಲ. ಮಣ್ಣಿನಲ್ಲಿ ಗೋಪೀಚಂದನದಂತೆ ಪಾವಿತ್ರ್ಯ ಸಂಪನ್ನವಾದ ಮಣ್ಣು ಎಂಬುದು ತುಲಸಿಮೃತ್ತಿಕೆಯ ಹಿರಿಮೆ. ಗೋಪೀಚಂದನವು ಲಭಿಸದಿದ್ದಾಗ ತುಲಸಿಮೃತ್ತಿಕೆಯಿಂದಲೂ ಸಹ ಊರ್ಧ್ವಪುಂಡ್ರವನ್ನು ಧರಿಸುವ ವಿಧಿ ಶಾಸ್ತ್ರದಲ್ಲಿ ವಿಹಿತವಾಗಿದೆ. ಪ್ರಾತಃಕಾಲದಲ್ಲಿ ಏಳುತ್ತಲೇ ಶ್ರೀಹರಿಗುರುಗಳನ್ನು ಸ್ಮರಿಸಿ ಬಳಿಕ ತುಲಸಿಗೆ ನೀರೆರೆದು ಅದರ ಮೃತ್ತಿಕೆಯನ್ನು ಹಣೆಯಲ್ಲಿ ಧರಿಸುವುದು ಸತ್ಸಂಪ್ರದಾಯ. ಸ್ನಾನದ ಬಳಿಕ ಗೋಪೀಚಂದನದ ಧಾರಣೆಯಿದ್ದಂತೆ ಸ್ನಾನದ ಮುನ್ನ ಈ ತುಲಸೀಮೃತ್ತಿಕೆಯ ಧಾರಣೆ ಎಂದು ತಿಳಿಯಬೇಕು. ತುಲಸಿಮೃತ್ತಿಕೆಯನ್ನು ಲೇಪಿಸಿಕೊಂಡು ಸ್ನಾನಮಾಡುವುದು ಇನ್ನೊಂದು ಬಗೆಯ ಪುಣ್ಯಕಾರ್ಯ. ದೇಹಕ್ಕೆ ಪೂರ್ಣಶುದ್ಧಿ ಲಭಿಸುವುದು ತುಲಸಿಮೃತ್ತಿಕೆಯಿಂದ ಮಿಂದಾಗಲೇ. ತುಲಸಿಯಂತೆ ಇತರ ಯಾವ ಸಸ್ಯಗಳ ಮೃತ್ತಿಕೆಯು ಸಹ ಹೀಗೆ ಸ್ನಾನಕಾಲದಲ್ಲಿ ವಿಹಿತವಾಗಿಲ್ಲ ಎಂಬುದು ಗಮನಿಸಬೇಕಾದ ಅಂಶ. ತುಲಸಿಯ ಮೃತ್ತಿಕೆಯ ಲೇಪನಾದಿಗಳಂತೆ ಅದನ್ನು ಗೋಪೀಚಂದನ ಮೊದಲಾದವುಗಳಂತೆ ಮನೆಯೊಳಗೆ ಇರಿಸಿಕೊಳ್ಳುವುದು ಸಹ ಭೂತಪ್ರೇತಗಳ ಉಚ್ಚಾಟನೆಗೆ, ಆಸುರೀಶಕ್ತಿಗಳ ನಿರ್ಮೂಲನೆಗೆ, ಸಕಲ ದೇವತೆಗಳ ಸನ್ನಿಧಾನಕ್ಕೆ ಕಾರಣವಾಗುವುದು ಎಂಬುದು ಮತ್ತೊಂದು ಮಹತ್ತ್ವಪೂರ್ಣವಾದ ವಿವರ. ಶ್ರೀವಾದಿರಾಜರ ಹಾಗೂ ಶ್ರೀರಾಘವೇಂದ್ರರ ಮೃತ್ತಿಕೆಯ ಮಹಿಮೆಯೇ ಅಪಾರವೆನ್ನಿಸಿರುವಾಗ ಸಾಕ್ಷಾತ್ ಲಕ್ಷ್ಮೀಸನ್ನಿಧಾನದಿಂದ ಕೂಡಿದ ತುಲಸಿಯ ಮೃತ್ತಿಕೆ ಹೀಗೆ ಸರ್ವಸಿದ್ಧಿಪ್ರದ ಎನ್ನುವುದರಲ್ಲಿ ಆಶ್ಚರ್ಯವೇನಿಲ್ಲ.

**ಯಸ್ಮಿನ್ ಗೃಹೇ ದ್ವಿಜಶ್ರೇಷ್ಠ ತುಲಸೀತಲಮೃತ್ತಿಕಾ ।**
**ತತ್ರೈವ ನೋಪಸರ್ಪಂತಿ ಭೂತಲೇ ಯಮಕಿಂಕರಾಃ ॥**

–ಪದ್ಮಪುರಾಣ, ಉತ್ತರಖಂಡ (೫/೫೬೬/೭)

ಯಾವ ಗೃಹದಲ್ಲಿ ತುಲಸಿಯ ಬುಡದಮೃತ್ತಿಕೆಯು ಇರುವುದೋ ಅಂತಹ ಭೂಪ್ರದೇಶಕ್ಕೆ ಯಮದೂತರು ಸರ್ವಥಾ ಆಗಮಿಸಲಾರರು.

**ಯಸ್ಮಿನ್ ಗೃಹೇ ಮುನಿಶ್ರೇಷ್ಠ ತುಲಸೀಮೂಲಮೃತ್ತಿಕಾ ।**
**ಸರ್ವದಾ ತತ್ರ ತಿಷ್ಠಂತಿ ದೇವತಾಶ್ಚ ಶಿವೋ ಹರಿಃ ॥**

– ಪದ್ಮಪುರಾಣ (೬/೨೫/೩೬)

ಯಾವ ಗೃಹದಲ್ಲಿ ತುಲಸಿಯ ಮೂಲದ ಮೃತ್ತಿಕೆಯು ಇರುವುದೋ ಅಲ್ಲಿ ಸದಾ ದೇವತೆಗಳು, ರುದ್ರದೇವರು ಹಾಗೂ ಶ್ರೀಹರಿಯು ಸನ್ನಿಹಿತರಾಗುವರು.

**ತುಲಸೀಮೂಲಸಂಭೂತಾಂ ಮೃದಂ ಮೂರ್ಧ್ನಾ ಬಿಭರ್ತಿ ಯಃ।**
**ದಧಾತಿ ರೂಪಂ ಸೋಽರ್ಕಸ್ಯ ತಮೋನಾಶಾಯ ಕೇವಲಮ್।**

– ಬೃಹದ್ಧರ್ಮಪುರಾಣ (೧/೮/೫೦)

ತುಲಸಿಯ ಬುಡದಲ್ಲಿ ನೆಲೆಸಿದ ಮೃತ್ತಿಕೆಯನ್ನು ಯಾವನು ಶಿರಸಾ ಧರಿಸುವನೋ ಅವನು ತಮಸ್ಸಿನ ನಾಶಕ್ಕೋಸ್ಕರ ಸೂರ್ಯನ ರೂಪವನ್ನು ಧರಿಸಿದವನೇ ಆಗುವನು. (ತುಲಸಿಯನ್ನು ಧರಿಸುವುದರಿಂದ ಸೂರ್ಯನಂತಹ ತೇಜಸ್ಸು ಲಭಿಸಿ ಅಜ್ಞಾನದ ಕತ್ತಲೆಯು ಪರಿಹಾರವಾಗುವುದು ಎಂದು ಭಾವ).

**ಗಂಗಾಮೃದಾ ಚಂದನೇನ ತನ್ಮೂಲಸ್ಯ ಮೃದಾಽಪಿ ವಾ।**
**ಯುಕ್ತಂ ಪತ್ರಂ ಸ್ವಶೀರ್ಷೇ ಯೋ ನಯೇತ ತೀರ್ಥಮೇವ ಸಃ॥**

– ಬೃಹದ್ಧರ್ಮಪುರಾಣ (೧/೮/೫೧)

ಗಂಗೆಯ ತೀರದ ಮಣ್ಣು, ತುಲಸೀಕಾಷ್ಠದ ಚಂದನ ಹಾಗೂ ತುಲಸಿಯ ಮೃತ್ತಿಕೆಗಳಿಂದ ತನ್ನ ತಲೆಯಲ್ಲಿ ಇರಿಸಿಕೊಳ್ಳುವವನು ಅವನು ತೀರ್ಥ ಎಂದರೆ ಪವಿತ್ರ ಎನ್ನಿಸುವನು.

**ತುಲಸೀಮೃತ್ತಿಕಾಲಿಪ್ತೋ ಯದಿ ಪ್ರಾಣಾನ್ ಪರಿತ್ಯಜೇತ್।**
**ಯಮೇನ ನೇಕ್ಷಿತುಂ ಶಕ್ತೋ ಯುಕ್ತಃ ಪಾಪಶತೈರಪಿ॥**

– ಪದ್ಮಪುರಾಣ, ಉತ್ತರಖಂಡ (೬)

ತುಲಸೀಮೃತ್ತಿಕೆಯನ್ನು ಧರಿಸಿ ಪ್ರಾಣಗಳನ್ನು ತೊರೆಯುವವನನ್ನು ಅವನು ನೂರಾರು ಪಾಪಗಳಿಂದ ಕೂಡಿದ್ದರೂ ಸಹ ಯಮನು ನೋಡಲು ಸಮರ್ಥನಾಗಲಾರ.

**ತುಲಸೀಮೃತ್ತಿಕಾಪುಂಡ್ರಂ ಲಲಾಟೇ ಯಸ್ಯ ದೃಶ್ಯತೇ।**
**ಯಮಸ್ತಂ ನೇಕ್ಷಿತುಂ ಶಕ್ತಃ ಕಿಮು ದೂತಾ ಭಯಂಕರಾಃ।**

– ಸ್ಕಂದಪುರಾಣ (೨/೪/೬/೩೩)

ತುಲಸೀಮೃತ್ತಿಕೆಯ ಪುಂಡ್ರವನ್ನು ಹಣೆಯಲ್ಲಿ ಧರಿಸಿದವನನ್ನು ಯಮನು ಸಹ ನೋಡಲು ಶಕ್ತನಾಗಲಾರ. ಇನ್ನು ಭಯಂಕರರಾದ ಅವರ ದೂತರ ಬಗ್ಗೆ ಹೇಳುವುದೇನು?

**ತುಲಸೀಮೃತ್ತಿಕಾಲಿಪ್ತಂ ಲಲಾಟಂ ಯಸ್ಯ ದೃಶ್ಯತೇ।**
**ಕುಲಂ ಸ್ಪೃಶತಿ ನೋ ತಸ್ಯ ಕಲಿರ್ಮುನಿವರೋತ್ತಮ॥**

– ಪದ್ಮಪುರಾಣ, ಉತ್ತರಖಂಡ

ತುಲಸೀಮೃತ್ತಿಕೆಯು ಯಾರ ಹಣೆಯಲ್ಲಿ ಕಂಡುಬರುವುದೋ ಅಂತಹವನ ಕುಲವನ್ನು ಕಲಿಯು ಮುಟ್ಟಲಾರ. (ಮಹಾಲಕ್ಷ್ಮೀಸನ್ನಿಧಾನದ ತುಲಸಿಯಿಂದಾಗಿ ಕಲಿ ಮೊದಲಾದ ದೈತ್ಯರು ದೂರಾಗುವರು ಎಂದರ್ಥ).

**ಯಸ್ಮಿನ್ ಗೃಹೇ ದ್ವಿಜಶ್ರೇಷ್ಠ ತುಲಸೀತಲಮೃತ್ತಿಕಾ ।**
**ತತ್ರೈವ ನೋಪಸರ್ಪಂತಿ ಭೂತಲೇ ಯಮಕಿಂಕರಾಃ ॥**
**ಧಾತ್ರೀಫಲಂ ಚ ತುಲಸೀ ಮೃತ್ತಿಕಾ ದ್ವಾರಕೋದ್ಭವಾ ।**
**ಸಫಲಂ ಜೀವಿತಂ ತಸ್ಯ ತ್ರಿತಯಂ ತಸ್ಯ ವೇಶ್ಮನಿ ॥** -ಸ್ಕಂದಪುರಾಣ

ಯಾರ ಮನೆಯಲ್ಲಿ ತುಲಸೀಮೃತ್ತಿಕೆಯು ಇರುವುದೋ ಆ ಭೂಪ್ರದೇಶಕ್ಕೂ ಸಹ ಯಮದೂತರು ಸರ್ವಥಾ ಆಗಮಿಸಲಾರರು. ಧಾತ್ರೀಫಲ, ತುಲಸಿ ಹಾಗೂ ದ್ವಾರಕೆಯ ಮೃತ್ತಿಕೆಯಾದ ಗೋಪೀಚಂದನ ಯಾರ ಮನೆಯಲ್ಲಿ ಇರುವುದೋ ಅವನ ಜೀವನವು ಸಾರ್ಥಕ.

★★★

# ತುಲಸೀಬೇರಿನ ಮಹತ್ತ್ವ

ತುಲಸಿಯ ದಳ, ಎಲೆಗಳು ಪವಿತ್ರವಾಗಿರುವಂತೆ ಅದರ ಬೇರೂ ಸಹ ಪರಮ ಪವಿತ್ರವೆನ್ನಿಸಿದೆ. ತುಲಸಿಯ ಬೇರೂ ಸಹ ಬಗೆಬಗೆಯಲ್ಲಿ ಉದ್ಧಾರಕ್ಕೆ ಕಾರಣವಾಗುವ ವಿಶೇಷತೆಯನ್ನು ಹೊಂದಿದೆ. ಅದು ನೆಲೆಸಿರುವ ಸ್ಥಳ ಶ್ರೀಹರಿಯ ಸನ್ನಿಧಾನವೆನ್ನಿಸಿ, ದೇವತೆಗಳ ವಾಸಕ್ಕೆ ಉಚಿತ ಸ್ಥಾನವೆನ್ನಿಸುವುದು. ನೆಲ್ಲಿ ಹಾಗೂ ಗೋಪೀಚಂದನಗಳಂತೆ ಸದಾ ಮನೆಯಲ್ಲಿ ತುಲಸಿಯ ಬೇರು ಇರಲೇಬೇಕು ಎಂಬುದು ಇಲ್ಲಿಯ ಭಾವ. ತುಲಸಿಯ ಬೇರು ಶ್ರೀಹರಿಯ ಅಭಿಷೇಕಕ್ಕೆ ವಿಹಿತವಾದ ಸ್ವಾದೋದಕಕ್ಕೆ ಕಾರಣವಾಗುವ ಅಪೂರ್ವ ವಸ್ತು. ಅದರಂತೆ ತುಲಸಿಯ ಮಣಿಗಳ ನಿರ್ಮಾಣಕ್ಕೂ ಸಹ. ಸ್ವಾದೋದಕವು ಭಗವಂತನ ಅಭಿಷೇಕಕ್ಕೆ ಉಪಯುಕ್ತವೆನ್ನಿಸಿದರೆ, ತುಲಸಿಯ ಮಣಿಗಳಿಂದ ಸಿದ್ಧವಾಗುವ ಹಾರವು ಭಗವಂತನ ಸಮರ್ಪಣೆಗೆ ವಿಹಿತವಾಗಿದೆ. ಸಮರ್ಪಿಸಿದ ಬಳಿಕ ನಿರ್ಮಾಲ್ಯವೆನ್ನಿಸುವ ತುಲಸೀಮಾಲೆಯು ಭಕ್ತರು ಕೊರಳಲ್ಲಿ ಧರಿಸುವುದು ವೈಷ್ಣವತ್ವದ ಚಿಹ್ನೆಯಾಗಿದೆ.

**ಕ್ಷೀರಾರ್ಣವೇ ಚ ವೈಕುಂಠೇ ಹರಿಕ್ಷೇತ್ರಂ ಚ ನೈಮಿಷಮ್ ।**
**ವಿಲಸತ್ತುಲಸೀಮೂಲೇ ಸದಾ ಸನ್ನಿಹಿತೋಽಸ್ಮ್ಯಹಮ್ ॥**

- ಬೃಹದ್ಧರ್ಮಪುರಾಣ

ಕ್ಷೀರಸಮುದ್ರದಲ್ಲಿ ಶ್ರೀಹರಿಯ ನೆಲೆಯಾದ ವೈಕುಂಠದಲ್ಲಿ ನೈಮಿಶಕ್ಷೇತ್ರದಲ್ಲಿ ಹಾಗೂ ಹೊಳೆಹೊಳೆಯುವ ತುಲಸಿಯ ಬೇರಿನಲ್ಲಿ ನಾನು ಸದಾ ಸನ್ನಿಹಿತನಾಗಿರುವೆನು. (ಇದು ಶ್ರೀಹರಿಯ ವಚನ).

**ಪತಿವ್ರತಾಯಾಂ ವೇದಾಂತೇ ಭಕ್ತಾನಾಂ ಹೃದಯಾಂಬುಜೇ ।**
**ಭಾನುಮಂಡಲಮಧ್ಯೇ ಚ ತವ ಮೂಲೇ ವಸಾಮ್ಯಹಮ್ ॥**

– ಬೃಹದ್ಧರ್ಮಪುರಾಣ

ಪತಿವ್ರತಾ ಸ್ತ್ರೀಯಲ್ಲಿ ವೇದಾಂತಶಾಸ್ತ್ರದಲ್ಲಿ ಭಕ್ತರ ಹೃದಯಕಮಲದಲ್ಲಿ ಸೂರ್ಯಮಂಡಲದ ಮಧ್ಯದಲ್ಲಿ ಎಲೈ ತುಲಸಿಯೇ ನಿನ್ನ ಬೇರಿನಲ್ಲಿ ನಾನು ನೆಲೆಸುವೆನು. (ಇದು ಶ್ರೀಹರಿಯ ವಚನ).

**ತುಲಸೀಮೂಲಮಾರಭ್ಯ ಯಾವದ್ಧಸ್ತಾಸ್ತು ಷೋಡಶ ।**
**ದಶದಿಕ್ಷು ಮಹಾತೀರ್ಥಂ ತದೇವ ಸುರವಂದಿತಮ್ ॥**

– ಬೃಹದ್ಧರ್ಮಪುರಾಣ (೧/೭/೨)

ತುಲಸಿಯ ಬೇರಿನಿಂದ ಪ್ರಾರಂಭಿಸಿ ಸುತ್ತಲೂ ೧೬ ಮೊಳಗಳ ಪ್ರದೇಶವು ಮಹಾತೀರ್ಥ ಎನ್ನಿಸುವುದು. ಅದನ್ನು ದೇವತೆಗಳು ಸಹ ವಂದಿಸುವರು.

★★★

## ತುಲಸೀಗಂಧದ ಮಹತ್ತ್ವ

ಗಂಧದ ಕೊರಡಿನಿಂದ ಗಂಧವನ್ನು ತೇಯ್ದು ಶ್ರೀಹರಿಗೆ ಸಮರ್ಪಿಸುವುದು ಷೋಡಶೋಪಚಾರಗಳಲ್ಲಿ ಪರಿಗಣಿತವಾಗಿದೆ. ಹಾಗೆ ಗಂಧವನ್ನು ಸಮರ್ಪಿಸಿದ್ದರಿಂದ ತ್ರಿವಕ್ರೆಯು ತ್ರಿಪುರಸುಂದರಿ ಎನ್ನಿಸಿದ ವಿವರ ಶ್ರೀಮದ್ಭಾಗವತದಲ್ಲಿ ಸುಪ್ರಸಿದ್ಧ. ಇಂತಹ ಶ್ರೀಗಂಧದಂತೆ ತುಲಸಿಕಾಷ್ಠವನ್ನು ತೇಯ್ದ ಗಂಧದಿಂದಲೂ ಶ್ರೀಹರಿಯನ್ನು ಅರ್ಚಿಸುವುದು ಶಾಸ್ತ್ರಗಳು ನಿರೂಪಿಸಿರುವ ವಿಧಿ. ಶ್ರೀಗಂಧಕ್ಕಿಂತಲೂ ಹೆಚ್ಚು ಪವಿತ್ರ ಎನ್ನಿಸಿರುವುದು ತುಲಸಿಗಂಧದ ಹಿರಿಮೆ. ಶ್ರೀಗಂಧಕ್ಕೆ ತುಲಸೀಗಂಧವನ್ನು ಮಿಶ್ರಣಮಾಡಿ ಸಮರ್ಪಿಸುವುದು ಸಹ ವಿಹಿತ. ತುಲಸೀಕಾಷ್ಠದ ಗಂಧದ ನೀರು ಸ್ವಾದೂದಕವೆನ್ನಿಸಿ ಶ್ರೀಹರಿಯ ನಿತ್ಯಪೂಜೆಗೆ ಕಡ್ಡಾಯವಾಗಿ ವಿಹಿತವಾಗಿದೆ. ಇತರ ಯಾವುದೇ ಬಗೆಯ ಕ್ಷೀರ ಮೊದಲಾದ ಪದಾರ್ಥಗಳಿಂದ ಮಾಡುವ ಅಭಿಷೇಕಕ್ಕಿಂತಲೂ ತುಲಸಿ-ಗಂಧೋದಕದ ಅಭಿಷೇಕವು ಶ್ರೀಹರಿಗೆ ಹೆಚ್ಚು ಪ್ರಿಯವಾದುದು. ಶ್ರೀಗಂಧದೊಂದಿಗೆ ತುಲಸಿಯ ಗಂಧವನ್ನೂ ಸೇರಿಸಿ ಮಿಶ್ರಣಮಾಡಿ ಶ್ರೀಹರಿಗೆ ಸಮರ್ಪಿಸುವುದು ವಿಶೇಷ ಪುಣ್ಯಕರ. ಅದರಂತೆ ಗಂಧೋಧಕದೊಂದಿಗೂ ಸಹ ತುಲಸೀಗಂಧದ ಉದಕವನ್ನು ಸೇರಿಸಿ ಅಭಿಷೇಕಮಾಡುವುದೂ ಸಹ ಅಪಾರ ಸಿದ್ಧಿಗೆ ಕಾರಣ.

**ಯೋ ನರೋ ಧಾರಯೇದ್ವಿಪ್ರ ತುಲಸೀಕಾಷ್ಠಚಂದನಮ್ ।**
**ತಸ್ಯಾಂಗಂ ನ ಸ್ಪೃಶೇತ್ ಪಾಪಂ ಸ ಯಾತಿ ಪರಮಂ ಪದಮ್ ॥**

– ಪದ್ಮಪುರಾಣ (೩/೨೨/೬)

ಯಾವ ಮನುಷ್ಯನು ತುಲಸಿಯ ಕಾಷ್ಠದ ಗಂಧವನ್ನು ಧರಿಸುವನೋ ಅವನ ದೇಹಕ್ಕೆ ಪಾಪವು ತಟ್ಟದು. ಅವನು ಪರಮಪದವನ್ನೇ ಹೊಂದುವನು.

**[೧೬] ತುಲಸೀಕಾಷ್ಠಸಂಯುಕ್ತಂ ಗಂಧಂ ಯೋ ಧಾರಯೇನ್ನರಃ ।**
**ತದ್ದೇಹಂ ನ ಸ್ಪೃಶೇತ್ ಪಾಪಂ ಕ್ರಿಯಮಾಣಂ ತಥೈವ ಚ ॥**

– ಸ್ಕಂದಪುರಾಣ (೨/೪/೮/೧೫)

ತುಲಸಿಕಾಷ್ಠದ ಚಂದನವನ್ನು ಯಾವ ಮಾನವನು ಧರಿಸುವನೋ ಅವನ ದೇಹವನ್ನು ಅವನು ಆ ಸಮಯದಲ್ಲಿ ಮಾಡುವ ಪಾಪವೂ ಸಹ ತಟ್ಟಲಾರದು.

**ವಿಷ್ಣೋಃ ಸಾಯುಜ್ಯಮಾಪ್ನೋತಿ ಸತ್ಯಂ ಸತ್ಯಂ ನೃಪೋತ್ತಮ ।**

– ಸ್ಕಂದಪುರಾಣ (೨/೪/೨೩/೧೭)

ತುಲಸಿಕಾಷ್ಠದ ಗಂಧವನ್ನು ಯಾವ ಮನುಷ್ಯನು ಧರಿಸುವನೋ ಅವನು ವಿಷ್ಣು-ಸಾಯುಜ್ಯವನ್ನು ಹೊಂದುವನು.

**ಯಸ್ತು ಶ್ರೀತುಲಸೀಗಂಧಮಾಘ್ರಾತಿ ದ್ವಿಜಸತ್ತಮ ।**
**ತಸ್ಯೈವ ನಾಸಿಕರಂಧ್ರಂ ಪ್ರವಿಶತ್ಯಚ್ಯುತಃ ಸ್ವಯಮ್ ॥**
**ಏವಂ ಪ್ರಭಾವಾ ಸಾ ದೇವೀ ತುಲಸೀ ಪುಣ್ಯದಾಯಿನೀ ।** – ಸ್ಕಂದಪುರಾಣ

ಯಾವನು ಶ್ರೀತುಲಸಿಯ ಗಂಧವನ್ನು ಆಘ್ರಾಣಿಸುವನೋ ಅವನ ನಾಸಿಕಾರಂಧ್ರದಲ್ಲಿ ಸ್ವಯಂ ಶ್ರೀಹರಿಯೇ ಪ್ರವೇಶಿಸುವನು. ಪುಣ್ಯಪ್ರದಳಾದ ತುಲಸಿದೇವಿಯ ಪ್ರಭಾವ ಇಂತಹುದು.

**ಯೋ ದದಾತಿ ಹರೇರ್ನಿತ್ಯಂ ತುಲಸೀಕಾಷ್ಠಚಂದನಮ್ ।**
**ಯುಗಾನಿ ವಸತಿ ಸ್ವರ್ಗೇ ಅನಂತಾನಿ ನರೋತ್ತಮಃ ॥** – ಸ್ಕಂದಪುರಾಣ

ಯಾವನು ನಿತ್ಯವೂ ಶ್ರೀಹರಿಗೆ ತುಲಸೀಕಾಷ್ಠದ ಗಂಧವನ್ನು ಸಮರ್ಪಿಸುವನೋ ಅವನು ಅನಂತಯುಗಗಳ ವರೆಗೆ ಸ್ವರ್ಗದಲ್ಲಿ ನೆಲೆಸುವನು.

---

೧೬ ತುಲಸೀಕಾಷ್ಠಜಂ ಯಸ್ತು ಚಂದನಂ ಧಾರಯೇನ್ನರಃ ।
ತದ್ದೇಹಂ ನ ಸ್ಪೃಶೇತ್ ಪಾಪಂ ಕ್ರಿಯಮಾಣಮಪೀಹ ಯತ್ ॥

– ಪದ್ಮಪುರಾಣ (೬/೧೦೭/೧೭) ತಥಾ ಸ್ಕಂದಪುರಾಣ (೨/೪/೨೩/೧೬)

**ಹರೇರ್ಮೂರ್ಧ್ನಿ ನ್ಯಸೇದ್ಯಸ್ತು ತುಲಸೀಕಾಷ್ಠಚಂದನಮ್ ।**
**ಸ್ವದೇಹೇ ಧಾರಯೇದ್ಯಸ್ತು ತೀರ್ಥಕೋಟಿಫಲಂ ಭವೇತ್ ॥** – ಸ್ಕಂದಪುರಾಣ

ಶ್ರೀಹರಿಯ ಶಿರಸ್ಸಿನ ಮೇಲೆ ತುಲಸೀಕಾಷ್ಠದ ಚಂದನವನ್ನು ಸಮರ್ಪಿಸಿ, ಬಳಿಕ ಅದನ್ನು ತನ್ನ ದೇಹದ ಮೇಲೆ ಧರಿಸುವವನು ಕೋಟಿ ತೀರ್ಥಗಳ ಫಲವನ್ನು ಹೊಂದುವನು.

**ಸರ್ವೇಷಾಮಪಿ ದೇವಾನಾಂ ತುಲಸೀಕಾಷ್ಠಚಂದನಮ್ ।**
**ಪಿತೃಣಾಂ ಚ ವಿಶೇಷೇಣ ಸದಾऽಭೀಷ್ಟಂ ಹರೇರ್ಯಥಾ ॥** – ಸ್ಕಂದಪುರಾಣ

ಶ್ರೀಹರಿಗೆ ಹೇಗೋ ಹಾಗೆ ಸಕಲ ದೇವತೆಗಳಿಗೂ ಹಾಗೂ ಪಿತೃಗಳಿಗೂ ತುಲಸೀಕಾಷ್ಠದ ಗಂಧವು ವಿಶೇಷವಾಗಿ ಸದಾ ಪ್ರಿಯವಾದುದು.

**ಯೋ ದದ್ಯಾತ್ ತುಲಸೀಗಂಧಮಪಿ ಸರ್ಷಪಮಾತ್ರಕಮ್ ।**
**ಕೋಟಿಜನ್ಮಾರ್ಜಿತಂ ಪಾಪಂ ತತ್ಕ್ಷಣಾದೇವ ನಶ್ಯತಿ ॥** – ಸ್ಕಂದಪುರಾಣ

ಯಾವನು ಸಾಸಿವೆಯಷ್ಟಾದರೂ ತುಲಸೀಗಂಧವನ್ನು ಶ್ರೀಹರಿಗೆ ಸಮರ್ಪಿಸುವನೋ ಅವನ ಕೋಟಿ ಜನ್ಮಗಳಿಂದ ಒದಗಿದ್ದ ಪಾಪವು ತತ್‌ಕ್ಷಣದಲ್ಲಿಯೇ ನಾಶವಾಗುವುದು.

**ಯೇ ಹಿ ಭಾಗವತಾ ಭೂತ್ವಾ ತುಲಸೀಚಂದನಂ ಕಲೌ ।**
**ನಾರ್ಪಯಂತಿ ಸದಾ ವಿಷ್ಣೋಃ ನ ಚ ಭಾಗವತಾ ಹಿ ತೇ ॥** – ಸ್ಕಂದಪುರಾಣ

ಯಾರು ಭಾಗವತರಾಗಿದ್ದು ಕಲಿಯುಗದಲ್ಲಿ ತುಲಸೀಗಂಧವನ್ನು ಶ್ರೀಹರಿಗೆ ಸದಾ ಸಮರ್ಪಿಸುವುದಿಲ್ಲವೋ ಅವರು ನಿಶ್ಚಯವಾಗಿಯೂ ಭಾಗವತರೆನ್ನಿಸರು.

**ತುಲಸೀಚಂದನಾಲಿಪ್ತಃ ಕುರುತೇ ಹರಿಪೂಜನಮ್ ।**
**ಪೂಜಿತೇನ ದಿನೈಕೇನ ಲಭತೇ ಶತವಾರ್ಷಿಕೀಮ್**[೧೭] **॥** – ಪದ್ಮಪುರಾಣ

ತುಲಸೀಗಂಧದಿಂದ ಲೇಪಿತನಾಗಿ ಶ್ರೀಹರಿಯ ಪೂಜೆಯನ್ನು ಮಾಡುವವನು ಒಂದು ದಿನದಲ್ಲಿಯೇ ನೂರು ವರ್ಷಗಳ ಪೂಜೆಯ ಫಲವನ್ನು ಪಡೆಯುವನು.

**ಶ್ರೀಖಂಡಚಂದನೋನ್ಮಿಶ್ರಂ ಯೋ ಗಂಧಂ ವಿಷ್ಣವೇऽರ್ಪಯೇತ್ ।**
**ಕಲ್ಪಕೋಟಿಸಹಸ್ರಾಣಿ ಕಲ್ಪಕೋಟಿಶತಾನಿ ಚ ।**
**ವೈಕುಂಠೇ ಮೋದತೇ ನಿತ್ಯಂ ದಶಪೂರ್ವೈರ್ದಶಾಪರೈಃ ॥** – ಗರುಡಪುರಾಣ

ಶ್ರೀಖಂಡ ಚಂದನದೊಂದಿಗೆ ಕೂಡಿದ ತುಲಸೀಚಂದನವನ್ನು ಶ್ರೀಹರಿಗೆ ಯಾವನು ಸಮರ್ಪಿಸುವನೋ ಅವನು ತನ್ನ ಹಿಂದಿನ ಹತ್ತು ಕುಲದವರು ಹಾಗೂ ಮುಂದಿನ ಹತ್ತು ಕುಲದವರ ಸಮೇತ ಸದಾ ವೈಕುಂಠದಲ್ಲಿ ನಲಿಯುವರು.

---

೧೭ ಪುಣ್ಯಮಿತಿ ಶೇಷಃ ॥ – ವ್ಯಾ

ತುಲಸೀದಲಲಗ್ನೇನ ಚಂದನೇನ ಜನಾರ್ದನಮ್ ।
ವಿಲೇಪಯಂತಿ ಯೋ ನಿತ್ಯಂ ಲಭತೇ ಚಿಂತಿತಂ ಫಲಮ್ ॥ - ಗರುಡಪುರಾಣ

ತುಲಸೀದಳದೊಂದಿಗೆ ಕೂಡಿದ ಗಂಧವನ್ನು ಶ್ರೀಹರಿಗೆ ನಿತ್ಯದಲ್ಲೂ ಲೇಪಿಸುವವನು ಬಯಸುವ ಫಲವನ್ನು ಪಡೆದುಕೊಳ್ಳುವನು.

★★★

# ತುಲಸಿಯ ನೆರಳು ಸಹ ತಾರಕ

ನೆರಳು ದೇಹಕ್ಕೆ ತಂಪನ್ನು ನೀಡುವ ಒಂದು ಸಾಧನ. ವೃಕ್ಷಗಳಲ್ಲಿ ಕೆಲವು ನೆರಳಿನ ಮರಗಳೆನ್ನಿಸಿ ಛಾಯಾದ್ರುಮ ಎನ್ನಿಸಿವೆ. ಜಾಲಿ ಮೊದಲಾದ ಮರಗಳು ನೆರಳನ್ನು ಸ ಹ ನೀಡಲಾರದ ವಿಚಿತ್ರ ವೃಕ್ಷಗಳು. ಬೇವು ಮೊದಲಾದವು ನೆರಳು ನೀಡುವ ವೃಕ್ಷಗಳಾದರೂ ಪಾವಿತ್ರ್ಯಕ್ಕೆ ಹೆಸರಾದವುಗಳೇನಲ್ಲ. ಈಚಲು ಮೊದಲಾದ ವೃಕ್ಷಗಳ ನೆರಳಂತೂ ಅಪಾವಿತ್ರ್ಯಕ್ಕೆ ಪ್ರಖ್ಯಾತವಾದವುಗಳು. ವಟವೃಕ್ಷದ ನೆರಳು ತುಂಬಾ ವಿಶಾಲವಾದರೂ ರಾತ್ರಿಕಾಲದಲ್ಲಿ ಸಂಪೂರ್ಣ ನಿಷಿದ್ಧ. ಶನಿವಾರದ ಹೊರತು ಇತರ ದಿವಸಗಳಲ್ಲಿ ಹಗಲಿನ ಸಮಯದಲ್ಲೂ ಅದರ ನೆರಳು ಅಷ್ಟು ಪ್ರಶಸ್ತವೇನಲ್ಲ. ಆದರೆ ತುಲಸಿಯದು ವಿಚಿತ್ರಬಗೆಯ ನೆರಳು. ಮೇಲ್ನೋಟಕ್ಕೆ ಅದೇನೂ ಭಾರೀ ನೆರಳನ್ನು ನೀಡುವ ಎತ್ತರದ ಗಿಡವೇನಲ್ಲ. ಅದರ ದಳ ಹಾಗೂ ಎಲೆಗಳು ಸಹ ಆಲದ ಮರ ಮೊದಲಾದವುಗಳಂತೆ ವಿಶಾಲವಾದವುಗಳೇನಲ್ಲ. ಆದರೂ ಅದರ ನೆರಳು ಯಾವ ರೀತಿಯಲ್ಲಿ ಸೋಕಿದರೂ ಸಹ ಅಗಾಧವಾದ ಪಾವಿತ್ರ್ಯ ಲಭಿಸುವುದು ಅಚ್ಚರಿಯ ಸಂಗತಿ. ಹೀಗೆ ತನ್ನ ನೆರಳಿನಿಂದಲೂ ಸಹ ಸುವಿಖ್ಯಾತವಾಗಿರುವ ಹಿರಿಮೆ ತುಲಸಿಯದು. ಕೆಲವು ವೃಕ್ಷಗಳ ನೆರಳು ನಿಷಿದ್ಧವೆನ್ನಿಸಿವೆ. ಅಶ್ವತ್ಥ ಮೊದಲಾದವುಗಳ ನೆರಳು ಕೆಲವು ವಿಶೇಷ ಪರ್ವಕಾಲಗಳಲ್ಲಿ ಹಾಗೂ ಶನಿವಾರ ಮಧ್ಯಾಹ್ನದವರೆಗಿನ ಕಾಲಗಳಲ್ಲಿ ಮಾತ್ರ ಪವಿತ್ರ. ಆದರೆ, ತುಲಸಿಯ ನೆರಳು ಹಾಗಲ್ಲ. ಅದು ಸರ್ವಕಾಲವೂ ಪವಿತ್ರ. ಇತರ ವೃಕ್ಷಗಳ ನೆರಳು ನಮ್ಮ ಶರೀರದ ಮೇಲೆ ಬಿದ್ದು ರಕ್ಷಣೆ ನೀಡಿದರೆ ತುಲಸಿಯ ನೆರಳು ಅದು ಎಲ್ಲಿಯೇ ಇದ್ದರೂ ಸಹ ತಾರಕವೆನ್ನಿಸಿ ಮಾರಕವೆನ್ನಿಸುವ ಅಪಾಯದಿಂದ ಸಂರಕ್ಷಿಸುವುದು.

ತುಲಸೀಕಾನನೋದ್ಭೂತಾ ಛಾಯಾ ಯತ್ರ ಭವೇನ್ಮುನೇ ।
ತತ್ರ ಶ್ರಾದ್ಧಂ ಪ್ರದಾತವ್ಯಂ ಪಿತೄಣಾಂ ತೃಪ್ತಿಹೇತವೇ ॥ - ಗರುಡಪುರಾಣ

ತುಲಸಿಯ ವನಗಳಿಂದ ಹುಟ್ಟುವ ನೆರಳು ಇರುವ ಸ್ಥಳದಲ್ಲಿ ಪಿತೃಗಳ ತೃಪ್ತಿಗಾಗಿ ಶ್ರಾದ್ಧಕಾರ್ಯವನ್ನು ಆಚರಿಸಬೇಕು.

★★★

# ತುಲಸೀಜಲದ ಪ್ರೋಕ್ಷಣೆ

ಜಲದ ಪ್ರೋಕ್ಷಣೆ ಶುದ್ಧಿಯ ಅಂಗಗಳಲ್ಲೊಂದು. ಪುಣ್ಯಕರವಾದ ತೀರ್ಥಗಳ, ನದಿಗಳ ನೀರಿನ ಪ್ರೋಕ್ಷಣೆ ಒಂದು ರೀತಿಯಲ್ಲಿ ಅವುಗಳ ಸ್ನಾನಕ್ಕೆ ಸಮಾನ. ತುಲಸಿಜಲದ ಪ್ರೋಕ್ಷಣೆ ಇವೆಲ್ಲವುಗಳಿಗಿಂತ ಮಿಗಿಲಾದ ಪುಣ್ಯಕರವಾದ ಕಾರ್ಯ. ಇತರ ತೀರ್ಥಗಳ ಜಲದ ಪ್ರೋಕ್ಷಣೆಯು ಸಹ ಮತ್ತಷ್ಟು ಪರಿಣಾಮಕಾರಿಯಾಗಲು ತುಲಸಿಯ ಸಂಪರ್ಕ ಅತ್ಯಗತ್ಯ. ಧಾತ್ರೀಫಲದೊಂದಿಗೆ ಮಿಶ್ರಿತವಾದಾಗ ತುಲಸಿಜಲದ ಮಹತ್ತ್ವ ಮತ್ತಷ್ಟು ಹೆಚ್ಚುವುದು. ಕೆಲವು ದ್ರವಗಳನ್ನು ಪ್ರೋಕ್ಷಿಸಿದಾಗ ಕೂಡಲೇ ಚರ್ಮ ಸುಡುವುದು ಕಂಡಿದೆ. ಅದರಂತೆ ಸ್ಪರ್ಶಮಾತ್ರದಿಂದಲೇ ಪಾಪವನ್ನುಸುಡುವ ಶಕ್ತಿ ತುಲಸಿಯದು ಎಂಬುದು ವಿಶೇಷ. ಅಶ್ವತ್ಥ ಮೊದಲಾದ ವೃಕ್ಷಗಳ ಜಲದ ಪ್ರೋಕ್ಷಣೆಗೆ ಈ ತೆರನಾದ ಮಹತ್ತ್ವ ಹೇಳಲ್ಪಟ್ಟಿಲ್ಲ. ವಿಷ್ಣುಸಹಸ್ರನಾಮ, ನಾರಾಯಣವರ್ಮ, ಮೊದಲಾದವುಗಳಿಂದ ಅಭಿಮಂತ್ರಿತವಾದ ಜಲ ಸಕಲ ಪಾಪಹರ, ರೋಗಹರ ಎಂಬುದು ಸುಪ್ರಸಿದ್ಧ. ಅದರಂತೆ ಕೇವಲ ತುಲಸಿಯ ಜಲವೇ ಪಾವನ ಎಂಬುದು ವಿಶೇಷ. ಇನ್ನು ಇದನ್ನು ವಿಷ್ಣುಸಹಸ್ರನಾಮಾದಿಗಳಿಂದ ಅಭಿಮಂತ್ರಿಸಿ ಪ್ರೋಕ್ಷಿಸಿದರಂತೂ ಮತ್ತಷ್ಟು ಪಾವನ.

**ತುಲಸೀಪತ್ರಸಂಯುಕ್ತೇ ಜಲೇ ಸ್ನಾನಂ ಚರೇದ್ಯದಿ ।**
**ಸರ್ವಪಾಪವಿನಿರ್ಮುಕ್ತೋ ಮೋದತೇ ವಿಷ್ಣುಮಂದಿರೇ ॥**

– ಸ್ಕಂದಪುರಾಣ (೨/೪/೮/೧೧)

ತುಲಸಿಎಲೆಗಳಿಂದ ಕೂಡಿದಂತಹ ನೀರಿನಲ್ಲಿ ಸ್ನಾನಮಾಡಿದವನು ಸಕಲ ಪಾಪಗಳಿಂದ ಬಿಡುಗಡೆಯನ್ನು ಹೊಂದಿ ವಿಷ್ಣುಮಂದಿರದಲ್ಲಿ ನಲಿಯುವನು.

**ಧಾತ್ರೀಫಲವಿಮಿಶ್ರೈಸ್ತು ತುಲಸೀಪತ್ರಮಿಶ್ರಿತೈಃ ।**
**ಜಲೈಃ ಸ್ನಾತಿ ನರಸ್ತಸ್ಯ ಗಂಗಾಸ್ನಾನಫಲಂ ಸ್ಮೃತಮ್ ॥**

– ಪದ್ಮಪುರಾಣ, ಉತ್ತರಖಂಡ (೬/೧೦೭/೨೨)

ಧಾತ್ರೀಫಲದಿಂದ ಮಿಶ್ರಿತವಾದ ತುಲಸಿದಳಗಳಿಂದ ಕೂಡಿದ ನೀರಿನಲ್ಲಿ ಸ್ನಾನಮಾಡುವ ಮನುಷ್ಯನಿಗೆ ಗಂಗಾಸ್ನಾನದ ಫಲವು ಲಭಿಸುವುದು ಎಂದು ಸ್ಮೃತಿಗಳಲ್ಲಿ ಉಕ್ತವಾಗಿದೆ.

**ತುಲಸೀಪತ್ರಸಂಯುಕ್ತಂ ಶ್ರಯಂತೇ ಮಸ್ತಕೇ ಜಲಮ್ ।**
**ತಸ್ಯ ಸ್ಯಾತ್ ಸಫಲಂ ಜನ್ಮ ತನ್ಮೇ ನಿಗದತಃ ಶ್ರುಣು ॥**

– ವಿಷ್ಣುಧರ್ಮೋತ್ತರ (೧೪/೮)

ತುಲಸಿ ಎಲೆಗಳಿಂದ ಒಡಗೂಡಿದ ಜಲವನ್ನು ಮಸ್ತಕದಲ್ಲಿ ಧರಿಸುವವನ ಜನ್ಮ ಸಫಲವೆನ್ನಿಸುವುದು. ಅದಕ್ಕೆ ಬರುವ ಫಲವನ್ನು ತಿಳಿಸುವೆನು ಕೇಳು.

ಗಂಗಾದಿಸರ್ವತೀರ್ಥೇಷು ಸ್ನಾತ್ವಾ ಚ ವಿಧಿವಚ್ಚಿರಮ್ ।
ಜನ್ಮತ್ರಯಾರ್ಜಿತಂ ಪಾಪಂ ಹಿತ್ವಾ ಸ್ವರ್ಗೇ ಮಹೀಯತೇ ॥

– ವಿಷ್ಣುಧರ್ಮೋತ್ತರ (೧೪/೯)

ಗಂಗಾದಿ ಸಕಲ ತೀರ್ಥಗಳಲ್ಲಿ ವಿಧ್ಯುಕ್ತವಾಗಿ ಚಿರಕಾಲ ಸ್ನಾನಮಾಡಿದ ಪುಣ್ಯವನ್ನು ಪಡೆಯುವುದರೊಂದಿಗೆ ಮೂರು ಜನ್ಮಗಳಲ್ಲಿ ಒದಗಿದ ಪಾಪಗಳನ್ನು ಪರಿಹರಿಸಿಕೊಂಡು ಸ್ವರ್ಗದಲ್ಲಿ ಆದರಿಸಲ್ಪಡುವನು.

ತುಲಸೀದಲಸಮ್ಮಿಶ್ರತೋಯಂ ಗಂಗಾಸಮಂ ವಿದುಃ ।
ಯೋ ವಹೇಚ್ಚಿರಸಾ ನಿತ್ಯಂ ಧೃತಾ ಭವತಿ ಜಾಹ್ನವೀ ॥ – ವಿಷ್ಣುಧರ್ಮೋತ್ತರ

ತುಲಸೀ ಎಲೆಗಳಿಂದ ಮಿಶ್ರಿತವಾದ ನೀರನ್ನು ಗಂಗೆಗೆ ಸಮಾನ ಎಂದು ಹೇಳುವರು. ನಿತ್ಯವೂ ಅದನ್ನು ಶಿರಸಾ ಧರಿಸುವುದು ಗಂಗೆಯನ್ನೇ ಧರಿಸಿದಂತೆ.

***

## ತುಲಸೀಮೃತ್ತಿಕೆಯಿಂದ ಸ್ನಾನ

ಪ್ರತಿನಿತ್ಯದಲ್ಲೂ ಸ್ನಾನ ಶೌಚದ ಅತ್ಯಂತ ಪ್ರಧಾನ ಅಂಗ. ಸಂಧ್ಯಾವಂದನೆ, ಜಪ, ಪೂಜೆ, ಹೋಮ ಮೊದಲಾದ ಸಕಲ ಕಾರ್ಯಗಳಿಗೂ ಸ್ನಾನವು ಪ್ರಧಾನವಾದ ಅಂಗ. ಸ್ನಾನಮಾಡದೆ ಮಾಡುವ ಸಕಲ ಸತ್ಕಾರ್ಯಗಳೂ ವ್ಯರ್ಥ. ಅಂತಹ ಸ್ನಾನವು ಸಕಾಲಕ್ಕೆ ಎಂಬುದು ಮುಖ್ಯ. ತೀರ್ಥಸ್ನಾನ ಇನ್ನೂ ಶ್ರೇಷ್ಠ. ಸ್ನಾನಕ್ಕೆ ಅಗತ್ಯವಾದ ಮತ್ತೊಂದು ವಸ್ತು ಎಂದರೆ ತುಲಸಿ. ಮೃತ್ತಿಕೆಯನ್ನು ಮೈಗೆ ಲೇಪಿಸಿಕೊಂಡು ಸ್ನಾನಮಾಡಬೇಕಾದದ್ದು ವಿಧಿ. ಅಂತಹ ಮೃತ್ತಿಕೆಯು ಶುದ್ಧವಾಗಿರಬೇಕು. ನದೀತೀರಗಳ, ಪುಣ್ಯತೀರ್ಥಗಳ ಮೃತ್ತಿಕೆ ಅತ್ಯಂತ ಶ್ರೇಷ್ಠ. ತುಲಸೀ ಮೃತ್ತಿಕೆಯು ಸ್ನಾನಕ್ಕೆ ಅತ್ಯಗತ್ಯವಾಗಿರುವಂತಹ ಮೃತ್ತಿಕೆ. ಇತರ ಮೃತ್ತಿಕೆಗಳಿದ್ದರೂ ಸಹ ತುಲಸೀಮೃತ್ತಿಕೆಯೊಂದಿಗೆ ಜೊತೆಮಾಡಿಕೊಂಡೇ ಲೇಪಿಸಿಕೊಳ್ಳಬೇಕು. ಬೇರಾವ ಮೃತ್ತಿಕೆ ಇಲ್ಲವಾದರೂ ಕೇವಲ ತುಲಸೀಮೃತ್ತಿಕೆಯನ್ನು ಲೇಪಿಸಿಕೊಂಡೇ ಸ್ನಾನಮಾಡಬೇಕು. ಅದರ ಫಲವನ್ನು ಪುರಾಣಗಳು ಕೊಂಡಾಡಿವೆ. ತೀರ್ಥಸ್ನಾನಗಳು ಪಾವನ ಎಂಬುದು ಶಾಸ್ತ್ರೋಕ್ತಿ. ಆದರೆ, ಅಂತಹ ತೀರ್ಥಸ್ನಾನಕ್ಕೂ ಸಹ ತುಲಸೀ ಮೃತ್ತಿಕೆಯು ಅಗತ್ಯ ಎಂಬಲ್ಲಿ ತುಲಸಿಯ ಮಹತ್ತ್ವ ಅಡಗಿದೆ. ತುಲಸಿಯ ಮೃತ್ತಿಕೆಯನ್ನು ಲೇಪಿಸಿಕೊಳ್ಳದೇ ಮಾಡುವ ಸ್ನಾನವು ಪೂರ್ಣವೆನ್ನಿಸದು. ಸ್ನಾನವು ಕರ್ಮಾಂಗ ಎಂದು ಪ್ರಸಿದ್ಧ. ಆದರೆ, ತುಲಸೀ ಮೃತ್ತಿಕೆಯಿಂದ ಸ್ನಾನವೇ ಒಂದು ಶ್ರೇಷ್ಠ ಕರ್ಮ ಎಂಬುದು ವಿಶೇಷ. ಪ್ರತಿನಿತ್ಯ ತುಲಸೀ ಮೃತ್ತಿಕೆಯಿಂದ ಸ್ನಾನಮಾಡುವವನಿಗೆ ಸಾಂಗೋಪಾಂಗವಾಗಿ ಅಶ್ವಮೇಧಯಾಗ ಮಾಡಿದ ಫಲವು

ಲಭಿಸುವುದು ಎಂದು ಪುರಾಣಗಳು ಸಾರಿವೆ. ಅರ್ಧೋದಯ ಮೊದಲಾದ ವಿಶೇಷ ಪರ್ವಕಾಲಗಳಲ್ಲಂತೂ ತುಲಸೀ ಮೃತ್ತಿಕೆಯ ಸ್ನಾನ ಮೂರುಲೋಕಗಳೂ ಕೊಂಡಾಡುವಂತಹ ಅತ್ಯಂತ ಪವಿತ್ರವಾದಂತಹ ಕಾರ್ಯ.

**ತತಸ್ತು ಬಹಿರಾಗತ್ಯ ತೀರ್ಥಂ ಶಿರಸಿ ನಿಕ್ಷಿಪೇತ್ ।**
**ತೀರ್ಥಂ ಪೀತ್ವಾ ತ್ರಿವಾರಂ ತು ತುಲಸೀಂ ಗೃಹ್ಯ ಪಾಣಿನಾ ॥**

– ಸ್ಕಂದಪುರಾಣ (೨/೪/೪/೧೪)

ಅನಂತರ ತೀರ್ಥವನ್ನು ತಲೆಯ ಮೇಲೆ ಪ್ರೋಕ್ಷಿಸಿಕೊಳ್ಳಬೇಕು. ಮೂರು ಬಾರಿ ತುಲಸಿಯೊಂದಿಗೆ ತೀರ್ಥವನ್ನು ಪ್ರಾಶನಮಾಡಬೇಕು.

**ತುಲಸೀಪತ್ರಸಂಯುಕ್ತಜಲೇ ಸ್ನಾನಂ ಚರೇದ್ಯದಿ ।**
**ಸರ್ವಪಾಪವಿನಿರ್ಮುಕ್ತೋ ಮೋದತೇ ವಿಷ್ಣುಮಂದಿರೇ ॥**

– ಸ್ಕಂದಪುರಾಣ (೨/೪/೮/೧೧)

ತುಲಸೀಪತ್ರದಿಂದ ಒಡಗೂಡಿದ ಜಲದಲ್ಲಿ ಸ್ನಾನವನ್ನು ಆಚರಿಸಿದಲ್ಲಿ ಸರ್ವಪಾಪದಿಂದ ಬಿಡುಗಡೆಹೊಂದಿ, ವಿಷ್ಣುಮಂದಿರಲ್ಲಿ ಸುಖದಿಂದ ಇರುವನು.

**ಇತ್ಯುಕ್ತ್ವಾ ಧರ್ಮದತ್ತೋಽಸೌ ಯಾವತ್ತಾಮಭ್ಯಷೇಚಯತ್ ।**
**ತುಲಸೀಮಿಶ್ರತೋಯೇನ ಶ್ರಾವಯನ್ ದ್ವಾದಶಾಕ್ಷರಮ್ ।**
**ತಾವತ್ಪ್ರೇತತ್ವನಿರ್ಮುಕ್ತಾ ಜ್ವಲದಗ್ನಿಶಿಖೋಪಮಾ ।**
**ದಿವ್ಯರೂಪಧರಾ ಜಾತಾ ಲಾವಣ್ಯೇನ ಯಥೇಂದಿರಾ ॥**

– ಪದ್ಮಪುರಾಣ, ಉತ್ತರಖಂಡ (೬/೧೦೬/೬-೭)

ಧರ್ಮದತ್ತನು ತುಲಸೀಮಿಶ್ರಿತವಾದ ನೀರಿನಿಂದ ಶ್ರೀಹರಿಗೆ ಅಭಿಷೇಕವನ್ನು ಮಾಡಿದ. ದ್ವಾದಶಾಕ್ಷರ ಮಂತ್ರವನ್ನು ಪಠಿಸಿದ, ಆ ಕೂಡಲೇ ಪ್ರೇತತ್ವದಿಂದ ಬಿಡುಗಡೆಹೊಂದಿ ಅಗ್ನಿಯಂತೆ ಕಂಗೊಳಿಸುತ್ತಾ ದಿವ್ಯರೂಪವನ್ನು ಪಡೆದವರಾಗಿ ಮೇಲಕ್ಕೆ ತೆರಳಿದರು.

**ಸ ಸ್ನಾತಃ ಸರ್ವತೀರ್ಥೇಷು ಸರ್ವಯಜ್ಞೇಷು ದೀಕ್ಷಿತಃ ।**
**ತುಲಸೀಪತ್ರತೋಯೇನ ಯೋಽಭಿಷೇಕಂ ಸಮಾಚರೇತ್ ॥**

– ಬ್ರಹ್ಮವೈವರ್ತಪುರಾಣ ಪ್ರಕೃತಿಖಂಡ (೨/೨೧/೪೦)

ಯಾವನು ತುಲಸೀಪತ್ರದ ನೀರಿನಿಂದ ಶ್ರೀಹರಿಗೆ ಅಭಿಷೇಕಮಾಡುವವನು ಸರ್ವತೀರ್ಥಗಳಲ್ಲೂ ಸ್ನಾನಮಾಡಿದ ಫಲವನ್ನು ಸರ್ವಯಜ್ಞಗಳ ದೀಕ್ಷೆಯನ್ನು ಪಡೆದ ಫಲವನ್ನು ಪಡೆದುಕೊಳ್ಳುವನು.

ತನ್ಮೂಲಮೃತ್ತಿಕಾಂ ಚಾಂಗೇ ಕೃತ್ವಾಸ್ನಾತಿ ದಿನೇ ದಿನೇ ।
ದಶಾಶ್ವಮೇಧಾವಭೃಥಸ್ನಾನಜಂ ಲಭತೇ ಫಲಮ್ ॥ - ಬ್ರಹ್ಮವೈವರ್ತಪುರಾಣ

ತುಲಸೀಬುಡದ ಮೃತ್ತಿಕೆಯನ್ನು ಮೈಗೆ ಲೇಪಿಸಿಕೊಂಡು ದಿನದಿನವೂ ಸ್ನಾನಮಾಡು-ವವನಿಗೆ ಹತ್ತು ಅಶ್ವಮೇಧಗಳನ್ನು ಮಾಡಿ, ಅವಭೃಥಸ್ನಾನಮಾಡಿದ ಫಲವು ಲಭಿಸುವುದು.

***

## ತುಲಸೀಸ್ನಾನದ ಫಲ

ತುಲಸೀದಲಸಮ್ಮಿಶ್ರಂ ಯಸ್ತೋಯಂ ಶಿರಸಾ ವಹೇತ್ ।
ಸರ್ವತೀರ್ಥಾಭಿಷೇಕಸ್ತು ತೇನ ಪ್ರಾಪ್ತೋ ನ ಸಂಶಯಃ ॥

ಅರ್ಧೋದಯೇ ಮಾಘಮಾಸೇ ಸ್ನಾಯಾತ್ ತನ್ಮೂಲಪಾಂಸುಭಿಃ ।
ಕುಲತ್ರಯಂ ಸಮುದ್ಧಾರ್ಯ ವಿಷ್ಣುಲೋಕೇ ಮಹೀಯತೇ ॥ - ಪದ್ಮಪುರಾಣ

ತುಲಸೀದಳದಿಂದ ಕೂಡಿದ ಜಲವನ್ನು ಶಿರಸಾ ಧರಿಸಬೇಕು. ಅವನಿಗೆ ಸರ್ವತೀರ್ಥಗಳಲ್ಲಿ ಸ್ನಾನಮಾಡಿದ ಪುಣ್ಯವು ಲಭಿಸುವುದು. ಮಾಘಮಾಸದ ಅರ್ಧೋದಯ ಪರ್ವಕಾಲದಲ್ಲಿ ವಿಶೇಷವಾಗಿ ತುಲಸೀವೃಕ್ಷದ ಮೃತ್ತಿಕೆಯಿಂದ ಸ್ನಾನಮಾಡಬೇಕು. ಅದರಿಂದ ಮೂರು ಕುಲಗಳೂ ಉದ್ಧಾರಹೊಂದಿ, ವಿಷ್ಣುಲೋಕದಲ್ಲಿ ಆದರಿಸಲ್ಪಡುವನು.

***

## ತುಲಸೀಜಲದ ಸೇವನೆ

ಸಾಲಿಗ್ರಾಮ ಹಾಗೂ ಪ್ರತಿಮೆಗಳಿಗೆ ಅಭಿಷೇಕಮಾಡಿದ ಜಲವನ್ನು ತೀರ್ಥ ಎಂಬುದಾಗಿ ಸ್ವೀಕರಿಸುವುದು ಶಾಸ್ತ್ರದ ವಿಧಿ. ಗಂಗೆ ಮೊದಲಾದ ಪುಣ್ಯತೀರ್ಥಗಳಂತೂ ಸ್ವತಃ ತೀರ್ಥಗಳೆನ್ನಿಸಿವೆ. ಆದರೂ ಸಾಲಿಗ್ರಾಮಾದಿಗಳಿಗೆ ಅಭಿಷೇಕಮಾಡಿ, ತೀರ್ಥವನ್ನಾಗಿಸಿಯೇ, ಪುಣ್ಯತೀರ್ಥದ ಜಲವನ್ನು ಸ್ವೀಕರಿಸುವುದು ವಿಹಿತ. ಆದರೆ ತುಲಸಿಯ ಮಹಿಮೆ ವಿಶಿಷ್ಟವಾದುದು. ತುಲಸಿಯ ಬೇರಿಗೆ ಅಭಿಷೇಕಮಾಡುವ ನೀರು ಅತ್ಯಂತ ಪವಿತ್ರವೆನ್ನಿಸುವುದು. ಅದನ್ನು ಶಿರಸಾ ಧರಿಸುವುದಂತೂ ನಿತ್ಯವಿಧಿಯೇ. ಆಪತ್ಕಾಲದಲ್ಲಿ ವಿಶೇಷವಾಗಿ ಮಹಿಳೆಯರು ಸಾಲಿಗ್ರಾಮದ ತೀರ್ಥ ಅಲಭ್ಯವೆನ್ನಿಸಿದಾಗ ತುಲಸಿಯ ಮೂಲಕ್ಕೆ ಎರೆಯುವ ನೀರನ್ನು ಸಂಗ್ರಹಿಸಿ ತೀರ್ಥ ಎಂಬುದಾಗಿ ಸ್ವೀಕರಿಸುವ ಪದ್ಧತಿ ಸಂಪ್ರದಾಯಸ್ಥರಲ್ಲಿದೆ. ಅದಕ್ಕೆ ಮೂಲವಾದಂತಹ ಅನೇಕ ಪುರಾಣವಾಕ್ಯಗಳನ್ನು ಇಲ್ಲಿ ಕಾಣಬಹುದು. ಧಾತ್ರೀ, ಮಾವು ಮೊದಲಾದ ಬೇರೆ ಯಾವ ವೃಕ್ಷಗಳಿಗಾಗಲಿ, ಸಸ್ಯಗಳಿಗಾಗಲಿ,

ಈ ಬಗೆಯ ಮಹಿಮೆ ಹೇಳಲ್ಪಟ್ಟಿಲ್ಲ ಎಂಬುದು ಗಮನಿಸಬೇಕಾದ ಸಂಗತಿ. ತುಲಸಿಯ ಮೂಲದಲ್ಲಿ ಲಕ್ಷ್ಮೀನಾರಾಯಣರ ವಿಶೇಷ ಸನ್ನಿಧಾನ ಎಂಬುದೇ ಅದರ ಈ ರೀತಿಯಾದ ಹೆಚ್ಚಿನ ಮಹಿಮೆಗೆ ಮುಖ್ಯಕಾರಣ ಎಂದು ತಿಳಿಯಬೇಕು.

**ತುಲಸೀಮೂಲದೇಶೇಽಪಿ ಸ್ಥಿತಂ ವಾರಿ ದ್ವಿಜೋತ್ತಮ।**
**ಗೃಹ್ಣಾತಿ ಮಸ್ತಕೇ ಭಕ್ತ್ಯಾ ಪಾಪೋ ಯಾತಿ ಹರೇರ್ಗೃಹಮ್ ॥**

– ಪದ್ಮಪುರಾಣ (೩/೨೨/೨೬)

ತುಲಸಿಯ ಬೇರಿನ ಪ್ರದೇಶದಲ್ಲಿ ಇರುವ ನೀರನ್ನು ಭಕ್ತಿಯಿಂದ ತಲೆಯ ಮೇಲೆ ಧರಿಸುವ ಪಾಪಿಯೂ ಸಹ ವಿಷ್ಣುಲೋಕವನ್ನು ಸೇರುವನು.

**ತುಲಸೀಪತ್ರಗಲಿತಂ ಯಸ್ತೋಯಂ ಶಿರಸಾ ವಹೇತ್ ।**
**ಗಂಗಾಸ್ನಾನಮವಾಪ್ನೋತಿ ದಶಧೇನುಫಲಪ್ರದಮ್ ॥**

– ಪದ್ಮಪುರಾಣ (೫/೫೬/೩೨)

ತುಲಸಿಯ ಎಲೆಗಳಿಂದ ಸುರಿಯುವ ನೀರನ್ನು ಯಾವನು ಶಿರಸಾ ಧರಿಸುವನೋ ಅವನು ಹತ್ತು ಗೋದಾನದ ಫಲವನ್ನು ನೀಡುವ ಗಂಗಾಸ್ನಾನದ ಪುಣ್ಯವನ್ನು ಪಡೆಯುವನು.

**ತುಲಸೀಪತ್ರಗಲಿತಂ ಯಸ್ತೋಯಂ ಶಿರಸಾ ವಹೇತ್ ।**
**ಸರ್ವತೀರ್ಥೇಷು ಸ ಸ್ನಾತಶ್ಚಾಂತೇ ಯಾತಿ ಹರೇರ್ಗೃಹಮ್ ॥**

– ಪದ್ಮಪುರಾಣ (೩/೨೨/೨೭)

ತುಲಸಿಯ ಎಲೆಗಳಿಂದ ಸುರಿಯುವ ನೀರನ್ನು ಯಾವನು ಶಿರಸಾ ಧರಿಸುವನೋ ಅವನು ಸಕಲತೀರ್ಥಗಳಲ್ಲೂ ಸಹ ಸ್ನಾನಮಾಡಿದ ಪುಣ್ಯವಂತನಾಗಿ ಶ್ರೀಹರಿಯ ಮಂದಿರವನ್ನು ಸೇರುವನು.

**ನಿತ್ಯಂ ಯಸ್ತುಲಸೀತೋಯಂ ಭುಂಕ್ತೇ ಭಕ್ತ್ಯಾ ಚ ಯೋ ನರಃ।**
**ಸ ಏವ ಜೀವನ್ಮುಕ್ತಶ್ಚ ಗಂಗಾಸ್ನಾನಫಲಂ ಲಭೇತ್ ॥**

– ಬ್ರಹ್ಮವೈವರ್ತಪುರಾಣ (೨/೨೧/೪೪)

ಪ್ರತಿನಿತ್ಯದಲ್ಲೂ ಸಹ ಯಾವ ಮನುಷ್ಯನು ತುಲಸಿಯ ಜಲವನ್ನು ಭಕ್ತಿಯಿಂದ ಸ್ವೀಕರಿಸುವನೋ ಅವನು ಜೀವನ್ಮುಕ್ತನೆನ್ನಿಸಿ ಗಂಗಾಸ್ನಾನದ ಫಲವನ್ನು ಪಡೆದುಕೊಳ್ಳುವನು.

★★★

# ಶ್ರೀಹರಿಗೆ ತುಲಸೀಕಾಷ್ಠಚಂದನದ ಸಮರ್ಪಣೆ

ಶ್ರೀಗಂಧವನ್ನು ತೇಯ್ದು ಗಂಧೋದಕ ಎಂಬುದಾಗಿ ಅದನ್ನು ಪ್ರತಿನಿತ್ಯ ಸಾಲಿಗ್ರಾಮ, ಮೊದಲಾದ ಭಗವತ್ಪ್ರತೀಕಗಳಿಗೆ ಅಭಿಷೇಕಿಸುವುದು ನಿತ್ಯಪೂಜಾವಿಧಿಯ ಅತ್ಯಂತ ಮುಖ್ಯವಾದ ಅಂಗ. ಶ್ರೀಗಂಧವು ಹೀಗೆ ಶ್ರೀಹರಿಯ ಪೂಜೆಗೆ ಅಗತ್ಯವೆನ್ನಿಸಿದ ಸಾಧನಗಳಲ್ಲಿ ಒಂದಾಗಿ ಸೇರಿದೆ. ಆದರೆ ಅದರಂತೆ ಬೇರೆ ಯಾವುದೇ ವೃಕ್ಷದ ಕಾಷ್ಠವನ್ನು ತೇಯ್ದು ಗಂಧದಂತೆ ಲೇಪಿಸುವ, ಅಭಿಷೇಕಿಸುವ ವಿಧಿ ಕಂಡುಬರುವುದಿಲ್ಲ. ಅಂತಹ ಭಾಗ್ಯ ಇರುವುದು ತುಲಸಿಗೆ ಮಾತ್ರ. ತುಲಸಿಯ ಗಂಧವು ಭಗವಂತನಿಗೆ ಅತ್ಯಂತ ಪ್ರಿಯ. ಕಾರಣಾಂತರದಿಂದ ಶ್ರೀಗಂಧವು ಅಲಭ್ಯವಾದಾಗ ಗಂಧವಿಲ್ಲದೆಯೂ ಪೂಜೆ ನಡೆಸಬಹುದು. ಆದರೆ ತುಲಸಿಯ ಗಂಧ ಹಾಗಲ್ಲ. ಅದಿಲ್ಲದೆ ಶ್ರೀಹರಿಯ ಪೂಜೆ ನಡೆಯುವಂತೆಯೇ ಇಲ್ಲ. ಅಲ್ಲದೆ ಶ್ರೀಗಂಧದ ಗಂಧಕ್ಕೂ ಸಹ ತುಲಸಿಯ ಗಂಧ ಸೇರಿದಾಗಲೇ ಮಹತ್ತ್ವ. ಶ್ರೀಗಂಧಕ್ಕಿಂತ ಸುಲಭವಾಗಿ ದೊರಕುವ ತುಲಸಿಯ ಗಂಧ ಶ್ರೀಗಂಧಕ್ಕಿಂತ ಪವಿತ್ರವೆನ್ನಿಸಿರುವುದು ಅದರೊಳಗಿನ ಶ್ರೀಹರಿಯ ವಿಶೇಷ ಸನ್ನಿಧಾನಕ್ಕೆ ಗಮಕ ಎಂದು ತಿಳಿಯಬೇಕು.

**ನ ತೇನ ಸದೃಶೋ ಲೋಕೇ ವೈಷ್ಣವೋ ಭುವಿ ದೃಶ್ಯತೇ ।**
**ಯಃ ಪ್ರಯಚ್ಛತಿ ಕೃಷ್ಣಸ್ಯ ತುಲಸೀಕಾಷ್ಠಚಂದನಮ್ ॥**

– ಪದ್ಮಪುರಾಣ (೬/೨೪/೨೦)

ಯಾವನು ಶ್ರೀಕೃಷ್ಣನಿಗೆ ತುಲಸೀಕಾಷ್ಠದ ಗಂಧವನ್ನು ಸಮರ್ಪಿಸುವನೋ ಅಂತಹ ವೈಷ್ಣವನಿಗೆ ಸದೃಶನಾದವನು ಭೂಲೋಕದಲ್ಲಿ ಮತ್ತೊಬ್ಬನು ಕಾಣಲಾರ.

**ಸ ಜಾಯತೇ ಕೃಪಾಪಾತ್ರಂ ವಿಷ್ಣೋರ್ವಾಡವಸತ್ತಮ ।**
**ತುಲಸೀದಾರುಜಾತೇನ ಚಂದನೇನ ಕಲೌ ಹರಿಮ್ ॥**

– ಪದ್ಮಪುರಾಣ (೬/೨೪/೨೧)

ತುಲಸೀಕಾಷ್ಠದಿಂದ ಹುಟ್ಟುವ ಗಂಧವನ್ನು ಸಮರ್ಪಿಸುವವನು ಶ್ರೀಹರಿಗೆ ಕಲಿಯುಗದಲ್ಲಿ ವಿಶೇಷವಾಗಿ ಕೃಪಾಪಾತ್ರನೆನ್ನಿಸುವನು.

**ವಿಲಿಪ್ಯ ಭಕ್ತಿತೋ ನಿತ್ಯಂ ರಮತೇ ಹರಿಸನ್ನಿಧೌ ।**
**ತುಲಸೀಪಂಕಲಿಪ್ತಾಂಗಃ ಕುರುತೇ ವಿಷ್ಣುಪೂಜನಮ್ ॥**

– ಪದ್ಮಪುರಾಣ (೬/೨೪/೨೨)

ಭಕ್ತಿಯಿಂದ ಶ್ರೀಹರಿಯ ಸನ್ನಿಧಿಯಲ್ಲಿ ಸಮರ್ಪಿತವಾದ ಗಂಧವನ್ನು ತನ್ನ ಮೈಗೆ ಲೇಪಿಸಿಕೊಳ್ಳುವವನು, ವಿಷ್ಣುಪೂಜೆಯನ್ನು ಮಾಡುವವನು ಆವನ ಸನ್ನಿಧಿಯಲ್ಲಿ ವಿಹರಿಸುವನು.

**ಪೂಜಾ ಶತದಿನೈಕಾಹ್ನಾ ಲಭತೇ ಗೋಶತಂ ಫಲಮ್ ।**
**ವಿಲೇಪಾರ್ಥೇ ತು ಕೃಷ್ಣಸ್ಯ ತುಲಸೀಕಾಷ್ಠಚಂದನಮ್ ॥**

– ಪದ್ಮಪುರಾಣ (೬/೨೪/೨೩)

ಶ್ರೀಕೃಷ್ಣನಿಗೆ ಲೇಪಿಸಲೆಂದು ತುಲಸೀಕಾಷ್ಠದ ಚಂದನವನ್ನು ಸಿದ್ಧಪಡಿಸಿ, ಒಂದು ದಿನ ಮಾಡುವ ಪೂಜೆಯು ನೂರು ದಿನದ ಪೂಜೆಗೆ ಸಮ ಎನ್ನಿಸುವುದು ಹಾಗೂ ನೂರು ಗೋವುಗಳನ್ನು ದಾನಮಾಡಿದ ಪುಣ್ಯವನ್ನು ನೀಡುವುದು.

**ಮಂದಿರೇ ತಿಷ್ಠತೇ ಯಾವತ್ ತಾವತ್ ಪುಣ್ಯಫಲಂ ಶೃಣು ।**
**ತಿಲಪ್ರಸ್ಥಾಷ್ಟಕಂ ದತ್ವಾ ಯತ್ಪುಣ್ಯಂ ಪ್ರಾಪ್ನುಯಾಂತರಃ ।**
**ತತ್ಫಲಂ ಜಾಯತೇ ಪುಂಸಾಂ ಪ್ರಸಾದಾಚ್ಚಕ್ರಪಾಣಿನಃ ॥**

– ಪದ್ಮಪುರಾಣ (೬/೨೪/೨೪,೨೫)

★★★

# ನಿರ್ಮಾಲ್ಯತುಲಸೀಧಾರಣೆ

ಭಗವಂತನಿಗೆ ಸಮರ್ಪಿಸಿ ತೆಗೆದ, ತುಲಸಿ, ಹೂವು ಮೊದಲಾದ ಪದಾರ್ಥಗಳು ನಿರ್ಮಾಲ್ಯ ಎನ್ನಿಸುವವು. ನಿರ್ಮಾಲ್ಯ ಪುಷ್ಪಗಳು ಇತರ ದೇವತೆಗಳಿಗೆ ಸಮರ್ಪಿಸಲು, ತಾನು ಸ್ವೀಕರಿಸಲು ಅರ್ಹವೆನ್ನಿಸುವವು. ಆದರೆ ತುಲಸಿ ಆ ರೀತಿಯ ಸಮರ್ಪಣೆಗೆ ಮಾತ್ರವಲ್ಲದೆ, ದೇವತರ್ಪಣ, ಋಷಿತರ್ಪಣ, ಆಚಾರ್ಯತರ್ಪಣ ಹಾಗೂ ಪಿತೃತರ್ಪಣದಂತಹ ತರ್ಪಣಕಾರ್ಯಕ್ಕೂ, ವೈಶ್ವದೇವಾದಿ ಹೋಮಕಾರ್ಯಕ್ಕೂ ಉಪಯುಕ್ತವೆನ್ನಿಸುವುದು. ಮಾತ್ರವಲ್ಲದೆ ಕಿವಿಗಳಲ್ಲಿ ಧರಿಸುವುದಕ್ಕೂ ಸಹ ಉಪಯುಕ್ತ. ಕಿವಿಯಲ್ಲಿ ಹಾಗೆ ತುಲಸಿಯನ್ನು ಧರಿಸುವುದನ್ನು ಸ್ವತಃ ವೇದವ್ಯಾಸರೇ ತೋರಿಸುವ ಉಲ್ಲೇಖ [೧೮]ಸುಮಧ್ವವಿಜಯದಲ್ಲಿದೆ. ತುಲಸಿಯು ಶಾಸ್ತ್ರಾಲಾಪನದ ಸಂಕೇತ ಎಂದು [೧೯]ಹರಿಕಥಾಮೃತಸಾರದಲ್ಲಿದೆ. ಆದರಿಂದ ಕರ್ಣದಲ್ಲಿ ನಿರ್ಮಾಲ್ಯತುಲಸೀ ಧಾರಣೆಯು ಸದಾ ಶಾಸ್ತ್ರಶ್ರವಣದ ಸಂಕೇತ ಎಂಬ ವಿಶೇಷಾರ್ಥವನ್ನು ಸೂಚಿಸುವುದು. ಬೇರೆ ಯಾವುದೇ ನಿರ್ಮಾಲ್ಯಕ್ಕೂ ಸಹ ಇಂತಹ ಮಹತ್ತ್ವವನ್ನು ಶಾಸ್ತ್ರಗಳು ತಿಳಿಸಿಲ್ಲ ಎಂಬುದು ಸಹ ಗಮನಿಸಬೇಕಾದ ಸಂಗತಿ.

---

೧೮ ಉಪಕರ್ಣಮಮುಷ್ಯ ಭಾಸಿತಾ ತುಲಸೀ ಮಂತ್ರಯತೀವ ಲಾಲಿತಾ ।
ಮಮ ನಾಥ ಪದಂ ನ ಮತ್ಸರಾಜ್ಜಲಜಾದ್ಯಾನಿ ಹರೇಯುರಿತ್ಯಲಮ್ ॥

– ಸುಮಧ್ವವಿಜಯ (೭/೪೨)

೧೯ ಪಾಪಕರ್ಮವು ಪಾದುಕೆಗಳನುಲೇಪನವು ಸತ್ಪುಣ್ಯ ಶಾಸ್ತ್ರಾಲಾಪನವೆ ಶ್ರೀತುಲಸಿ
ಸುಮನೋವೃತ್ತಿಗಳೆ ಸುಮನ । ಕೋಪ ಧೂಪವು ಭಕ್ತಿ ಭೂಷಣ
ವ್ಯಾಪಿಸಿದ ಸದ್ಬುದ್ಧಿ ಛತ್ರವು ದೀಪವೇ ಸುಜ್ಞಾನ ಆರಾರ್ತಿಗಳೆ ಗುಣಕಥನ ॥

– ಶ್ರೀಜಗನ್ನಾಥದಾಸರ ಹರಿಕಥಾಮೃತಸಾರ (೫/೧೫)

**ಪೂಜಯಿತ್ವಾ ಹರಿಂ ದೇವಂ ನಿರ್ಮಾಲ್ಯಂ ತುಲಸೀದಲಮ್ ।**
**ಧಾರಯೇದ್ಯಃ ಸ್ವಶೀರ್ಷೇ ತು ಪಾಪಾತ್ ಪೂತೋ ದಿವಂ ವ್ರಜೇತ್ ॥**
– ಪದ್ಮಪುರಾಣ (೫/೫೮/೧೩೦)

ದೇವನಾದ ಶ್ರೀಹರಿಯನ್ನು ಪೂಜಿಸಿ, ನಿರ್ಮಾಲ್ಯತುಲಸೀದಳವನ್ನು ತನ್ನ ತಲೆಯಲ್ಲಿ ಧರಿಸಬೇಕು. ಅದರಿಂದ ಪಾಪದಿಂದ ಬಿಡುಗಡೆಹೊಂದಿ ಸ್ವರ್ಗಕ್ಕೆ ತೆರಳುವನು.

**ತಸ್ಮಾದಪರ್ಣಾ ವಿಖ್ಯಾತಾ ಕಾಮಾಕ್ಷೀ ಶಂಭುವಲ್ಲಭಾ ।**
**ವಿವಿಧೈರುಪಚಾರೈಶ್ಚ ಘೃತದೀಪೈರ್ವಿಶೇಷತಃ ॥** – ಸ್ಕಂದಪುರಾಣ (೮೨/೪೨)

ತುಲಸಿಯ ದಳಗಳನ್ನು ಯಾವುದೇ ಕಾರಣಕ್ಕೂ ಸಹ ನೆಲದಲ್ಲಿ ಬೀಳದಂತೆ ನೋಡಿಕೊಳ್ಳಬೇಕು. ಪಾರ್ವತೀದೇವಿಯು ಆ ರೀತಿಯಾಗಿ ತುಲಸಿಯನ್ನು ಒಂದು ದಳವನ್ನು ಸಹ ನೆಲಕ್ಕೆ ಬೀಳದಂತೆ ಹಾಗೂ ವ್ಯರ್ಥವಾಗದಂತೆ ನೋಡಿಕೊಂಡದ್ದರಿಂದ[೨೦] ಅಪರ್ಣಾ ಎಂಬ ಹೆಸರನ್ನು ಹೊಂದಿದಳು.

**ಜನ್ಮತ್ರಯಾರ್ಜಿತಂ ಪಾಪಂ ಹಿತ್ವಾ ಸ್ವರ್ಗೇ ಮಹೀಯತೇ ।**
**ಯೋ ದದ್ಯಾತ್ ತುಲಸೀಪತ್ರಂ ಭಕ್ತ್ಯಾ ವಿಷ್ಣೋಃ ಸಮಾಹಿತಃ ॥**
– ವಿಷ್ಣುಧರ್ಮೋತ್ತರ (೧೫/೧೧)

ಯಾವನು ಶಾಂತಚಿತ್ತದಿಂದ ಭಕ್ತಿಪೂರ್ವಕವಾಗಿ ವಿಷ್ಣುವಿಗೆ ತುಲಸೀಪತ್ರವನ್ನು ಸಮರ್ಪಿಸುವನೋ ಅವನು ಮೂರು ಜನ್ಮಗಳಲ್ಲಿ ಒದಗಿದ ಪಾಪವನ್ನು ಕಳೆದುಕೊಂಡು ಸ್ವರ್ಗಲೋಕದಲ್ಲಿ ಆದರಿಸಲ್ಪಡುವನು.

**ಹರಯೇ ತುಲಸೀಪತ್ರಂ ಧಾರಯನ್ ಮತಿಮಾನ್ ನರಃ ।**
**ಸ ತು ಬ್ರಹ್ಮಪುರಂ ಪ್ರಾಪ್ಯ ಮೋದತೇ ಬ್ರಹ್ಮವಚ್ಚಿರಮ್ ॥**
– ವಿಷ್ಣುಧರ್ಮೋತ್ತರ (೧೫/೧೦)

ಶ್ರೀಹರಿಪ್ರೀತಿಗೆಂದು ತುಲಸಿಯ ಪತ್ರವನ್ನು ಧರಿಸುವ ಮಾನವನು ಬ್ರಹ್ಮಲೋಕವನ್ನು ಸೇರಿ ಅಲ್ಲಿ ಬ್ರಹ್ಮನಂತೆ ಚಿರಕಾಲ ನೆಲೆಸುವನು.

**ವಿಷ್ಣುಪಾದಾಬ್ಜಸಂಲಗ್ನಾಮಹೋರಾತ್ರಾರ್ಪಿತಾಂ ಶುಭಾಮ್ ।**
**ತುಲಸೀಂ ಧಾರಯೇದ್ಯಸ್ತು ತಸ್ಯ ಪುಣ್ಯಮನಂತಕಮ್ ॥** – ವಿಷ್ಣುಧರ್ಮೋತ್ತರ

---

[೨೦] ಹಿಮಾಲಪರ್ವತದ ಪುತ್ರಿಯಾದ ಪಾರ್ವತಿಯು ಶಿವನನ್ನು ಪತಿಯಾಗಬಯಸಿ, ಒಂದು ಎಲೆಯನ್ನು ಸಹ ಸೇವಿಸದೆ , ಸಂಪೂರ್ಣ ನಿರಾಹಾರದಿಂದ ತಪಸ್ಸನ್ನು ಮಾಡಿದ್ದರ ಫಲವಾಗಿ ಅವರಿಗೆ ಅಪರ್ಣಾ ಎಂಬ ಹೆಸರು ಬಂದಿತು ಎಂಬುದಾಗಿ ಹರಿವಂಶದಲ್ಲಿ ನಿರೂಪಿತವಾಗಿದೆ ಹರಿವಂಶ (೧/೧೮/೧೭). ಪಾರ್ವತಿಗೆ ಅಪರ್ಣಾ ಎಂಬ ಹೆಸರು ಬರಲು ಇದೂ ಸಹ ಇನ್ನೊಂದು ಕಾರಣ ಎಂದು ತಿಳಿದಾಗ ವಿರೋಧಕ್ಕೆ ಅವಕಾಶವಿರುವುದಿಲ್ಲ.

ಶ್ರೀವಿಷ್ಣುಪಾದಗಳಿಗೆ ಸಮರ್ಪಿತವಾದ ತುಲಸಿಯು ಇಡೀ ದಿನ ಶ್ರೀಹರಿಯ ಮೈಮೇಲೆ ನೆಲೆಸಿರಬೇಕು. ಅಂತಹ ತುಲಸಿಯನ್ನು ಧರಿಸಿದವರಿಗೆ ಬರುವ ಪುಣ್ಯ ಅನಂತವಾದುದು.

★★★

## ತುಲಸೀಮಾಲಾಧಾರಣೆ

ಸಾಮಾನ್ಯವಾಗಿ ಮಣಿಗಳನ್ನು ಮಾಲೆಯನ್ನಾಗಿ ಮಾಡಿಕೊಂಡು ಕೊರಳಲ್ಲಿ ಧರಿಸುವುದು ಪದ್ಧತಿ. ಅಂತಹ ಮಣಿಗಳಲ್ಲಿ ನವರತ್ನಗಳು ಮೊದಲಾದವುಗಳು ಸೇರಿರುತ್ತವೆ. ಆದರೆ ಒಂದು ಗಿಡದ ಕಾಂಡಗಳನ್ನು ಸಹ ಒಣಗಿಸಿ, ಮಣಿಗಳನ್ನಾಗಿ ಮಾಡಿಕೊಂಡು ಅವುಗಳ ಮಾಲೆಯನ್ನು ಕೊರಳಲ್ಲಿ ಧರಿಸುವುದು ವಿಸ್ಮಯದ ಸಂಗತಿ. ಈ ಹಿರಿಮೆ ಇರುವುದು ತುಲಸಿಗೆ ಮಾತ್ರ. ತುಲಸಿಯ ಕಾಷ್ಠದಿಂದ ಮಣಿಗಳನ್ನು ಮಾಡಿ, ಅವುಗಳ ಮಾಲೆಯನ್ನು ಶ್ರೀಹರಿಗೆ ಸಮರ್ಪಿಸಿ ಆ ಬಳಿಕ ಕೊರಳಲ್ಲಿ ಧರಿಸುವುದು ವೈಷ್ಣವನ ಮುಖ್ಯ ಕರ್ತವ್ಯಗಳಲ್ಲೊಂದಾಗಿದೆ. ತುಲಸೀಮಾಲೆಯು ಪಾವಿತ್ರ್ಯಕ್ಕೆ ಕಾರಣ. ಅದನ್ನು ಕೊರಳಲ್ಲಿ ಧರಿಸಿದವರು ಕಾರಣಾಂತರದಿಂದ ಅಪವಿತ್ರ್ಯವಸ್ತುಗಳನ್ನು ತಿಳಿದೋ ತಿಳಿಯದೆಯೋ ಸ್ಪರ್ಶಿಸಿದರೂ ಅದರಿಂದ ಒದಗುವ ದುಷ್ಪರಿಣಾಮಕ್ಕೆ ಗುರಿಯಾಗನು. ತುಲಸಿಮಾಲೆಯು ಧಾರಣೆಗೆ ಮಾತ್ರವಲ್ಲದೆ ಜಪಕ್ಕೂ ಸಹ ವಿಹಿತವಾಗಿದೆ. ಸಂಖ್ಯೆಯ ಗಣನೆಗೆ ಅನುಕೂಲಿಸುವುದು ಮಾತ್ರವಲ್ಲದೆ, ಸ್ಪರ್ಶ ಮೊದಲಾದವುಗಳಿಂದ ಮಂಗಳಕ್ಕೂ ಕಾರಣವಾಗುವುದು ತುಲಸೀಮಾಲೆಯ ಹಿರಿಮೆ. ಕಮಲಾಕ್ಷ ಮಾಲೆಯ ಧಾರಣೆಯು ವಿಹಿತವಾಗಿದ್ದರೂ ಅದರಿಂದ ಮಾಡಲ್ಪಟ್ಟ ಕಾಷ್ಠದ ಮಣಿಗಳ ಮಾಲೆಯಲ್ಲ; ಧಾತ್ರೀ ಮಾಲೆಯು ಸಹ ವಿಹಿತವಾಗಿದ್ದರೂ ಅದು ಧಾತ್ರಿಫಲಗಳ ಮಾಲೆಯೇ ಹೊರತು ಧಾತ್ರೀಕಾಷ್ಠದ ಮಾಲೆಯಲ್ಲ. ಆದರೆ ತುಲಸೀಮಾಲೆಯು ಮಾತ್ರ ತುಲಸೀಕಾಷ್ಠದ್ದೇ ಆಗಿರುವುದು ವಿಶೇಷ. ಕಮಲಾಕ್ಷ ಮೊದಲಾದ ಮಾಲೆಗಳಿಗಿಂತ ಜಪಕ್ಕೆ ಹೆಚ್ಚು ಪ್ರಶಸ್ತವೆನ್ನಿಸಿರುವುದು ತುಲಸೀಮಣಿಗಳ ಮಾಲೆಯೇ. ತುಲಸೀಮಾಲೆಯು ಜಪಕ್ಕೆ ಮಾತ್ರವಲ್ಲದೆ ಧಾರಣೆಗೂ ವಿಹಿತವಾಗಿರುವುದು. ಬೇರೆ ಯಾವ ಮಾಲೆಗಳನ್ನು ಸಹ ದೇವಪೂಜೆ, ಜಪ ಮೊದಲಾದ ಸಂದರ್ಭಗಳ ಹೊರತು ಸದಾ ಧರಿಸುವಂತಿಲ್ಲ; ತುಲಸೀಮಾಲೆ ಹಾಗಲ್ಲ. ಅದರ ಧಾರಣೆ ಯಜ್ಞೋಪವೀತದಂತೆ ಸದಾ ವಿಹಿತ. ಮಲಮೂತ್ರ ವಿಸರ್ಜನೆ ಮೊದಲಾದ ಅಶುದ್ಧಿಯ ಸಂದರ್ಭದಲ್ಲೂ ಸಹ ತುಲಸೀಮಾಲೆಯನ್ನು ಕೊರಳಿನಿಂದ ತೆಗೆದಿಡುವ ಅಗತ್ಯವಿಲ್ಲ. ಇಂತಹ ಹಿರಿಮೆಯನ್ನು ಬೇರಾವ ಮಾಲೆಗಳೂ ಹೊಂದಿಲ್ಲ. ತುಲಸೀಮಾಲೆಗೆ ಮೈಲಿಗೆ ಎಂಬುದೇ ಇಲ್ಲ ಎಂಬುದು ಮಹಾವಿಶೇಷ.

**ಶಂಖಂ ಚಕ್ರಂ ಗದಾಂ ಪದ್ಮಂ ನಿತ್ಯಂ ವೈ ಧಾರಯೇತ್ ತು ಯಃ।**
**ತುಲಸೀಕಾಷ್ಠಜಾಂ ಮಾಲಾಂ ಕಂಠೇ ವೈ ಧಾರಯೇತ್ ತು ಯಃ॥**

– ಪದ್ಮಪುರಾಣ (೬/೬೬/೫)

ಶಂಖ, ಚಕ್ರ, ಗದಾ, ಪದ್ಮಗಳನ್ನು ನಿತ್ಯದಲ್ಲಿ ಧರಿಸುವಂತೆ ತುಲಸೀಕಾಷ್ಠದ ಮಾಲೆಗಳನ್ನು ಸಹ ನಿತ್ಯದಲ್ಲಿಯೇ ಧರಿಸತಕ್ಕದ್ದು.

**ತುಲಸೀಕಾಷ್ಠಜಾಂ ಮಾಲಾಂ ಕಂಠೇ ವೈ ಧಾರಯೇತ್ ತು ಯಃ।**
**ಧರ್ಮಾಧರ್ಮಂ ತು ಜಾನಾತಿ ಸ ಚ ವೈಷ್ಣವ ಉಚ್ಯತೇ ॥**

– ಪದ್ಮಪುರಾಣ (೬/೬೬/೬)

ಧರ್ಮಾಧರ್ಮಗಳನ್ನು ತಿಳಿದು ಯಾವನು ತುಲಸೀಕಾಷ್ಠದ ಮಾಲೆಯನ್ನು ಕಂಠದಲ್ಲಿ ಧರಿಸುವನೋ ಅವನು ವೈಷ್ಣವನೆನ್ನಿಸುವನು.

**ತುಲಸೀಕಾಷ್ಠನಿರ್ಮಾಣಮಾಲಾಂ ಗೃಹ್ಣಾತಿ ಯೋ ನರಃ।**
**ಪದೇ ಪದೇಽಶ್ವಮೇಧಸ್ಯ ಲಭತೇ ನಿಶ್ಚಿತಂ ಫಲಮ್ ॥**

– ಬ್ರಹ್ಮವೈವರ್ತಪುರಾಣ (೨/೨೧/೪೭)

ತುಲಸೀಕಾಷ್ಠದಿಂದ ನಿರ್ಮಾಣವಾದ ಮಾಲೆಯನ್ನು ಯಾವನು ಕೊರಳಲ್ಲಿ ಧರಿಸುವನೋ ಅವನು ನಿಶ್ಚಿತವಾಗಿ ಹೆಜ್ಜೆ ಹೆಜ್ಜೆಗೂ ಅಶ್ವಮೇಧಯಾಗದ ಫಲವನ್ನು ಪಡೆದುಕೊಳ್ಳುವನು.

**[೨೧]ತುಲಸೀಕಾಷ್ಠಮಾಲಾಂ ತು ಕಂಠಸ್ಥಾಂ ವಹತೇ ತು ಯಃ।**
**ಅಪ್ಯಶೌಚೋಽಪ್ಯನಾಚಾರೋ ಭಕ್ತ್ಯಾ ಯಾತಿ ಹರೇರ್ಗೃಹಮ್ ॥**

– ಪದ್ಮಪುರಾಣ (೩/೨೨/೧೦)

ತುಲಸೀಕಾಷ್ಠದ ಮಾಲೆಯನ್ನು ಯಾವನು ಭಕ್ತಿಯಿಂದ ಕೊರಳಲ್ಲಿ ಧರಿಸುವನೋ ಅವನು ಅಶುಚಿಯಾಗಿದ್ದರೂ ಆಚಾರಹೀನನಾಗಿದ್ದರೂ ಶ್ರೀಹರಿಯ ಮಂದಿರವನ್ನು ಸೇರುವನು.

**ನಿವೇದ್ಯ ಕೇಶವೇ ಮಾಲಾಂ ತುಲಸೀಕಾಷ್ಠಸಂಭವಾಮ್ ।**
**ವಹತೇ ಯೋ ನರೋ ಭಕ್ತ್ಯಾ ತಸ್ಯ ವೈ ನಾಸ್ತಿ ಪಾತಕಮ್ ॥**

– ಪದ್ಮಪುರಾಣ, ಬ್ರಹ್ಮಖಂಡ (೩/೨೨/೧೭)

ಭಕ್ತಿಯಿಂದ ಶ್ರೀಹರಿಗೆ ತುಲಸೀಕಾಷ್ಠದ ಮಾಲೆಯನ್ನು ಸಮರ್ಪಿಸಿ ಆ ಬಳಿಕ ಕೊರಳಲ್ಲಿ ಧರಿಸುವ ಮಾನವನಿಗೆ ಪಾತಕವೇ ಇರದು.

---

೨೧ ತುಲಸೀಕಾಷ್ಠಜಾಂ ಮಾಲಾಂ ಕಂಠಸ್ಥಾಂ ವಹತೇ ತು ಯಃ।
ಅಪ್ಯಶೌಚೋಽಪ್ಯನಾಚಾರೋ ಮಾಮೇವೈತಿ ನ ಸಂಶಯಃ॥ – ಸ್ಕಂದಪುರಾಣ

ಶ್ರೀವಿಷ್ಣುಪಾದಗಳಿಗೆ ಸಮರ್ಪಿತವಾದ ತುಲಸಿಯು ಇಡೀ ದಿನ ಶ್ರೀಹರಿಯ ಮೈಮೇಲೆ ನೆಲೆಸಿರಬೇಕು. ಅಂತಹ ತುಲಸಿಯನ್ನು ಧರಿಸಿದವರಿಗೆ ಬರುವ ಪುಣ್ಯ ಅನಂತವಾದುದು.

★★★

# ತುಲಸೀಮಾಲಾಧಾರಣೆ

ಸಾಮಾನ್ಯವಾಗಿ ಮಣಿಗಳನ್ನು ಮಾಲೆಯನ್ನಾಗಿ ಮಾಡಿಕೊಂಡು ಕೊರಳಲ್ಲಿ ಧರಿಸುವುದು ಪದ್ಧತಿ. ಅಂತಹ ಮಣಿಗಳಲ್ಲಿ ನವರತ್ನಗಳು ಮೊದಲಾದವುಗಳು ಸೇರಿರುತ್ತವೆ. ಆದರೆ ಒಂದು ಗಿಡದ ಕಾಂಡಗಳನ್ನು ಸಹ ಒಣಗಿಸಿ, ಮಣಿಗಳನ್ನಾಗಿ ಮಾಡಿಕೊಂಡು ಅವುಗಳ ಮಾಲೆಯನ್ನು ಕೊರಳಲ್ಲಿ ಧರಿಸುವುದು ವಿಸ್ಮಯದ ಸಂಗತಿ. ಈ ಹಿರಿಮೆ ಇರುವುದು ತುಲಸಿಗೆ ಮಾತ್ರ. ತುಲಸಿಯ ಕಾಷ್ಠದಿಂದ ಮಣಿಗಳನ್ನು ಮಾಡಿ, ಅವುಗಳ ಮಾಲೆಯನ್ನು ಶ್ರೀಹರಿಗೆ ಸಮರ್ಪಿಸಿ ಆ ಬಳಿಕ ಕೊರಳಲ್ಲಿ ಧರಿಸುವುದು ವೈಷ್ಣವನ ಮುಖ್ಯ ಕರ್ತವ್ಯಗಳಲ್ಲೊಂದಾಗಿದೆ. ತುಲಸೀಮಾಲೆಯು ಪಾವಿತ್ರ್ಯಕ್ಕೆ ಕಾರಣ. ಅದನ್ನು ಕೊರಳಲ್ಲಿ ಧರಿಸಿದವರು ಕಾರಣಾಂತರದಿಂದ ಅಪವಿತ್ರ್ಯವಸ್ತುಗಳನ್ನು ತಿಳಿದೋ ತಿಳಿಯದೆಯೋ ಸ್ಪರ್ಶಿಸಿದರೂ ಅದರಿಂದ ಒದಗುವ ದುಷ್ಪರಿಣಾಮಕ್ಕೆ ಗುರಿಯಾಗನು. ತುಲಸಿಮಾಲೆಯು ಧಾರಣೆಗೆ ಮಾತ್ರವಲ್ಲದೆ ಜಪಕ್ಕೂ ಸಹ ವಿಹಿತವಾಗಿದೆ. ಸಂಖ್ಯೆಯ ಗಣನೆಗೆ ಅನುಕೂಲಿಸುವುದು ಮಾತ್ರವಲ್ಲದೆ, ಸ್ಪರ್ಶ ಮೊದಲಾದವುಗಳಿಂದ ಮಂಗಳಕ್ಕೂ ಕಾರಣವಾಗುವುದು ತುಲಸೀಮಾಲೆಯ ಹಿರಿಮೆ. ಕಮಲಾಕ್ಷ ಮಾಲೆಯ ಧಾರಣೆಯು ವಿಹಿತವಾಗಿದ್ದರೂ ಅದರಿಂದ ಮಾಡಲ್ಪಟ್ಟ ಕಾಷ್ಠದ ಮಣಿಗಳ ಮಾಲೆಯಲ್ಲ; ಧಾತ್ರೀ ಮಾಲೆಯು ಸಹ ವಿಹಿತವಾಗಿದ್ದರೂ ಅದು ಧಾತ್ರಿಫಲಗಳ ಮಾಲೆಯೇ ಹೊರತು ಧಾತ್ರೀಕಾಷ್ಠದ ಮಾಲೆಯಲ್ಲ. ಆದರೆ ತುಲಸೀಮಾಲೆಯು ಮಾತ್ರ ತುಲಸೀಕಾಷ್ಠದ್ದೇ ಆಗಿರುವುದು ವಿಶೇಷ. ಕಮಲಾಕ್ಷ ಮೊದಲಾದ ಮಾಲೆಗಳಿಗಿಂತ ಜಪಕ್ಕೆ ಹೆಚ್ಚು ಪ್ರಶಸ್ತವೆನ್ನಿಸಿರುವುದು ತುಲಸೀಮಣಿಗಳ ಮಾಲೆಯೇ. ತುಲಸೀಮಾಲೆಯು ಜಪಕ್ಕೆ ಮಾತ್ರವಲ್ಲದೆ ಧಾರಣೆಗೂ ವಿಹಿತವಾಗಿರುವುದು. ಬೇರೆ ಯಾವ ಮಾಲೆಗಳನ್ನು ಸಹ ದೇವಪೂಜೆ, ಜಪ ಮೊದಲಾದ ಸಂದರ್ಭಗಳ ಹೊರತು ಸದಾ ಧರಿಸುವಂತಿಲ್ಲ. ತುಲಸೀಮಾಲೆ ಹಾಗಲ್ಲ. ಅದರ ಧಾರಣೆ ಯಜ್ಞೋಪವೀತದಂತೆ ಸದಾ ವಿಹಿತ. ಮಲಮೂತ್ರ ವಿಸರ್ಜನೆ ಮೊದಲಾದ ಅಶುದ್ಧಿಯ ಸಂದರ್ಭದಲ್ಲೂ ಸಹ ತುಲಸೀಮಾಲೆಯನ್ನು ಕೊರಳಿನಿಂದ ತೆಗೆದಿಡುವ ಅಗತ್ಯವಿಲ್ಲ. ಇಂತಹ ಹಿರಿಮೆಯನ್ನು ಬೇರಾವ ಮಾಲೆಗಳೂ ಹೊಂದಿಲ್ಲ. ತುಲಸೀಮಾಲೆಗೆ ಮೈಲಿಗೆ ಎಂಬುದೇ ಇಲ್ಲ ಎಂಬುದು ಮಹಾವಿಶೇಷ.

**ಶಂಖಂ ಚಕ್ರಂ ಗದಾಂ ಪದ್ಮಂ ನಿತ್ಯಂ ವೈ ಧಾರಯೇತ್ ತು ಯಃ ।**
**ತುಲಸೀಕಾಷ್ಠಜಾಂ ಮಾಲಾಂ ಕಂಠೇ ವೈ ಧಾರಯೇತ್ ತು ಯಃ ॥**

– ಪದ್ಮಪುರಾಣ (೬/೬೬/೫)

ಶಂಖ, ಚಕ್ರ, ಗದಾ, ಪದ್ಮಗಳನ್ನು ನಿತ್ಯದಲ್ಲಿ ಧರಿಸುವಂತೆ ತುಲಸೀಕಾಷ್ಠದ ಮಾಲೆಗಳನ್ನು ಸಹ ನಿತ್ಯದಲ್ಲಿಯೇ ಧರಿಸತಕ್ಕದ್ದು.

**ತುಲಸೀಕಾಷ್ಠಜಾಂ ಮಾಲಾಂ ಕಂಠೇ ವೈ ಧಾರಯೇತ್ ತು ಯಃ।**
**ಧರ್ಮಾಧರ್ಮಂ ತು ಜಾನಾತಿ ಸ ಚ ವೈಷ್ಣವ ಉಚ್ಯತೇ ॥**

– ಪದ್ಮಪುರಾಣ (೬/೬೬/೬)

ಧರ್ಮಾಧರ್ಮಗಳನ್ನು ತಿಳಿದು ಯಾವನು ತುಲಸೀಕಾಷ್ಠದ ಮಾಲೆಯನ್ನು ಕಂಠದಲ್ಲಿ ಧರಿಸುವನೋ ಅವನು ವೈಷ್ಣವನೆನ್ನಿಸುವನು.

**ತುಲಸೀಕಾಷ್ಠನಿರ್ಮಾಣಮಾಲಾಂ ಗೃಹ್ಣಾತಿ ಯೋ ನರಃ।**
**ಪದೇ ಪದೇಽಶ್ವಮೇಧಸ್ಯ ಲಭತೇ ನಿಶ್ಚಿತಂ ಫಲಮ್ ॥**

– ಬ್ರಹ್ಮವೈವರ್ತಪುರಾಣ (೨/೨೧/೪೭)

ತುಲಸೀಕಾಷ್ಠದಿಂದ ನಿರ್ಮಾಣವಾದ ಮಾಲೆಯನ್ನು ಯಾವನು ಕೊರಳಲ್ಲಿ ಧರಿಸುವನೋ ಅವನು ನಿಶ್ಚಿತವಾಗಿ ಹೆಜ್ಜೆ ಹೆಜ್ಜೆಗೂ ಅಶ್ವಮೇಧಯಾಗದ ಫಲವನ್ನು ಪಡೆದುಕೊಳ್ಳುವನು.

**[೨೧]ತುಲಸೀಕಾಷ್ಠಮಾಲಾಂ ತು ಕಂಠಸ್ಥಾಂ ವಹತೇ ತು ಯಃ।**
**ಅಪ್ಯಶೌಚೋಽಪ್ಯನಾಚಾರೋ ಭಕ್ತ್ಯಾ ಯಾತಿ ಹರೇರ್ಗೃಹಮ್ ॥**

– ಪದ್ಮಪುರಾಣ (೩/೨೨/೧೦)

ತುಲಸೀಕಾಷ್ಠದ ಮಾಲೆಯನ್ನು ಯಾವನು ಭಕ್ತಿಯಿಂದ ಕೊರಳಲ್ಲಿ ಧರಿಸುವನೋ ಅವನು ಅಶುಚಿಯಾಗಿದ್ದರೂ ಆಚಾರಹೀನನಾಗಿದ್ದರೂ ಶ್ರೀಹರಿಯ ಮಂದಿರವನ್ನು ಸೇರುವನು.

**ನಿವೇದ್ಯ ಕೇಶವೇ ಮಾಲಾಂ ತುಲಸೀಕಾಷ್ಠಸಂಭವಾಮ್।**
**ವಹತೇ ಯೋ ನರೋ ಭಕ್ತ್ಯಾ ತಸ್ಯ ವೈ ನಾಸ್ತಿ ಪಾತಕಮ್ ॥**

– ಪದ್ಮಪುರಾಣ, ಬ್ರಹ್ಮಖಂಡ (೩/೨೨/೧೭)

ಭಕ್ತಿಯಿಂದ ಶ್ರೀಹರಿಗೆ ತುಲಸೀಕಾಷ್ಠದ ಮಾಲೆಯನ್ನು ಸಮರ್ಪಿಸಿ ಆ ಬಳಿಕ ಕೊರಳಲ್ಲಿ ಧರಿಸುವ ಮಾನವನಿಗೆ ಪಾತಕವೇ ಇರದು.

---

೨೧ ತುಲಸೀಕಾಷ್ಠಜಾಂ ಮಾಲಾಂ ಕಂಠಸ್ಥಾಂ ವಹತೇ ತು ಯಃ।
ಅಪ್ಯಶೌಚೋಽಪ್ಯನಾಚಾರೋ ಮಾಮೇವೈತಿ ನ ಸಂಶಯಃ॥ – ಸ್ಕಂದಪುರಾಣ

**ತುಲಸೀಕಾಷ್ಠಮಾಲಾಂ ತು ಪ್ರೇತರಾಜಸ್ಯ ದೂತಕಾಃ।**
**ದೃಷ್ಟ್ವಾ ನಶ್ಯಂತಿ ದೂರೇಣ ವಾತೋದ್ಧೂತಂ ಯಥಾ ದಲಮ್ ॥**

– ಪದ್ಮಪುರಾಣ, ಬ್ರಹ್ಮಖಂಡ (೩/೨೨/೧೮)

ತುಲಸೀಕಾಷ್ಠದ ಮಾಲೆಯನ್ನು ಕೊರಳಲ್ಲಿ ಕಾಣುತ್ತಲೇ ಯಮದೇವರ ದೂತರುಗಳು ದೂರಕ್ಕೆ ಸಾಗಿಬಿಡುವರು.

**ಯಃ ಪುನಸ್ತುಲಸೀಮಾಲಾಂ ಕಂಠೇ ಕೃತ್ವಾ ಜನಾರ್ದನಮ್ ।**
**ಪೂಜಯೇತ್ ಪುಣ್ಯಮಾಪ್ನೋತಿ ಪ್ರತಿಪುಣ್ಯಂ ಗವಾಯುತಮ್ ॥**

– ಪದ್ಮಪುರಾಣ, ಬ್ರಹ್ಮಖಂಡ (೩/೨೨/೧೩)

ಯಾವನು ತುಲಸೀಕಾಷ್ಠದ ಮಾಲೆಯನ್ನು ಕೊರಳಲ್ಲಿ ಧರಿಸಿ ಜನಾರ್ದನನಾದ ಶ್ರೀಹರಿಯನ್ನು ಪೂಜಿಸುವನೋ ಅವನು ಹತ್ತುಸಾವಿರ ಗೋವುಗಳನ್ನು ದಾನಮಾಡಿದ ಪುಣ್ಯವನ್ನು ಪಡೆದುಕೊಳ್ಳುವನು.

**ಧಾರಯಂತಿ ನ ಯೇ ಮಾಲಾಂ ಹೈತುಕಾಃ ಪಾಪಬುದ್ಧಯಃ।**
**ನರಕಾನ್ನ ನಿವರ್ತಂತೇ ದಗ್ಧಾಃ ಕೋಪಾಗ್ನಿನಾ ಹರೇಃ॥**

– ಪದ್ಮಪುರಾಣ (೩/೨೨/೧೪)

ಯಾರು ಕುಯುಕ್ತಿಯನ್ನು ಮುಂದಿರಿಸಿ, ತುಲಸೀಮಾಲೆಯನ್ನು ಕೊರಳಲ್ಲಿ ಧರಿಸುವುದಿಲ್ಲವೋ ಅಂತಹ ಪಾಪಬುದ್ಧಿಯ ಜನರು ಶ್ರೀಹರಿಯ ಕೋಪಾಗ್ನಿಗೆ ಬೂದಿ-ಯಾಗುವರು; ನರಕದಿಂದ ಮರಳಲಾರರು ಸಹ.

**ಸಾತ್ವತೈಸ್ತುಲಸೀಕಾಷ್ಠಮಾಲಾ ಕುಂಜಸಮುದ್ಭವಾ।**
**ಧಾರ್ಯಾ ನಿತ್ಯಂ ಪ್ರಯತ್ನೇನ ತ್ವೇತದ್ ಭಕ್ತಸ್ಯ ಲಕ್ಷಣಮ್ ॥**

– ಬ್ರಹ್ಮವೈವರ್ತಪುರಾಣ (೨)

ವೈಷ್ಣವರು ನಿತ್ಯದಲ್ಲೂ ತುಲಸೀಕಾಷ್ಠದ ಮಾಲೆಯನ್ನು ಪ್ರಯತ್ನಪೂರ್ವಕವಾಗಿ ಧರಿಸಲೇ ಬೇಕು. ಇದು ಭಕ್ತನ ಲಕ್ಷಣವಾಗಿದೆ.

**ಹರಿಭಕ್ತಸ್ಯ ತುಲಸೀಕುಂಜಕಾಷ್ಠಸಮುದ್ಭವಾ।**
**ಚಿಹ್ನಾರ್ಥಮಾತ್ಮನೋ ಮಾಲಾ ಪುರಾ ಕೃಷ್ಣೇನ ದರ್ಶಿತಾ॥**

– ಪದ್ಮಪುರಾಣ, ಉತ್ತರಖಂಡ (೬)

ಹರಿಭಕ್ತನಿಗೆ ಹರಿಭಕ್ತಿಯ ಲಾಂಛನವಾಗಿ ತುಲಸೀಕಾಷ್ಠದಿಂದ ಮಾಡಿದ ಮಾಲೆಯು ಶ್ರೀಕೃಷ್ಣನಿಂದ ವಿಧಿಸಲ್ಪಟ್ಟಿದೆ.

**ಕಾಷ್ಠಮಾಲಾಧರಂ ವಿಪ್ರಂ ಯತಿನಂ ಯಾನರೋಹಿಣಮ್ ।**
**ಖಟ್ವಾಸ್ಥ್ಯಾಂ ವಿಧವಾಂ ದೃಷ್ಟ್ವಾ ಸಚೇಲಂ ಜಲಮಾವಿಶೇತ್ ॥**

– ಪದ್ಮಪುರಾಣ, ಉತ್ತರಖಂಡ (೬)

ತುಲಸೀಕಾಷ್ಠದ ಮಾಲೆಯನ್ನು ಕೊರಳಲ್ಲಿ ಧರಿಸದ ಯಾನವನ್ನು ಏರಿದ ಯತಿಯನ್ನಾಗಲಿ, ವಿಧವೆಯನ್ನಾಗಲಿ, ಕಂಡಲ್ಲಿ ಕೂಡಲೇ ಉಟ್ಟಬಟ್ಟೆಯೊಂದಿಗೆ ಸ್ನಾನಮಾಡಬೇಕು.

**ತುಲಸೀಕಾಷ್ಠಜಾಂ ಮಾಲಾಂ ಧರ್ಮಕಾಮಾರ್ಥಮೀಪ್ಸುಭಿಃ ।**
**ಧಾರ್ಯಾ ಪುಣ್ಯಾರ್ಥಕಾರ್ಯೇಷು ಹೋಮಾರ್ಚಾಜಪಕರ್ಮಣಿ ॥**

– ಸ್ಕಂದಪುರಾಣ

ಧರ್ಮ, ಕಾಮ ಹಾಗೂ ಅರ್ಥಗಳನ್ನು ಬಯಸುವವರು ಹೋಮ, ಪೂಜೆ, ಜಪ, ಮೊದಲಾದ ಪುಣ್ಯಕಾರ್ಯಗಳಲ್ಲಿ ತುಲಸೀಕಾಷ್ಠದ ಮಾಲೆಯನ್ನು ಧರಿಸಲೇಬೇಕು.

**ಯಥೈವ ಪೂಜನಂ ವಿಷ್ಣೋರ್ಯಥೈವಾತಿಥಿಪೂಜನಮ್ ।**
**ತಥೈವ ತುಲಸೀಕಾಷ್ಠಧಾರಣಂ ಪುಣ್ಯಕಾರಣಮ್ ॥**

– ಶಾರ್ಙ್ಗಧರಸಂಹಿತಾ (೩/೭೧)

ನಿತ್ಯದಲ್ಲಿ ಶ್ರೀವಿಷ್ಣುವಿನ ಪೂಜೆಯು ಹೇಗೋ, ಅತಿಥಿಗಳ ಪೂಜೆಯು ಹೇಗೋ ಅದರಂತೆ ತುಲಸೀಕಾಷ್ಠದ ಮಾಲೆಯನ್ನು ಧರಿಸುವುದು ಪುಣ್ಯಕ್ಕೆ ಕಾರಣವಾಗುವುದು.

**ತುಲಸೀಮಾಲಯಾ ವಿಷ್ಣುಮರ್ಚಯೇದ್ಯಸ್ತು ಪರ್ವಸು ।**
**ತಸ್ಯ ಪುಣ್ಯಫಲಂ ವಕ್ತುಂ ಕಃ ಶಕ್ತೋ ದಿವಿ ವಾ ಭುವಿ ॥**

– ವಿಷ್ಣುಧರ್ಮೋತ್ತರ (೧೫/೧೩)

ಪರ್ವಕಾಲಗಳಲ್ಲಿ ತುಲಸೀ ಮಾಲೆಯನ್ನು ಧರಿಸಿ, ಯಾವನು ವಿಷ್ಣುವನ್ನು ಪೂಜಿಸುವನೋ ಅವನ ಪುಣ್ಯಫಲವನ್ನು ಹೇಳಲು ದೇವಲೋಕದಲ್ಲಾಗಲಿ, ಭೂಲೋಕದಲ್ಲಾಗಲಿ ಯಾವನು ತಾನೇ ಶಕ್ತನಾದಾನು?

★★★

## ಶಪಥಕ್ಕೆ ತುಲಸೀ

ಸಾಮಾನ್ಯವಾಗಿ ತಾನು ಆಡಿದ ಮಾತು ಸತ್ಯ ಎಂದು ನಿರೂಪಿಸಲು ದೇವರ ಸಾಕ್ಷಿ, ದೇವರ ಆಣೆ ಎಂದು ನುಡಿಯುವುದು, ಸಾಲಿಗ್ರಾಮ ಮೊದಲಾದವುಗಳನ್ನು ಕೈಯಲ್ಲಿ

ಹಿಡಿದು ಹೇಳುವುದು ಸಂಪ್ರದಾಯದಲ್ಲಿ ಕಂಡಿದೆ. ಸಾಲಿಗ್ರಾಮಾದಿಗಳನ್ನು ಹಿಡಿದು ಮಾಡುವ ಶಪಥವನ್ನು ದಿವ್ಯ ಶಪಥ ಎನ್ನುವರು. ಈ ಸಾಲಿಗೆ ತುಲಸಿಯು ಸಹ ಸೇರಿದೆ ಎಂದರೆ ತುಲಸಿಯನ್ನು ಕೈಯಲ್ಲಿ ಹಿಡಿದು ತಾನು ಆಡಿದ ಮಾತು ಸತ್ಯ ಎಂದು ಹೇಳಿದಲ್ಲಿ ಅದು ಅತ್ಯಂತ ಅಧಿಕೃತ ಎಂದು ಹೇಳಿದಂತೆ ಭಾವ. ಅದರಂತೆ ತಾನು ಹೇಳಿದ್ದನ್ನು ತಪ್ಪದೆ ನಡೆಸುವುದನ್ನು ಖಚಿತಪಡಿಸಲು ಸಹ ಹೀಗೆ ಸಾಲಿಗ್ರಾಮಾದಿಗಳನ್ನು ಹಿಡಿಯುವುದು ರೂಢಿಯಲ್ಲಿದೆ. ತಾನು ಆಡಿದ ಮಾತಿಗೆ ತಪ್ಪಿ ನಡೆದಲ್ಲಿ ಅದು ದೈವದ್ರೋಹವಾಗುವುದು ಎಂಬ ನಿರೂಪಣೆ ಅದರ ಹಿನ್ನೆಲೆಯಾಗಿರುತ್ತದೆ. ಅರ್ಜುನಾದಿಗಳು ಸೈಂಧವ ಮೊದಲಾದವರನ್ನು ಕೊಲ್ಲುವಾಗ ಮಾಡಿದ ಶಪಥ ಮೊದಲಾದವುಗಳು ಇಂತಹ ಶಪಥಗಳಾಗಿವೆ. ಇಂತಹ ಶಪಥಕ್ಕೂ ಸಹ ತುಲಸಿಯ ಉಪಯೋಗ ಕಂಡುಬರುವುದು. ತುಲಸಿಯನ್ನು ಕೈಯಲ್ಲಿ ಹಿಡಿದು ಆಡುವ ಮಾತಿಗೆ ದೈವವು ಸಾಕ್ಷಿಯಾಗಿ ಅದನ್ನು ತಪ್ಪಿದವನು ಬಗೆಬಗೆಯ ಅನರ್ಥಕ್ಕೆ ಗುರಿಯಾಗುವನು. ಲೋಕದಲ್ಲಿ ಸಹಿಮಾಡಿದ ದಾಖಲೆಗೆ ತಪ್ಪಿ ನಡೆಯುವುದು ಹೇಗೆ ಶಿಕ್ಷಾರ್ಹ ಅಪರಾಧವೋ ಹಾಗೆಯೇ ಎಂದು ಇದನ್ನು ತಿಳಿಯಬೇಕು.

**ತುಲಸೀಂ ಸ್ವಕರೇ ಧೃತ್ವಾ ಸ್ವೀಕಾರಂ ಯೋ ನ ರಕ್ಷತಿ ।**
**ಸ ಯಾತಿ ಕಾಲಸೂತ್ರಂ ಚ ಯಾವಚ್ಚಂದ್ರದಿವಾಕರೌ ॥**

– ಬ್ರಹ್ಮವೈವರ್ತಪುರಾಣ, ಪ್ರಕೃತಿಖಂಡ (೨/೨೧/೪೮

ತನ್ನ ಕೈಯಲ್ಲಿ ತುಲಸಿಯನ್ನು ಹಿಡಿದು ಆಡಿದ ತನ್ನ ಮಾತನ್ನು ಯಾವನು ಉಳಿಸಿಕೊಳ್ಳಲಾರನೋ ಅವನು ಸೂರ್ಯಚಂದ್ರರಿರುವ ವರೆಗೆ ಕಾಲಸೂತ್ರ ಎಂಬ ನರಕದಲ್ಲಿ ಕೊಳೆಯುವನು.

**ಕರೋತಿ ಮಿಥ್ಯಾಶಪಥಂ ತುಲಸ್ಯಾ ಯೋ ಹಿ ಮಾನವಃ ।**
**ಸ ಯಾತಿ ಕುಂಭೀಪಾಕಂ ಚ ಯಾವದಿಂದ್ರಾಶ್ಚತುರ್ದಶ ॥**

– ಬ್ರಹ್ಮವೈವರ್ತಪುರಾಣ, ಪ್ರಕೃತಿಖಂಡ (೨/೨೧/೪೯)

ತುಲಸಿಯನ್ನು ಕೈಯಲ್ಲಿ ಹಿಡಿದು ಯಾವ ಮಾನವನು ಸುಳ್ಳು ಶಪಥವನ್ನು ಮಾಡುವನೋ ಅವನು ೧೪ ಇಂದ್ರರು ಇರುವ ಕಾಲದಷ್ಟು ಕುಂಭೀಪಾಕನರಕವನ್ನು ಹೊಂದುವನು. (೧೪ ಇಂದ್ರರ ಕಾಲ ಬ್ರಹ್ಮದೇವರ ಒಂದು ಹಗಲಿನ ಕಾಲ ಎಂದರ್ಥ).

**ಸ್ಪೃಷ್ಟ್ವಾ ಯಸ್ತುಲಸೀಪತ್ರಂ ಮಿಥ್ಯಾ ವದತಿ ಶೋಭನೇ ।**
**ನ ತಸ್ಯ ನರಕಾದುಗ್ರಾದುದ್ಧಾರಃ ಕಲ್ಪಕೋಟಿಷು ॥**

– ಬೃಹದ್ಧರ್ಮಪುರಾಣ (೧/೮/೩೧)

ಯಾವನು ತುಲಸಿಪತ್ರವನ್ನು ಮುಟ್ಟಿ ಅಸತ್ಯವನ್ನು ನುಡಿಯುವನೋ ಅವನಿಗೆ ಕಲ್ಪಕೋಟಿಗಳ ಬಳಿಕವೂ ನರಕದಿಂದ ಬಿಡುಗಡೆ ಲಭಿಸದು.

★★★

## ತುಲಸಿಯು ಹತ್ತುದಿನಗಳವರೆಗೂ ಗ್ರಾಹ್ಯ

ಸಾಮಾನ್ಯವಾಗಿ ವಸ್ತುಗಳ ಬಳಕೆಗೆ ಇಂತಿಷ್ಟು ಅವಧಿ ಎಂಬುದು ನಿಗದಿತವಾಗಿರುತ್ತದೆ. ಸಂಗ್ರಹಿಸಿದ ನೀರಿನ ಪಾವಿತ್ರ್ಯ ಮೂರು ದಿವಸಗಳ ವರೆಗೆ ಎಂಬುದು ಪ್ರಸಿದ್ಧ. ಕೆಲವು ಹೂವುಗಳ ಪಾವಿತ್ರ್ಯ ಕೆಲವು ಗಂಟೆಗಳ ವರೆಗೆ ಮಾತ್ರ. ಹೆಚ್ಚಿನ ಹೂವುಗಳು ಮಾರನೆಯ ದಿನಕ್ಕಾಗಲಿ, ಮರುಬಳಕೆಗಾಗಲಿ ಸರ್ವಥಾ ಅರ್ಹವೆನ್ನಿಸವು. ನೀರಿನಲ್ಲಿ ಗಂಗೆಯದು ಮಾತ್ರ ಶಾಶ್ವತವಾದ ಪಾವಿತ್ರ್ಯ. ಬೇರೆ ಯಾವುದೇ ನೀರು ಸಹ ಅದಕ್ಕೆ ಸಾಟಿ ಎನ್ನಿಸದು. ಅದರಂತೆ ಸಸ್ಯಗಳಲ್ಲಿ ತುಲಸಿಯ ಪಾವಿತ್ರ್ಯ ಇತರ ಎಲ್ಲವುಗಳಿಗಿಂತ ಮಿಗಿಲಾದುದು. ಸಾಮಾನ್ಯವಾಗಿ ತುಲಸಿ ಮೂರು ದಿನ ಸಹಜವಾಗಿಯೇ ಶುದ್ಧವೆನಿಸುವುದು. ಆ ಶುದ್ಧಿ ಹತ್ತು ದಿವಸದವರೆಗೂ ವಿಸ್ತರಿಸುವುದು ಸಹ. ಅದರಂತೆ ತುಲಸಿಗೆ ಪಾವಿತ್ರ್ಯ ಹಳತು ಎಂಬ ಕಾರಣದಿಂದ ಕುಂದುವುದಿಲ್ಲ. ಒಣಗಿದ್ದು ಎಂಬ ಕಾರಣದಿಂದಲೂ ಸಹ ಅದರ ಹಿರಿಮೆಗೆ ಧಕ್ಕೆ ಇಲ್ಲ. ಇನ್ನೂ ವಿಶೇಷವಾಗಿ ಕಾರಣಾಂತರಗಳಿಂದ ಹೊಸತಾಗಿ ತುಲಸಿಯನ್ನು ಸಂಗ್ರಹಿಸಲು ಸಾಧ್ಯವಾಗದಾಗ ನಿರ್ಮಾಲ್ಯತುಲಸಿಯನ್ನೇ ತೊಳೆದು ಪುನಃ ಪೂಜೆಗೆ ಉಪಯೋಗಿಸುವ ಅವಕಾಶವೂ ಸಹ ಉಂಟು. ಬೇರೆ ಯಾವುದೇ ನಿರ್ಮಾಲ್ಯವು ಸಹ ಈ ರೀತಿಯಾದ ಮರುಬಳಕೆಗೆ ಅರ್ಹತೆ ಪಡೆದಿಲ್ಲ. ಪಾರಿಜಾತದ ಇತರ ಹೂವುಗಳು ಕೆಳಗೆ ಬಿದ್ದಲ್ಲಿ ಪೂಜೆಗೆ ಯೋಗ್ಯವೆನ್ನಿಸವು. ಪಾರಿಜಾತದ ಶುದ್ಧಿಗೂ ಸಹ ಸೀಮಿತವೇ. ಆದರೆ ತುಲಸಿ ಹಾಗಲ್ಲ; ಅದು ನೆಲದಮೇಲೆಯೇ ಆಗಲಿ, ನೀರಿನ ಮೇಲೆಯೇ ಆಗಲಿ ಬಿದ್ದಾಗಲೂ ಅದರ ಪಾವಿತ್ರ್ಯಕ್ಕೆ ಧಕ್ಕೆ ತಗಲದು. ಹೀಗೆ ತುಲಸಿಯ ಮಹಿಮೆ ಅಗಾಧವಾದುದು.

**ತ್ರಿರಾತ್ರಂ ತುಲಸೀಪತ್ರಂ ಶುಷ್ಕಂ ಪರ್ಯುಷಿತಂ ಸತಿ ।**
**ಶ್ರಾದ್ಧೇ ವ್ರತೇ ವಾ ದಾನೇ ವಾ ಪ್ರತಿಷ್ಠಾಯಾಂ ಸುರಾರ್ಚನೇ ॥**
**ಭೂಗತಂ ತೋಯಪತಿತಂ ಯದ್ದತ್ತಂ ವಿಷ್ಣವೇ ಸತಿ ।**
**ಶುದ್ಧಂ ತು ತುಲಸೀಪತ್ರಂ ಕ್ಷಾಲನಾದನ್ಯಕರ್ಮಣಿ ॥**

- ಬ್ರಹ್ಮವೈವರ್ತಪುರಾಣ (೨/೨೧/೫೩-೫೪)

ತುಲಸಿಯ ಎಲೆಯ ಪಾವಿತ್ರ್ಯ ಮೂರು ದಿನಗಳದು. ಅದು ಹಳತು ಎನ್ನಿಸದು. ಶ್ರಾದ್ಧ ವ್ರತ, ದಾನ, ಪ್ರತಿಷ್ಠೆ, ದೇವತಾಪೂಜೆ ಹೀಗೆ ಪ್ರತಿಯೊಂದು ಕಾರ್ಯದಲ್ಲೂ ಸಹ ತುಲಸಿಯ ಪಾತ್ರ ಅನಿವಾರ್ಯ. ಭೂಮಿಯ ಮೇಲೆ ಬಿದ್ದಿರಲಿ, ನೀರಿನ ಮೇಲೆ ಬಿದ್ದಿರಲಿ, ಅದು

ಪವಿತ್ರವೇ. ವಿಷ್ಣುವಿಗೆ ಸಮರ್ಪಿತವಾಗಿದ್ದರೂ ಅನಿವಾರ್ಯವಾಗಿದ್ದಾಗ ಅದನ್ನು ತೊಳೆದು ಪುನಃ ಉಪಯೋಗಿಸಲು ಅವಕಾಶವಿದೆ.

★★★

## ತುಲಸಿಯಿಂದ ದುಃಶಕುನಗಳ ಪರಿಹಾರ

ಮುಂದಾಗುವ ಅನಿಷ್ಟವನ್ನು ದುಃಶಕುನಗಳು ಸೂಚಿಸುವವು. ಅಂತಹ ದುಃಶಕುನಗಳು ಎರಡು ಬಗೆ. ಕೆಲವು ದುಃಶಕುನಗಳಿಂದಾಗುವ ಅನರ್ಥವು ಅಪರಿಹಾರ್ಯವೆನ್ನಿಸುವಷ್ಟು ಕ್ರೂರವಾದುದು. ಮತ್ತೆ ಕೆಲವು ದುಃಶಕುನಗಳಿಂದಾಗುವ ಅನರ್ಥಗಳು ಸೂಕ್ತಪರಿಹಾರದಿಂದ ಪರಿಹರಿಸಲು ಶಕ್ಯವಾದಂತಹವುಗಳು. ಅಂತಹ ಪರಿಹಾರಮಾರ್ಗಗಳಲ್ಲಿ ಬಗೆಬಗೆಯ ಮಂತ್ರ- ಜಪಗಳು, ಹೋಮಹವನಗಳು, ದೇವತಾರಾಧನೆ ಮೊದಲಾದವು ವಿಹಿತವಾಗಿವೆ. ಅವುಗಳಲ್ಲಿ ದೇವತಾದರ್ಶನ, ತೀರ್ಥಯಾತ್ರೆ ಮುಂತಾದವು ಸಹ ಸೇರಿವೆ. ತುಲಸಿಯಿಂದ ಇಂತಹ ದುಃಶಕುನಗಳು ಪರಿಹಾರವಾಗುವುದು ಅತ್ಯಂತ ಖಚಿತ ಹಾಗೂ ಸುಲಭ. ಆ ಎರಡು ಬಗೆಯ ದುಃಶಕುನಗಳಿಗೂ ತುಲಸಿಯು ಸೂಕ್ತಪರಿಹಾರವಾಗಿದೆ. ಅಪರಿಹಾರ್ಯವಾದ ದುಷ್ಫಲದ ತೀವ್ರತೆ ಗಮನಾರ್ಹವಾಗಿ ಕುಗ್ಗುವುದು. ಪರಿಹಾರ್ಯವಾದ ದುಷ್ಫಲ ಸಂಪೂರ್ಣವಾಗಿಯೇ ಇಲ್ಲವಾಗುವುದು. ತುಲಸಿಯಿಂದ ಶ್ರೀಹರಿಯನ್ನು ಪೂಜಿಸುವುದೇ ಮುಖ್ಯವಾದ ಉಪಶಮನದ ಮಾರ್ಗ.

**ಉತ್ಪಾತಾನ್ ದಾರುಣಾನ್ ರೋಗಾನ್ ದುರ್ನಿಮಿತ್ತಾನ್ಯನೇಕಶಃ।**
**ತುಲಸ್ಯಾಽಭ್ಯರ್ಚಿತೋ ಭಕ್ತ್ಯಾ ಹಂತಿ ಶಾಂತಿಕರೋ ಹರಿಃ॥**

– ಪದ್ಮಪುರಾಣ (೬/೨೫/೩೪)

ಭಯಾನಕವಾದ ರೋಗಗಳನ್ನು ಅನೇಕ ವಿಧವಾದ ದುರ್ನಿಮಿತ್ತಗಳನ್ನು ತುಲಸಿಯಿಂದ ಪೂಜಿತನಾದ ಶ್ರೀಹರಿಯು ಉಪಶಮನಗೊಳಿಸುವನು.

★★★

## ತುಲಸಿಯಿಂದ ರೋಗಪರಿಹಾರ

ರೋಗಗಳು ಸಾಧನೆಗೆ ವಿಘ್ನವೆನ್ನಿಸುವವು. ಕೆಲವು ಸಾಮಾನ್ಯರೋಗಗಳು ಮರಣಾಂತಿಕವಲ್ಲವಾದರೂ ಸಾಧನೆಗೆ ಅಡ್ಡಿ ಎನ್ನಿಸಬಲ್ಲವು. ಉಗ್ರರೋಗಗಳಂತೂ ಆಯುಷ್ಯವನ್ನೇ ಕುಗ್ಗಿಸುವಂತಹವು. ಅವರಿಗೆ ಮಾತ್ರವಲ್ಲದೆ ಅವರ ಕುಟುಂಬ ವರ್ಗದವರ ಅವರ ಆಪ್ತವರ್ಗದ ಸಾಧನೆಗೂ ಸಹ ಅಡ್ಡಿವುಂಟುಮಾಡುವಂತಹವು. ಅಂತಹ ರೋಗಗಳ

ಪರಿಹಾರಕ್ಕೂ [೨೨]ಶಾಸ್ತ್ರಗಳು ಬಗೆಬಗೆಯ ಮಾರ್ಗಗಳನ್ನು ತಿಳಿಸಿವೆ. ಅದರಲ್ಲಿ ದೈವಿಕವಾದ ವಿಧಾನವೂ ಒಂದು. ಅಂತಹ ದೈವಿಕವಿಧಾನದಲ್ಲಿ ತುಲಸಿಯ ಸ್ಥಾನ ಗಮನಾರ್ಹವಾದುದು. ಭಗವಂತನಿಗೆ ಅರ್ಪಿಸಿದ ತುಲಸಿಯನ್ನು ಮುಖ, ಶಿರಸ್ಸು ಮೊದಲಾದ ಅಂಗಗಳಲ್ಲಿ ಧರಿಸುವುದು, ತುಲಸಿಯ ತೀರ್ಥವನ್ನು ಸೇವಿಸುವುದು, ತುಲಸೀದಳಗಳನ್ನು ತಿನ್ನುವುದು, ತುಲಸಿಯ ಮೃತ್ತಿಕೆಯನ್ನು ಮೈಗೆ ಲೇಪಿಸಿಕೊಳ್ಳುವುದು, ತುಲಸೀಕಾಷ್ಠದಿಂದ ತೇಯ್ದ ಗಂಧವನ್ನು ಶ್ರೀಹರಿಗೆ ಅಭಿಷೇಕಿಸಿ, ಸ್ವೀಕರಿಸುವುದು, ತುಲಸಿಯ ದರ್ಶನ ಮೊದಲಾದ ಅನೇಕ ಬಗೆಗಳಿಂದ ಉಗ್ರವೆನ್ನಿಸುವ ರೋಗಗಳು ಸಹ ಉಪಶಮನವೆನ್ನಿಸುವವು. ದೈವಿಕಮಾರ್ಗವಾಗಿ ಮಾತ್ರವಲ್ಲದೆ ಔಷಧಿಯ ರೀತಿಯಲ್ಲೂ ಸಹ ತುಲಸಿಯು ಸರ್ವರೋಗಹರ ಎಂಬುದಾಗಿ ಪ್ರಸಿದ್ಧವಾಗಿದೆ. [೨೩]ಆಯುರ್ವೇದವು ಬಹುಬಗೆಯಲ್ಲಿ

೨೨ ತುಲಸಿಯು ರೋಗನಾಶಕ ಎಂಬ ವಿವರವು ಪ್ರಸಿದ್ಧ ಆಯುರ್ವೇದದ ಗ್ರಂಥಗಳಾದ ಚರಕಸಂಹಿತೆ, ಸುಶ್ರುತಸಂಹಿತೆ, ಮೊದಲಾದವುಗಳಲ್ಲಿ ಬಂದಿದೆ.

೨೩ ಆಯುಷ್ಯ, ಐಶ್ವರ್ಯಗಳಂತೆ ಆರೋಗ್ಯವು ಮನುಷ್ಯನ ಸಾಧನೆಗೆ ತೀರಾ ಅಗತ್ಯ. ಅನೇಕ ಕಾರಣಗಳಿಂದ ಆರೋಗ್ಯ ಅಪಾಯಕ್ಕೆ ಗುರಿಯಾಗುವುದುಂಟು. ರೋಗರುಜಿನಗಳ ಪಾತ್ರ ಇದರಲ್ಲಿ ಹೆಚ್ಚಿನದು. ಅವುಗಳ ಪರಿಹಾರಕ್ಕೆಂದು ಇಂದು ಪ್ರಚಾರದಲ್ಲಿರುವ ವೈದ್ಯ ಪದ್ಧತಿಗಳಲ್ಲಿ ಆಯುರ್ವೇದ, ಅಲೋಪತಿ, ಹೋಮಿ- ಯೋಪತಿ, ಮೊದಲಾದವುಗಳು ಪ್ರಸಿದ್ಧ. ಪರಂಪರೆಯ ದೃಷ್ಟಿಯಲ್ಲಿ ಆಯುರ್ವೇದ ಅತ್ಯಂತ ಪ್ರಾಚೀನ. ಉಪವೇದಗಳಲ್ಲಿ ಒಂದು ಎಂದು ಪರಿಗಣಿತವಾಗಿರುವ ಆಯುರ್ವೇದವು ಸಾಕ್ಷಾತ್ ಧನ್ವಂತರಿ ನಾಮಕ ಭಗವಂತನಿಂದ ಪ್ರವರ್ತಿತ ಎಂಬುದು ಸುಪ್ರಸಿದ್ಧ. ಈ ಕಾರಣದಿಂದಾಗಿಯೇ ಸಂಪ್ರದಾಯಸ್ಥರು ಸುರಕ್ಷಿತ ಹಾಗೂ ಶುದ್ಧ ಎಂಬ ಕಾರಣದಿಂದ ಆಯುರ್ವೇದಕ್ಕೆ ವಿಶೇಷ ಮನ್ನಣೆ ನೀಡುವರು. ಸರ್ಕಾರವು ಸಹ ಆಯುರ್ವೇದಕಾಲೇಜುಗಳನ್ನು ಸ್ಥಾಪಿಸಿ, ಅದರ ಶಿಕ್ಷಣಕ್ಕೆ ವ್ಯವಸ್ಥೆಯನ್ನು ಕಲ್ಪಿಸಿ ಇದರ ಸ್ಥಾನವನ್ನು ಗುರುತಿಸಿದೆ. ನಮ್ಮ ದೇಶದ ಈ ವೈದ್ಯ ಪದ್ಧತಿ ಇಂದು ಜಾಗತಿಗಮಟ್ಟದಲ್ಲಿ ಮನ್ನಣೆ ಪಡೆದಿದೆ ಎಂಬುದು ಹೆಮ್ಮೆಯ ಸಂಗತಿ.

ಆದರೆ ಆಯುರ್ವೇದವು ಇಂದು ನಿರೀಕ್ಷಿತ ರೀತಿಯಲ್ಲಿ ಫಲಕೊಡುತ್ತಿದೆಯೇ ಎಂಬುದು ಪ್ರಶ್ನೆ. ಇತರ ವೈದ್ಯ ಪದ್ಧತಿಗಳಿಗಿರುವ ನ್ಯೂನತೆ ಇದರಲ್ಲು ಕಂಡುಬರುವುದು ಎಂಬುದು ತಿಳಿದವರ ಅನುಭವ. ಅದಕ್ಕೆ ಇತರ ವೈದ್ಯಪದ್ಧತಿಗಳಿಗಿರುವ ಕಾರಣಗಳೇ ಇದಕ್ಕೂ ಅನ್ವಯಿಸುವವು ಎಂಬುದು ಸಹ ನಿಶ್ಚಿತ. ಆದರೆ ಅದಕ್ಕಿಂತ ಭಿನ್ನವಾದ ಕಾರಣಗಳನ್ನು ಸಹ ಆಯುರ್ವೇದದ ನ್ಯೂನತೆಗೆ ಗುರುತಿಸಲು ಸಾಧ್ಯವಿದೆ.

ಮುಖ್ಯವಾಗಿ ಆಯುರ್ವೇದವು ಒಂದು ಉಪವೇದ ಎಂದರೆ, ವೇದಗಳಲ್ಲಿ ನಂಬಿಕೆ ಇರುವವರಿಗಷ್ಟೆ ಉಪಯುಕ್ತವೆನ್ನಿಸುವ ವೈದ್ಯಪದ್ಧತಿ. ವೈದಿಕ ಸಿದ್ಧಾಂತದ ಮೂಲದ್ರವ್ಯ ಆಸ್ತಿಕತೆ, ಭಗವಂತನ ಪಾರಮ್ಯವನ್ನು ಒಪ್ಪದ ಯಾವುದೂ ವೈದಿಕವೆನ್ನಿಸದು. ಆದರೆ ಇಂದು ಆಯುರ್ವೇದವನ್ನು ಕಲಿಸುವವರು ಕಲಿಯುವವರು ಹೆಚ್ಚಾಗಿ ಇತರ ವೈದ್ಯಪದ್ಧತಿಗಳಂತೆ ವೇದದಲ್ಲಾಗಲಿ, ದೇವರಲ್ಲಾಗಲಿ ಅಷ್ಟಾಗಿ ನಂಬಿಕೆಯನ್ನುಹೊಂದದವರು. ಕೆಲವರಂತು ಶುದ್ಧನಾಸ್ತಿಕರೆ. ಎಂದರೆ ಇಂತಹವರಿಂದ ಆಯುರ್ವೇದವು ಪರಿಶುದ್ಧವಾಗಿ ಉಳಿಯಲು ಸಾಧ್ಯವೇ ಇಲ್ಲ ಎಂದಾಗುವುದು.

ಆಯುರ್ವೇದದ ಮೂಲ ಹೃದಯ ಪರಿಶುದ್ಧವಾದ ಮೂಲಿಕೆ ಮೊದಲಾದವುಗಳು. ಕಾಡಿನಲ್ಲಿ ಸಹಜವಾಗಿ ಬೆಳೆಯುವ ಮೂಲಿಕೆಗಳ ಗುಣಮಟ್ಟ ಪೂರ್ಣವೆನ್ನಿಸುವಂತಹುದು. ಆದರೆ ಕಾಡುಗಳೇ ಮಾಯವಾಗುತ್ತಿರುವ ಈ ಕಾಲದಲ್ಲಿ ವನ್ಯಮೂಲಿಕೆಗಳನ್ನು ಕಲ್ಪಿಸಿಕೊಳ್ಳುವುದು ಕಷ್ಟ. ಕೃತಕವಾಗಿ

ತುಲಸಿಯನ್ನು ಔಷಧಿಗಳಲ್ಲಿ ಅಳವಡಿಸಿಕೊಂಡು ರೋಗಗಳ ಉಪಶಾಂತಿಗೆ ಮಾರ್ಗವನ್ನು ರೂಪಿಸಿದೆ. ರೋಗಗಳು ಮೂಲತಃ ಪಾಪದ ಪರಿಣಾಮ – ಜನ್ಮಾಂತರಕೃತಂ ಪಾಪಂ ವ್ಯಾಧಿರೂಪೇಣ ಬಾಧತೇ. ಹಿಂದಿನ ಜನ್ಮಗಳ ಪಾಪವು ವ್ಯಾಧಿಯ ರೂಪದಲ್ಲಿ ಕಾಡುವುದು.

---

ಬೆಳೆಯುವ ಮೂಲಿಕೆಗಳು ಸಹಜವಾಗಿಯೇ ಕೃತಕವೆನ್ನಿಸಿ ಮೂಲಕ್ಕೆ ಪ್ರತಿನಿಧಿ ಎನ್ನಿಸಲಾರವು. ಇಂದು ದೇಶೀಯ ಹಸುವಿನ ಹಾಲು ಪರಿಶುದ್ಧವಾದ ಜೇನು, ನಿರ್ಮಲವಾದ ಧಾತ್ರಿ, ಮೊದಲಾದವುಗಳಿಂದ ಸಿದ್ಧವಾಗುವ ಆಯುರ್ವೇದ ಔಷಧಗಳನ್ನು ಎಲ್ಲಿ ನಿರೀಕ್ಷಿಸಲು ಸಾಧ್ಯ ! ಆಹಾರವೇ ಶುದ್ಧವೆನ್ನಿಸದ ಈ ಕಾಲದಲ್ಲಿ ಔಷಧಿಯಲ್ಲಿ ಶುದ್ಧಿಯನ್ನು ಹೇಗೆ ನಿರೀಕ್ಷಿಸುವುದು?

ಆಯುರ್ವೇದದ ಮತ್ತೊಂದು ನಿಯಮ ತುಲಸಿ, ಧಾತ್ರಿ ಮೊದಲಾದವುಗಳ ವಿಶೇಷವಾಗಿ ಸಂಬಂಧಿಸಿದಂತಹುದು. ತುಲಸಿಯು ಶುದ್ಧವಾಗಿರುವುದರೊಂದಿಗೆ ಅದನ್ನು ಬಿಡಿಸುವ ದಿನಗಳು ನಿಷಿದ್ಧದಿನ-ಗಳಾಗಿರಲೇಕೂಡದು ಎಂಬ ನಿಯಮವೂ ಇದೆ. ನಿಷಿದ್ಧ ದಿನಗಳೊಂದಿಗೆ ನಿಷಿದ್ಧ ಕಾಲದ ಪರಿಕಲ್ಪನೆಯೂ ಇವುಗಳಿಗಿದೆ. ತುಲಸಿಯನ್ನು ಮಧ್ಯಾಹ್ನದ ಬಳಿಕ ಸರ್ವಥಾ ಬಿಡಿಸುವಂತಿಲ್ಲ, ನಿರ್ಮಾಲ್ಯವಲ್ಲದ ತುಲಸಿ ಔಷಧಕಾರ್ಯಕ್ಕೆ ಸರ್ವಥಾ ಅನರ್ಹ ಎಂಬುದನ್ನು ಗಮನಿಸಬೇಕು. ಅದರಂತೆ ಧಾತ್ರಿಯ ಸೇವನೆಗೆ ಸಪ್ತಮೀ ತಿಥಿ ಹಾಗೂ ಭಾನುವಾರ ಸರ್ವಥಾ ನಿಷಿದ್ಧ. ರಾತ್ರಿಕಾಲದಲ್ಲಂತೂ ಧಾತ್ರಿಯನ್ನು ಸೇವಿಸಲೇಕೂಡದು ಎಂಬುದು ನಿಯಮ. ಆದರೆ ಇಂದಿನ ಹೆಚ್ಚಿನ ಆಯುರ್ವೇದ ಔಷಧಿಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ಧಾತ್ರಿ, ತುಲಸಿ ಔಷಧಗಳಿಗೆ ಈ ನಿಯಮವನ್ನು ಅನ್ವಯಿಸುವ ವೈದ್ಯರೆಲ್ಲಿರುವರು? ಇದನ್ನು ಗಮನಿಸದೆ ಅವರು ನೀಡುವ ಔಷಧಿಗಳು ನಿರೀಕ್ಷಿತ ಫಲವನ್ನು ಎಂತು ತಾನೆ ನೀಡಿಯಾವು? ಪ್ರತಿಯಾಗಿ ಅವುಗಳಿಂದ ಪ್ರತಿಕೂಲವಾದ ಪರಿಣಾಮವೇ ಆಗುವುದು ಹೇಗೆ ತಾನೆ ತಪ್ಪೀತು? ಇದರಂತೆ ಇತರ ಮೂಲಿಕೆಗಳಿಗೂ ಸಹ ತಮ್ಮದೇ ಆದ ನಿಯಮಗಳನ್ನು ಶಾಸ್ತ್ರಗಳು ವಿಧಿಸಿವೆ. ಇವುಗಳ ಪರಿಕಲ್ಪನೆಯೇ ಇಲ್ಲದೆ ವೈದ್ಯರು, ಔಷಧಿತಯಾರಕರು, ಹಾಗೂ ಔಷಧಿಯನ್ನು ಸೇವಿಸುವವರು ಹೇಗೆ ತಾನೆ ನಿರೀಕ್ಷಿತ ಪರಿಣಾಮವನ್ನು ಪಡೆಯಲು ಸಾಧ್ಯ?

ಆಯುರ್ವೇದದ ಔಷಧಿಗಳಿಗೆ ಸಂಬಂಧಿಸಿದ ಮತ್ತೊಂದು ವಿಶೇಷ ನಿಯಮವೆಂದರೆ ಮಂತ್ರೋಚ್ಚಾರಣೆ. ಮೂಲಿಕೆಗಳ ಸಂಗ್ರಹಕ್ಕೆ, ಅವುಗಳ ಬೆಳವಣಿಗೆಗೆ, ಅವುಗಳ ಪರಿಪಾಕಕ್ಕೆ ಹಾಗೂ ಅವುಗಳ ಪ್ರಯೋಗಕ್ಕೆ ಮಂತ್ರಗೇ ಮೂಲದ್ರವ್ಯ. ಉದಾಹರಣೆಗೆ ತುಲಸಿಯನ್ನು ಬಿಡಿಸಲು ಕಾಲ, ಇತ್ಯಾದಿಗಳ ನಿಯಮದಂತೆ ಮಂತ್ರಗಳ ನಿಯಮವೂ ಉಕ್ತವಾಗಿದೆ. ಮಂತ್ರೋಚ್ಚಾರಣೆ ಇಲ್ಲದೆ ಔಷಧಿಗಿರಲಿ, ದೇವಪೂಜೆಗೂ ಸಹ ತುಲಸಿಯನ್ನು ಬಿಡಿಸುವಂತಿಲ್ಲ ; ಈ ಮಾತು ಧಾತ್ರಿ ಮೊದಲಾದ ಇತರ ವಸ್ತುಗಳಿಗೂ ಅನ್ವಯಿಸುವವು. ಮಂತ್ರಗಳ ಪರಿಕಲ್ಪನೆಯೇ ಇಲ್ಲದ ಆಯುರ್ವೇದದ ಅಧ್ಯಯನ ಇಂದು ನಡೆಯುತ್ತಿದೆ. ಮಂತ್ರಗಳ ಉಚ್ಚಾರಣೆ, ಉಪದೇಶ, ಜಪ, ಪ್ರಯೋಗ, ಮೊದಲಾದವುಗಳನ್ನೇ ಜೀವಾಳವನ್ನಾಗಿ ಹೊಂದಿರುವ ಆಯುರ್ವೇದ ಇವಾವುಗಳ ಪರಿಕಲ್ಪನೆಯೂ ಇಲ್ಲದ ಅಧ್ಯಯನ ಪದ್ಧತಿಯಿಂದ ಹೇಗೆ ತಾನೆ ಪೂರ್ಣವೆನ್ನಿಸಲು ಸಾಧ್ಯ? ಹಾಗಾಗದೆ, ಅದರಿಂದ ಪೂರ್ಣ ಆರೋಗ್ಯದ ಪರಿಕಲ್ಪನೆ ಬರುವುದಾದರೂ ಹೇಗೆ ?

ಈ ಬಗ್ಗೆ ಸಂಪ್ರದಾಯಸ್ಥರು ಸರಿಯಾದ ನಿಟ್ಟಿನಲ್ಲಿ ಯೋಚಿಸಿ, ತಮ್ಮ ಮಟ್ಟಿಗಾದರೂ ವೈದ್ಯರಿಂದ ಸೂಚಿಸಲ್ಪಡುವ ಔಷಧಿಗಳನ್ನು ಸೂಕ್ತರೀತಿಯ ಅಭಿಮಂತ್ರಣ ಮೊದಲಾದ ಪ್ರಕ್ರಿಯೆಗಳ ಸೇವನೆಗೆ ವಿಹಿತವನ್ನಾಗಿ ಮಾಡಿಕೊಂಡಲ್ಲಿ ಸ್ವಲ್ಪಮಟ್ಟಿನ ಪ್ರಯೋಜನವನ್ನಾದರೂ ಪಡೆಯಲು ಸಾಧ್ಯ. ಇಲ್ಲವಾದಲ್ಲಿ ಆರೋಗ್ಯದ ಬದಲು ಅನಾರೋಗ್ಯವೇ ಫಲಶ್ರುತಿಯಾದಲ್ಲಿ ಆಶ್ಚರ್ಯವೇನಿಲ್ಲ.

ಕೆಲವೊಮ್ಮೆ ಈ ಜನ್ಮದ ಪಾಪಗಳು ಸಹ. ತುಲಸಿಯು ಅತ್ಯಂತ ಶ್ರೇಷ್ಠವಾದ ಪಾಪಪರಿಹಾರದ ಸಾಧನ. ಆದ್ದರಿಂದ ಅದರ ಸೇವನೆಯಿಂದ ಪಾಪಗಳು ದೂರಾಗುತ್ತಿದ್ದಂತೆಯೇ ಅವುಗಳ ಪರಿಣಾಮವೆನ್ನಿಸಿದ ರೋಗಗಳು ಸಹ ಉಪಶಮನಗೊಳ್ಳುವವು ಎಂಬುದು ಇಲ್ಲಿಯ ಕಾರ್ಯಕಾರಣಭಾವ.

**ಮುಖೇ ಶಿರಸಿ ದೇಹೇ ತು ಕೃಷ್ಣೋತ್ತೀರ್ಣಾಂ ತು ಯೋ ವಹೇತ್ ।**
**ತುಲಸೀಂ ಕೃಷ್ಣನಿರ್ಮಾಲ್ಯೈರ್ಯೋ ಗಾತ್ರಂ ಪರಿಮಾರ್ಜಯೇತ್ ।**
**ಸರ್ವರೋಗೈಸ್ತಥಾ ಪಾಪೈರ್ಮುಕ್ತೋ ಭವತಿ ಮಾನವಃ ॥**

– ಸ್ಕಂದಪುರಾಣ (೨/೪/೨/೩೫)

ಮುಖದಲ್ಲಿ, ಶಿರಸ್ಸಿನಲ್ಲಿ, ದೇಹದಲ್ಲಿ ಕೃಷ್ಣನಿಗೆ ಅರ್ಪಿತವಾದಂತಹ ತುಲಸಿಯ ನಿರ್ಮಾಲ್ಯವನ್ನು ಯಾವನು ಧರಿಸುವನೋ ಅಂತಹ ನಿರ್ಮಾಲ್ಯವನ್ನು ಯಾವನು ಮಾರ್ಜನಮಾಡಿಕೊಳ್ಳುವನೋ ಅಂತಹವನು ಸಕಲ ರೋಗಗಳಿಂದಲೂ, ಸಕಲ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದುವನು.

★★★

# ತುಲಸೀಯಾತ್ರೆಯು ಮಹಾಪುಣ್ಯಕರ

ತೀರ್ಥಕ್ಷೇತ್ರಗಳ ಯಾತ್ರೆಯು ಪಾವನ ಎಂಬುದು ಪ್ರಸಿದ್ಧ. ಜ್ಞಾನಸಾಧನೆಯ ಒಂದು ಮಾರ್ಗವಾಗಿಯೂ ಸಹ ತೀರ್ಥಯಾತ್ರೆಯು ವಿಹಿತವಾಗಿದೆ. ಗಮನ, ಸ್ನಾನ, ದೇವತಾದರ್ಶನ ಮೊದಲಾದವುಗಳು ಈ ತೀರ್ಥಯಾತ್ರೆಯ ಅಂಗಗಳು. ತುಲಸಿಯೂ ಸಹ ಒಂದು ದಿವ್ಯತೀರ್ಥ ಹಾಗೂ ಕ್ಷೇತ್ರ. ಒಂದು ಪ್ರದೇಶವು ತೀರ್ಥ, ಕ್ಷೇತ್ರ ಎನ್ನಿಸಲು ಅಲ್ಲಿರುವ ದೇವತಾಸನ್ನಿಧಾನ ಮುಖ್ಯಕಾರಣ. ತುಲಸಿಯಲ್ಲಿ ಶ್ರೀಹರಿ, ಬ್ರಹ್ಮ ಮೊದಲಾದ ಸಕಲ ದೇವತೆಗಳೂ ವೇದಾದಿ ಸಕಲ ಶಾಸ್ತ್ರಾಭಿಮಾನಿಗಳು ನೆಲೆಸಿರುವುದರಿಂದ ಅದೊಂದು ಪುಣ್ಯಕ್ಷೇತ್ರವೇ ಆಗಿದೆ. ತುಲಸಿಯಂತೂ ಸಾಕ್ಷಾತ್ ಮಹಾಲಕ್ಷ್ಮಿಯೇ ಆಗಿರುವಳಲ್ಲವೆ ! ಇದರಿಂದ ತುಲಸಿ ಇರುವ ಸ್ಥಳಕ್ಕೆ ತೆರಳುವುದು ಸಹ ತೀರ್ಥಯಾತ್ರೆ ಎನ್ನಿಸುವುದು. ಅದರ ದರ್ಶನ, ಸ್ಪರ್ಶನ, ಸೇವನೆ ಮೊದಲಾದವು ಸಹ ತೀರ್ಥಯಾತ್ರೆಯ ಫಲಕ್ಕೆ ಕಾರಣವಾಗುವವು. ಅದರಿಂದಾಗಿಯೇ ತುಲಸಿಯ ಬಳಿಗೆ ತೆರಳುವುದು ಸಹ ಯಾತ್ರೆ ಎನ್ನಿಸಿ ಜೀವನದ ಸಾರ್ಥಕ್ಯಕ್ಕೆ ಕಾರಣವಾಗುವುದು.

**ತುಲಸೀದಲೇನ ದೇವೇಶಃ ಪೂಜಿತೋ ಯೇನ ದುಃಖಹಾ ।**
**ತೀರ್ಥಯಾತ್ರಾದಿಗಮನೈಃ ಫಲೈಃ ಸಿದ್ಧ್ಯತಿ ಕಿನ್ನರಃ ॥**

– ಪದ್ಮಪುರಾಣ (೫/೫೯/೧೦)

ತುಲಸೀದಳದಿಂದ ಪೂಜಿತನಾದ ದೇವೇಶನಾದ ಶ್ರೀಹರಿಯು ದುಃಖಗಳನ್ನು ಪರಿಹರಿಸುವನು. ತೀರ್ಥಯಾತ್ರೆ ಮೊದಲಾದವುಗಳಿಂದ ಲಭಿಸುವ ಫಲವು ಸಹ ತುಲಸಿಯಿಂದ ಸಿದ್ಧವಾಗುವುದು.

**ದುರ್ಗಾಟವ್ಯಾಂ ಸ್ಥಿತೋ ವಾಽಥ ಯದಿ ವಾಽಽಪದ್ಗತೋ ಭವೇತ್ ।**
**ಕುರ್ಯಾದಶ್ವತ್ಥಮೂಲೇ ತು ತುಲಸೀನಾಂ ವನೇಷ್ವಪಿ ॥**
**ವಿಷ್ಣೋರ್ನಾಮಪ್ರಬಂಧಾನಾಂ ಗಾಯನಂ ವಿಷ್ಣುಸನ್ನಿಧೌ ।**
**ಗೋಸಹಸ್ರಪ್ರದಾನಸ್ಯ ಫಲಮಾಪ್ನೋತಿ ಮಾನವಃ ॥**

- ಸ್ಕಂದಪುರಾಣ (೨/೪/೧/೪೭-೪೮)

ದುರ್ಗಮವಾದ ಅರಣ್ಯದಲ್ಲಾಗಲಿ, ಆಪತ್ತಿನಲ್ಲಾಗಲಿ ಸಿಲುಕಿಹಾಕಿಕೊಂಡವನು ಅಶ್ವತ್ಥವೃಕ್ಷದ ಬುಡದಲ್ಲಾಗಲಿ, ತುಲಸಿಯ ವನದಲ್ಲಾಗಲಿ, ವಿಷ್ಣುಸಹಸ್ರನಾಮ ಮೊದಲಾದ ಶ್ರೀಹರಿಯ ಗುಣಕೀರ್ತನೆ ಮಾಡುವ ಗ್ರಂಥಗಳನ್ನು ಗಾಯನ ಮಾಡಬೇಕು. ಅದರಿಂದ ಸಾವಿರಾರು ಗೋವುಗಳನ್ನು ದಾನಮಾಡಿದ ಫಲವನ್ನು ಮಾನವನು ಹೊಂದುವನು.

★★★

## [೨೪]ತುಲಸಿಯ ಔಷಧೀಯ ಮಹತ್ತ್ವ

**ತುಲಸೀ ಕಟುಕಾ ತಿಕ್ತಾ ಹೃದ್ಯೋಷ್ಣಾ ದಾಹಪಿತ್ತಕೃತ್ ।**
**ದೀಪಿನೀ ಕುಷ್ಠ ಕ್ವಾಸ ಪಾರ್ಶ್ವರುಕ್ಕಫವಾತಜಿತ್ ॥**

- ಭಾವಪ್ರಕಾಶ, ಪುಷ್ಪವರ್ಗ, ೬೨; ಆಯುರ್ವೇದವಿಜ್ಞಾನ ಕಫಘ್ನ ವರ್ಗ

ತುಲಸಿಯು ಕಟು, ಒಗರು, ಮನಸ್ಸಿಗೆ ಹಿತ, ಉಷ್ಣಕರ; ದಾಹ ಪಿತ್ತಗಳನ್ನು ಹೆಚ್ಚಿಸುವುದು, ಜೀರ್ಣಶಕ್ತಿಯನ್ನು ಹೆಚ್ಚಿಸುವುದು. ಕುಷ್ಠ ಕ್ವಾಸ, ಪಾರ್ಶ್ವವಾತರೋಗಗಳನ್ನು ಪರಿಹರಿಸುವುದು. ಕಫ ವಾತಗಳನ್ನು ಸಹ ಗುಣಪಡಿಸುವುದು.

---

೨೪ He once called her his basil plant; and when she asked for an explanation, said that basil was a plant which had flourished wonderfully on a murdered man's brains. (George Eliot, Middlemarch, Finale) - Century Dictionary 1890

The ancients had a curious notion relative to the plant basil (Ocimum basilicum), viz. - that there is a property in basil to propagate scorpions and that by the smell there of they are bred in the brains of man (quoted in N and Q., 1st Ser., VIII, 40) century Dicionary-1890.

ತುಲಸೀ ಕಟುತಿಕ್ತೋಷ್ಣಾ ಸುರಭಿಃ ಶ್ಲೇಷ್ಮವಾತಜಿತ್ ।
ಜಂತುಭೂತಕ್ರಿಮಿಹರಾ ರುಚಿಕೃದ್ ವಾತಶಾಂತಿಕೃತ್ ॥

– ರಾಜನಿಘಂಟು (೧೦/೧೫೨)

ತುಲಸಿಯು ಕಟು, ಒಗರು, ಉಷ್ಣಕರ, ಪರಿಮಳಭರಿತ; ಕಫ ವಾತಗಳನ್ನು ಪರಿಹರಿಸು-ವಂತಹುದು; ಜಂತು, ಭೂತ, ಕ್ರಿಮಿಗಳನ್ನು ನಾಶಪಡಿಸುವುದು. ರುಚಿಯನ್ನು ಹೆಚ್ಚಿಸುವುದು, ವಾತವನ್ನು ಪರಿಹರಿಸುವುದು.

ತುಲಸೀ ಲಘುರುಷ್ಣಾ ಚ ರೂಕ್ಷಾ ಕಫವಿನಾಶಿನೀ ।
ಕ್ರಿಮಿದೋಷಂ ನಿಹಂತ್ಯೇಷಾ ರುಚಿಕೃದ್ ವಹ್ನಿದೀಪನೀ ॥

– ಧನ್ವಂತರೀನಿಘಂಟು

ತುಲಸಿಯು ದೇಹದ ತೂಕವನ್ನು ಕಡಿಮೆಮಾಡುವುದು, ಉಷ್ಣಕರ, ಒಣಗಿದ ತುಲಸಿಯು ಕಫವನ್ನು ಪರಿಹರಿಸುವುದು, ಕ್ರಿಮಿದೋಷವನ್ನು ಇಲ್ಲವಾಗಿಸುವುದು, ರುಚಿಯನ್ನು ಹೆಚ್ಚಿಸುವುದು, ಜೀರ್ಣಶಕ್ತಿಯನ್ನು ಹೆಚ್ಚಿಸುವುದು.

★★★

ಪ್ರತಿಖಂಡೇಷು ತಂ ಮಂತ್ರಂ ದದೃಶುರ್ದ್ವಾದಶಾಕ್ಷರಮ್ ।
ಓಂ ನಮೋ ಭಗವತೇ ವಾಸುದೇವಾಯೇತಿ ಮಹಾಫಲಮ್ ॥

–ಬೃಹದ್ಧರ್ಮಪುರಾಣ (೧/೭/೫೬)

ತುಲಸಿಯ ಪ್ರತಿಖಂಡದಲ್ಲೂ ಮಹಾಫಲವನ್ನು ನೀಡುವ 'ಓಂ ನಮೋ ಭಗವತೇ ವಾಸುದೇವಾಯ' ಎಂಬುವ ದ್ವಾದಶಾಕ್ಷರಮಂತ್ರವನ್ನು ಕಂಡರು.

ಇಯಂ ವೃಂದಾ ರಾಕ್ಷಸೀ ತು ಧರ್ಮದೇವಸ್ಯ ಸುಂದರೀ ।
ವೈಷ್ಣವೀ ಯಾಽಭಿಶಪ್ತಾಽಪಿ ಬ್ರಹ್ಮಹಿಂಸಾಂ ನ ಚಾಕರೋತ್ ॥

–ಬೃಹದ್ಧರ್ಮಪುರಾಣ (೧/೭/೫೭)

ಈ ವೃಂದೆ ಎಂಬ ಸುಂದರಿಯಾದ ರಾಕ್ಷಸಿಯು ಧರ್ಮದೇವತೆಗೆ ಸೇರಿದವಳು, ವಿಷ್ಣುಭಕ್ತಳು. ಶಾಪಕ್ಕೊಳಗಾದರೂ ಬ್ರಹ್ಮಹಿಂಸೆಯನ್ನು ಮಾಡದವಳು.

ನ ವೃಥಾ ಭವಿತುಂ ಯೋಗ್ಯಾ ವಿಷ್ಣುಪ್ರೀತಿಕರೀ ತ್ವಿಯಮ್ ।
ವಿಷ್ಣುಪ್ರೀತಿಂ ಕರೋತ್ವೇಷಾ ತರುರ್ಭೂತ್ವಾ ಮಹೀತಲೇ ॥

–ಬೃಹದ್ಧರ್ಮಪುರಾಣ (೧/೭/೫೮)

ವಿಷ್ಣುವಿಗೆ ಪ್ರೀತಿಕರಳಾದ ಇವಳು ವ್ಯರ್ಥ ಎನ್ನಿಸಕೂಡದು; ಭೂಮಿಯ ಮೇಲೆ

ವೃಕ್ಷವಾಗಿ ಜನಿಸಿ ವಿಷ್ಣುವಿಗೆ ಪ್ರೀತಿಯನ್ನು ಉಂಟುಮಾಡಲಿ.

**ಶರೀರಮರ್ಚ್ಯತಾಮಸ್ಯಾಃ ಶ್ರೀವಿಷ್ಣುಪ್ರೀತಯೇ ಗಣಾಃ।**
**ಅಸ್ಯಾಃ ಪತ್ರೇಣ ವೃಂದಾಯಾಃ ಪೂಜಿತಃ ಸ್ಯಾತ್ ಸ್ವಯಂ ಹರಿಃ।**

-ಬೃಹದ್ಧರ್ಮಪುರಾಣ (೧/೭/೫೯)

ಎಲೈ ಜನರೇ! ಶ್ರೀವಿಷ್ಣುವಿನ ಪ್ರೀತಿಗೆಂದು ಇವಳ ಶರೀರವನ್ನು ಪೂಜಿಸಿರಿ. ಈ ವೃಂದೆಯ ಪತ್ರದಿಂದ ಸ್ವಯಂ ಶ್ರೀಹರಿಯು ಪೂಜಿತನಾಗುವನು.

**ನಾನ್ಯೇನೇತಿ ಸುವಿಜ್ಞೇಯಂ ಮಣಿಮುಕ್ತಾದಿನಾऽಪಿ ಚ।**
**ನಾಮಾಸ್ಯಾಸ್ತುಲಸೀತ್ಯಸ್ತು ಪವಿತ್ರಾಯಾ ಸುಪಾವನಮ್ ॥**

-ಬೃಹದ್ಧರ್ಮಪುರಾಣ (೧/೭/೬೦)

ಶ್ರೀಹರಿಯು ಇತರ ಯಾವುದೇ ಮುನಿಗಳೂ ಮತ್ತು ಮೊದಲಾದವುಗಳಿಂದಲೂ ಸಹ ತುಲಸಿಯಿಂದ ಪ್ರೀತನಾಗುವಂತೆ ಪ್ರೀತನಾಗಲಾರ. ಆದ್ದರಿಂದ ಪವಿತ್ರಳಾದ ಇವಳಿಗೆ ಅತ್ಯಂತ ಪಾವನವಾದ ತುಲಸೀ ಎಂಬ ಹೆಸರು ಉಂಟಾಗಲಿ.

**ತಕಾರೋ ಮರಣಂ ಪ್ರೋಕ್ತಂ ತದ್ಯೋಗಃ ಸ್ಯಾದುಕಾರತಃ।**
**ಮೃತಾ ಲಸತಿ ಸೇತ್ಯೇವಂ ತುಲಸೀತ್ಯೇವಗೀಯತೇ ॥**

-ಬೃಹದ್ಧರ್ಮಪುರಾಣ (೧/೭/೬೧)

ತ ಎಂದರೆ ಮರಣ, ಪು ಎಂದರೆ ಅದರ ಸಂಬಂಧ. ಒಣಗಿದರೂ ಸಹ ಪವಿತ್ರಳೇ ಎನ್ನಿಸುವ ಕಾರಣದಿಂದ ಇವಳಿಗೆ ತುಲಸೀ ಎಂದು ಹೆಸರಾಗಲಿ.

**ಸ್ಥಿತಃ ಪ್ರತಿದಲೇಷ್ವಸ್ಯಾ ಮಂತ್ರೋ ದ್ವಾದಶವರ್ಣಕಃ।**
**ಅಧಿಷ್ಠಾತ್ರೀ ದೇವತಾऽಸ್ಯಾಮಾವಾಂ ದೇವೀಮಹೇಶ್ವರೌ ॥**
**ನಾರಾಯಣ ಉಪಾಸ್ಯೋऽಸ್ಯಾಃ ಪ್ರಿಯೇಯಂ ವೈಷ್ಣವೀ ಮತಾ।**

-ಬೃಹದ್ಧರ್ಮಪುರಾಣ (೧/೭/೬೨)

ತುಲಸಿಯ ಪ್ರತಿದಳದಲ್ಲೂ ಸಹ ದ್ವಾದಶಾಕ್ಷರಮಂತ್ರವು ನೆಲೆಸಿರುವುದು. ಇವಳು ಸಕಲದೇವತೆಗಳಿಗೆ ನೆಲೆ ಎನ್ನಿಸಿರುವಳು. ಇದರಲ್ಲಿ ಪಾರ್ವತೀ-ಪರಮೇಶ್ವರರು ಸ್ಥಿತರಾಗಿರುವರು. ನಾರಾಯಣನೇ ಇವಳಿಗೆ ಉಪಾಸ್ಯದೇವತೆ. ಶ್ರೀಹರಿಗೆ ಪ್ರಿಯಳಾದ ಇವಳು ವೈಷ್ಣವೀ ಎನ್ನಿಸಿರುವಳು.

★★★

**ವಾಪೀಷು ವಿದ್ರುಮತಟಾಸ್ವಮಲಾಮೃತಾಪ್ಸು**
**ಪ್ರೇಷ್ಯಾನ್ವಿತಾ ನಿಜವನೇ ತುಲಸೀಭಿರೀಶಮ್ ।**
**ಅಭ್ಯರ್ಚತೀ ಸ್ವಲಕಮುನ್ನಸಮೀಕ್ಷ್ಯ ವಕ್ತ್ರ-**
**ಮುಚ್ಛೇಷಿತಂ ಭಗವತೇತ್ಯಮತಾಂಗ ಯಚ್ಛ್ರೀಃ ॥**

– ಶ್ರೀಮದ್ಭಾಗವತ (೩.೧೬.೨೨)

★★★

ಹವಳದ ತೀರಗಳಿಂದ ಕೂಡಿದ ನಿರ್ಮಲವಾದ, ಅಮೃತದಂತಹ ಜಲವನ್ನು ಹೊಂದಿದ ಬಾವಿಗಳಿಂದ ಕೂಡಿದ ತನ್ನ ವನದಲ್ಲಿ ಶ್ರೀಹರಿಯನ್ನು ತುಲಸೀ ದಳಗಳಿಂದ ಪೂಜಿಸುತ್ತಾ, ಮುಂಗುರುಳುಗಳಿಂದ ಕಂಗೊಳಿಸುವ ತನ್ನ ಮುಖವನ್ನು ನೋಡಿ, ಇದು ಭಗವಂತನಿಗೆ ಸಮರ್ಪಿತ ಎಂಬುದಾಗಿ ಮಹಾಲಕ್ಷ್ಮಿಯು ಭಾವಿಸಿದಳು.

## ತುಲಸಿಯಿಂದ ಕಲಿನಾಶ

ಕಲಿಯು ರುದ್ರಾದಿದೇವತೆಗಳನ್ನು ಸಹ ಮೋಹಗೊಳಿಸುವಂತಹ ಮಹಾದೈತ್ಯ. ಅಂತಹ ಕಲಿಯ ನಾಶಕ್ಕೆ ಸಮರ್ಥರಾದವರು ಶ್ರೀಹರಿವಾಯುಗಳಿಬ್ಬರೇ ಎಂಬುದು ಸುಪ್ರಸಿದ್ಧ. ಅದರಂತೆ ತುಲಸಿಯು ಸಹ ಕಲಿಯನ್ನು ನಾಶಪಡಿಸುವವಳಾಗಿರುವಳು. ಕಲಿಯನ್ನು ನಾಶಪಡಿಸುವ ಸಾಮರ್ಥ್ಯವನ್ನು ಹೊಂದಿರುವ ತುಲಸಿಯ ಮಹಿಮೆಯು ಅವಳಲ್ಲಿ ಮುಖ್ಯವಾಗಿ ಲಕ್ಷ್ಮಿಯ ಸನ್ನಿಧಾನ ಎಂಬುದಕ್ಕೆ ಗಮಕವಾಗಿದೆ.

**ತುಲಸೀಮೃತ್ತಿಕಾಲಿಪ್ತಂ ಲಲಾಟಂ ಯಸ್ಯ ದೃಶ್ಯತೇ ।**
**ಕುಲೋ ಸ್ಪೃಶತಿ ನೋ ತಸ್ಯ ಕಲಿರ್ಮುನಿವರೋತ್ತಮ ॥**

– ಪದ್ಮಪುರಾಣ

ಯಾರ ಹಣೆಯು ಮೃತ್ತಿಕೆಯ ಲೇಪನದಿಂದ ಕಂಗೊಳಿಸುವುದೋ ಅವನ ಕುಲವನ್ನು ಕಲಿಯು ಮುಟ್ಟಲಾರನು.

**ತುಲಸೀಕಾನನಂ ಯತ್ರ ಯತ್ರ ಪದ್ಮವನಾನಿ ಚ ।**
**ವಸಂತಿ ವೈಷ್ಣವಾ ಯತ್ರ ತತ್ರ ಸನ್ನಿಹಿತೋ ಹರಿಃ ॥**

– ಪದ್ಮಪುರಾಣ

ಎಲ್ಲೆಲ್ಲಿ ತುಲಸಿಯ ವನ ಇರುವುದೋ, ಕಮಲದ ವನಗಳು ಇರುವವೋ, ವೈಷ್ಣವರು ನೆಲೆಸಿರುವರೋ, ಅಲ್ಲೆಲ್ಲಾ ಶ್ರೀಹರಿಯು ಸನ್ನಿಹಿತನಾಗಿರುವನು.

★★★

# ತುಲಸೀಮೂಲದಲ್ಲಿ ಉಪಲೇಪನ

ತುಲಸಿಯ ಬುಡದ ಸುತ್ತಲಿನ ಸ್ಥಳವನ್ನು ಗೋಮಯಾದಿಗಳಿಂದ ಸ್ವಚ್ಛಗೊಳಿಸಿ, ರಂಗವಲ್ಲಿ ಮೊದಲಾದವುಗಳನ್ನು ಇರಿಸಿ, ಪೂಜಿಸುವುದು ಅಗತ್ಯ, ಇದು ಸಹ ಬೇರಾವ ವೃಕ್ಷಗಳಿಗೂ ಸಹ ವಿಗಿತವಾಗಿರದ ವಿಶೇಷ. ತುಲಸಿಯ ಸುತ್ತಲಿನ ಪ್ರದೇಶವು ಸಹ ಅತ್ಯಂತ ಪವಿತ್ರವಾದ್ದರಿಂದ ಅಲ್ಲಿ ಸಲ್ಲಿಸುವ ಸೇವೆ ತುಲಸಿಯ ಸೇವೆ ಎನ್ನಿಸಿ, ಪುಣ್ಯಪ್ರದವಾಗುವುದು, ಇದರಿಂದ ಇತರರಿಗೆ ಆ ಸ್ಥಳದ ಪಾವಿತ್ರ್ಯ ತಿಳಿಯುವಂತಾಗಿ ಅಲ್ಲಿ ಅಶುಚಿಗೊಳಿಸುವ ಪ್ರಯತ್ನಕ್ಕೆ ಯತ್ನಿಸದಂತಾಗುವುದು ಎಂಬ ಉದ್ದೇಶವು ಸಹ ಇದರಲ್ಲಿ ಕಂಡುಬರುವುದು.

**ಗೋಮಯೈಸ್ತುಲಸೀಮೂಲೇ ಯಃ ಕುರ್ಯಾದನುಲೇಪನಮ್ ।**
**ಸಮ್ಮಾರ್ಜನಂ ಚ ಕುರುತೇ ತಸ್ಯ ಪುಣ್ಯಫಲಂ ಶ್ರುಣು ॥** – ಪದ್ಮಪುರಾಣ

ಯಾವನು ಗೋಮಯಗಳಿಂದ ತುಲಸಿಯ ಬುಡದಲ್ಲಿ ಸಂಮಾರ್ಜನೆಯನ್ನು ಮಾಡುವನೋ ಅವನಿಗೆ ವರ್ಣಿಸಲಾಗದಷ್ಟು ಪುಣ್ಯವು ಲಭಿಸುವುದು.

**ರಜಾಂಸಿ ತತ್ರ ಯಾವಂತಿ ದೂರೀಭೂತಾನಿ ಜೈಮಿನೇ ।**
**ತಾವತ್ಕಲ್ಪಸಹಸ್ರಾಣಿ ಮೋದತೇ ಬ್ರಹ್ಮಣಾ ಸಹ ॥**

– ಪದ್ಮಪುರಾಣ

ತುಲಸಿಯ ಬಳಿಯಿಂದ ಮಲಿನವಾದ ಧೂಳನ್ನು ಎಷ್ಟು ದೂರದವರೆಗೆ ಸ್ವಚ್ಛಗಳಿಸುವನೋ ಅಷ್ಟು ಧೂಳಿನ ಕಣಗಳಿಗೆ ತಕ್ಕಂತೆ ಸಾವಿರಾರು ಕಲ್ಪಗಳ ಕಾಲ ಬ್ರಹ್ಮದೇವರೊಂದಿಗೆ ನೆಲೆಸಿ ಆನಂದಿಸುವನು.

★★★

# ತುಲಸೀಸ್ಪರ್ಶನದ ಫಲ

ದರ್ಶನದಂತೆ ಸ್ಪರ್ಶನವು ಸಹ ಪವಿತ್ರ ಎನ್ನಿಸಿರುವುದು ತುಲಸಿಯ ಮತ್ತೊಂದು ವಿಶೇಷತೆ. ಅಶ್ವತ್ಥ ಸಹ ಇದರಂತೆ ಸ್ಪರ್ಶಕ್ಕೆ ವಿಹಿತವಾಗಿರುವ ವೃಕ್ಷ. ಆದರೆ ಅದು ಶನಿವಾರ ಮಾತ್ರ ವಿಹಿತ; ಇತರ ದಿನಗಳಂದು ಸರ್ವಥಾ ನಿಷಿದ್ಧ. ತುಲಸಿಯ ಸ್ಪರ್ಶ ಹಾಗಲ್ಲ; ಶುದ್ಧನಾಗಿ ಯಾವುದೇ ಸಮಯದಲ್ಲೂ ಸಹ ತುಲಸಿಯನ್ನು ಸ್ಪರ್ಶಿಸಬಹುದು. ತುಲಸಿಯನ್ನು ಬಿಡಿಸಲು ತಿಥಿಕಾಲಗಳ ನಿಯಮಗಳು ಇರುವಂತೆ ಸ್ಪರ್ಶನಕ್ಕೆ ಇಲ್ಲ ಎಂಬುದು ಇನ್ನೊಂದು ಗಮನಿಸಬೇಕಾದ ಅಂಶ. ಸ್ಪರ್ಶದಿಂದಲೂ ಪಾಪನಾಶ ಎಂಬುದನ್ನು 'ವಿದ್ಯುತ್ತಿನ ಸ್ಪರ್ಶದಿಂದಲೂ ಪ್ರಾಣನಾಶ' ಎಂಬ ನಿದರ್ಶನದಿಂದ ಅರ್ಥಮಾಡಿಕೊಳ್ಳಬಹುದು.

ಗಂಗಾದಿ ತೀರ್ಥಗಳ ಸ್ಪರ್ಶನವು ಸಹ ಪಾಪಹರ ಎಂಬುದು ಸುಪ್ರಸಿದ್ಧ; ಸಾಲಿಗ್ರಾಮ ಸ್ಪರ್ಶವಂತೂ ದೇವತೆಗಳು ಮೆಚ್ಚುವಂತಹ ಮಹತ್ತರವಾದ ಪುಣ್ಯಕಾರ್ಯ. ಈ ನಿಟ್ಟಿನಲ್ಲಿ ತುಲಸಿಯ ಸ್ಪರ್ಶನದ ಮಹತ್ತ್ವವನ್ನು ಅರ್ಥಮಾಡಿಕೊಳ್ಳಬಹುದು.

**ಅಶುಚಿರ್ವಾ ಶುಚಿರ್ವಾಽಪಿ ಯಃ ಸ್ಪೃಶೇತ್ ತುಲಸೀದಲಮ್ ।**
**ಸರ್ವಪಾಪವಿನಿರ್ಮುಕ್ತಃ ತತ್ ಕ್ಷಣಾತ್ ಶುದ್ಧತಾಮಿಯಾತ್ ।**
**ಪ್ರಯಾತಿ ಚ ಪದಂ ವಿಷ್ಣೋರಂತೇ ದೇವಸುದುರ್ಲಭಮ್ ॥**

– ಪದ್ಮಪುರಾಣ

ಶುಚಿಯಾಗಿರಲಿ ಅಥವಾ ಇಲ್ಲದಿರಲಿ ಯಾವನು ತುಲಸಿಯ ದಳವನ್ನು ಸ್ಪರ್ಶಿಸುವನೋ ಅವನು ಆ ಕ್ಷಣದಲ್ಲಿಯೇ ಸಕಲ ಪಾಪಗಳಿಂದ ಮುಕ್ತನಾಗಿ, ಪರಿಶುದ್ಧನಾಗುವನು. ಅಲ್ಲದೆ, ಕೊನೆಯಲ್ಲಿ ದೇವತೆಗಳಿಗೂ ದುರ್ಲಭವೆನ್ನಿಸುವಂತಹ ವಿಷ್ಣುವಿನ ಲೋಕವನ್ನು ಹೊಂದುವನು.

**ತುಲಸೀಸ್ಪರ್ಶನಂ ಸ್ನಾನಂ ತುಲಸೀಸ್ಪರ್ಶನಂ ತಪಃ ।**
**ತುಲಸೀಸ್ಪರ್ಶನಂ ಮುಕ್ತಿಃ ತುಲಸೀಸ್ಪರ್ಶನಂ ವ್ರತಮ್ ॥** – ಪದ್ಮಪುರಾಣ

ತುಲಸಿಯ ಸ್ಪರ್ಶನವು ಒಂದು ರೀತಿಯ ಸ್ನಾನ. ತುಲಸಿಯ ಸ್ಪರ್ಶನವು ಒಂದು ರೀತಿಯ ತಪಸ್ಸು; ತುಲಸಿಯ ಸ್ಪರ್ಶನ ಮುಕ್ತಿಗೆ ಸಾಧನ; ತುಲಸಿಯ ಸ್ಪರ್ಶನವು ಒಂದು ರೀತಿಯ ವ್ರತ.

★★★

# ತುಲಸೀಪ್ರದಕ್ಷಿಣೆಯ ಫಲ

ಪ್ರದಕ್ಷಿಣೆಯು ತುಲಸಿಗೆ ವಿಹಿತವಾಗಿರುವ ಮತ್ತೊಂದು ಸೇವೆ. ಅಶ್ವತ್ಥದ ಹೊರತು ಇತರ ವೃಕ್ಷಗಳ ಪ್ರದಕ್ಷಿಣೆ ರೂಢಿಯಲ್ಲಿಲ್ಲ. ಆದರೆ ತುಲಸಿಯ ಪ್ರದಕ್ಷಿಣೆಯು ಅಶ್ವತ್ಥದ ಪ್ರದಕ್ಷಿಣೆಗಿಂತ ಮಿಗಿಲಾಗಿ ಶಾಸ್ತ್ರಗಳಲ್ಲಿ ವಿಹಿತವಾಗಿದೆ. ತುಲಸಿಯಲ್ಲಿನ ಸಕಲ ದೇವತೆಗಳ ಸನ್ನಿಧಾನದಿಂದಾಗಿ ಇದಕ್ಕೆ ಅಷ್ಟು ಮಹತ್ತ್ವ. ತುಲಸಿಯ ಪ್ರದಕ್ಷಿಣೆಗಿಂತ ಮಹಾವಿಷ್ಣು– ವನ್ನೊಳಗೊಂಡಂತೆ ಸಕಲ ದೇವತೆಗಳಿಗೂ ಸಹ ಯಥೋಚಿತವಾಗಿ ಪ್ರದಕ್ಷಿಣೆ ಸಲ್ಲಿಸಿದ ಪುಣ್ಯವು ಲಭಿಸುವುದು. ತುಲಸಿಯ ಪರಿಸರದಲ್ಲಿ ಯಥೇಚ್ಛವಾಗಿ ಪರಿಶುದ್ಧವಾದ ಗಾಳಿಯು ನೆಲೆಸಿರುವುದರಿಂದ ಪ್ರದಕ್ಷಿಣೆಯಿಂದ ದೇಹ ಹಾಗೂ ಮನಸ್ಸುಗಳಿಗೆ ಶುದ್ಧಿ, ಉಲ್ಲಾಸಗಳು ಲಭಿಸುವವು. ಅನೇಕ ಬಗೆಯ ರೋಗಾಣುಗಳ ನಾಶಕ್ಕೂ ಪ್ರದಕ್ಷಿಣೆ ಸಹಕಾರಿಯಾಗುವುದು. ತುಲಸಿಯ ಮೇಲಿಂದ ಬೀಸಿಬರುವ ಗಾಳಿಯ ಪಾವಿತ್ರ್ಯದ ವರ್ಣನೆ ಈಗಾಗಲೇ ಬಂದಿದೆ.

**ಪ್ರದಕ್ಷಿಣಾಂ ಕರೋಮಿ ತ್ವಾಂ ವೃಂದಾವನವಿಹಾರಿಣೆ ।**
**ವೃಂದಾರಕಪ್ರಿಯೇ ದೇವಿ ತುಲಸಿ ಭಕ್ತವತ್ಸಲೇ ॥** – ಪದ್ಮಪುರಾಣ

ವೃಂದಾವನದಲ್ಲಿ ವಿಹರಿಸುವ ತುಲಸಿಯೇ! ದೇವತೆಗಳಿಗೆ ಪ್ರಿಯಳಾದ ಭಕ್ತವತ್ಸಲೆಯಾದ ತುಲಸೀದೇವಿಯೇ ! ನಾನು ನಿನಗೆ ಪ್ರದಕ್ಷಿಣೆ ಮಾಡುವೆನು.

**ಪ್ರದಕ್ಷಿಣಂ ಕೃತಂ ಯೇನ ತುಲಸೀ ಮುನಿಸತ್ತಮ ।**
**ಕೃತಪ್ರದಕ್ಷಿಣಸ್ತೇನ ವಿಷ್ಣುಃ ಸಾಕ್ಷಾನ್ನ ಸಂಶಯಃ ॥** – ಪದ್ಮಪುರಾಣ

ತುಲಸಿಗೆ ಪ್ರದಕ್ಷಿಣೆ ಮಾಡುವುದರಿಂದ ಸಾಕ್ಷಾತ್ ವಿಷ್ಣುವಿಗೆ ಪ್ರದಕ್ಷಿಣೆ ಮಾಡಿದಂತಾಗುವುದು; ಸಂಶಯವಿಲ್ಲ.

**ಪ್ರದಕ್ಷಿಣೇಕುರ್ವತೇ ಯೇ ತು ದೃಷ್ಟ್ವಾತ್ವಾಂ ಯತ್ರ ಕುತ್ರಚಿತ್ ।**
**ಪ್ರಣಮಂತಿ ಚ ಯೇ ಭಕ್ತ್ಯಾ ನ ತೇ ದುಃಖಾನಿ ಯಾಂತಿ ವೈ ॥..**

– ಪದ್ಮಪುರಾಣ

ಅಮ್ಮ ತುಲಸಿ ! ಎಲ್ಲೇ ಆಗಲಿ, ನಿನ್ನನ್ನು ಕಂಡೊಡನೆಯೇ ಯಾರು ಪ್ರದಕ್ಷಿಣೆ ಮಾಡುವರೋ, ಭಕ್ತಿಯಿಂದ ನಮಸ್ಕರಿಸುವರೋ, ಅವರು ದುಃಖವನ್ನು ಸರ್ವಥಾ ಹೊಂದರು.

★★★

## ತುಲಸೀಸೇವೆಯಿಂದ ಸಂತಾನ ಫಲ

**ರಂಗವಲ್ಲೀಂ ಪುರೋ ನ್ಯಸ್ಯ ದೀಪಂ ದತ್ವಾದಿನೇ ದಿನೇ ।**
**ಪ್ರದಕ್ಷಿಣಶತಂ ಕೃತ್ವಾನಮಸ್ಕಾರಶತಂ ತಥಾ ॥**

**ಧೂಪದೀಪಾದಿನೈವೇದ್ಯೈಃ ಸ್ತೋತ್ರೇಣೈವ ವಿಶೇಷತಃ ।**
**ತೋಷಯೇತ್ ಪುತ್ರಕಾಮಾರ್ತಾ ವತ್ಸರಾತ್ ತನಯಂ ಲಭೇತ್ ॥**

– ಪದ್ಮಪುರಾಣ

ಪ್ರತಿನಿತ್ಯ ತುಲಸಿಯ ಮುಂದೆ ರಂಗೋಲಿಯನ್ನು ಹಾಕಿ, ದೀಪವನ್ನು ಹಚ್ಚಿಟ್ಟು ನೂರು ಪ್ರದಕ್ಷಿಣೆ ಹಾಗೂ ನೂರು ನಮಸ್ಕಾರಗಳನ್ನು ಸಮರ್ಪಿಸಬೇಕು, ಧೂಪ, ದೀಪ ಮೊದಲಾದವುಗಳೊಂದಿಗೆ, ನೈವೇದ್ಯದೊಂದಿಗೂ ಸ್ತೋತ್ರಗಳ ಸಮೇತ ವಿಶೇಷವಾಗಿ ಸಂತೋಷಪಡಿಸಬೇಕು. ಹೀಗೆ ಮಾಡಿದಲ್ಲಿ ಒಂದು ವರ್ಷದೊಳಗೆ ಸಂತತಿಯನ್ನು ಪಡೆಯಬಹುದು.

ಕ್ಷೀರೇಣ ವೇಕ್ಷುಸಾರೇಣ ನಾರೀಕೇಲರಸೇನ ವಾ ।
ವರ್ಧಯೇದ್ವತ್ಸರಂ ದೇವೀಂ ವಿನಿವೇದ್ಯ ಚ ಪಾಯಸಮ್ ॥
ಅನಯಾ ಪೂಜಯಾ ದೇವೀ ತೋಷಿತಾ ಸರ್ವಸಿದ್ಧಿದಾ ।
ದದಾತಿ ನಿತ್ಯಂ ವಂಧ್ಯಾಯಾಃ ಸಾಮ್ರಾಜ್ಯಂ ಚ ಪತಿಂ ಸುತಮ್ ॥

– ಪದ್ಮಪುರಾಣ

ಕ್ಷೀರ, ಕಬ್ಬಿನ ಹಾಲು, ಎಳನೀರು – ಇವುಗಳಿಂದ ಒಂದು ವರ್ಷಕಾಲ ತುಲಸಿಯನ್ನು ಬೆಳೆಸಿ, ಪಾಯಸವನ್ನು ನೈವೇದ್ಯವನ್ನಾಗಿ ಸಮರ್ಪಿಸಬೇಕು. ಇಂತಹ ಪೂಜೆಯಿಂದ ಸಂತೃಪ್ತಳಾಗುವ ಸರ್ವಸಿದ್ಧಿಪ್ರದಳಾದ ತುಲಸಿಯು ಬಂಜೆಗೂ ಸಂತತಿಯನ್ನು ನೀಡುವಳು, ಸಾಮ್ರಾಜ್ಯವನ್ನೂ, ಪತಿಯನ್ನೂ ಕರುಣಿಸುವಳು.

ಭೋಜಯೇತ್ ತುಲಸೀಪ್ರೀತ್ಯೈ ಪರಮಾನ್ನೇನ ವರ್ಣಿನಮ್ ।
ವತ್ಸರಂ ಭಾರ್ಗವೇ ವಾರೇ ವಂಧ್ಯಾ ಪುತ್ರಮವಾಪ್ನುಯಾತ್ ॥

– ಪದ್ಮಪುರಾಣ

ಒಂದು ವರ್ಷಕಾಲ ಪ್ರತಿಶುಕ್ರವಾರದಂದು ತುಲಸಿಯ ಪ್ರೀತಿಗೆಂದು ಬ್ರಹ್ಮಚಾರಿಗೆ ಪರಮಾನ್ನದ ಭೋಜನವನ್ನು ಮಾಡಿಸಬೇಕು; ಹೀಗೆ ಮಾಡಿದಲ್ಲಿ ಬಂಜೆಗೂ ಪುತ್ರನು ಜನಿಸುವನು.

★★★

## ಮಂತ್ರಜಪಕ್ಕೆ ತುಲಸಿಮಾಲೆ

ಮಂತ್ರಜಪಕ್ಕೆ ಜಪಮಾಲೆಯು ಅತ್ಯಗತ್ಯ. ಅಂತಹ ಜಪಮಾಲೆಯು ತುಲಸಿಮಾಲೆ-ಯಾಗಿದ್ದಲ್ಲಿ ಅಧಿಕವಾದ ಪುಣ್ಯ. ಇತರ ಯಾವುದೋ ಮಾಲೆಗಳಿಗಿಂತಲೂ ತುಲಸೀಮಾಲೆಯಿಂದ ಮಾಡುವ ಜಪವೇ ಶ್ರೀಹರಿಗೆ ಹೆಚ್ಚು ಪ್ರಿಯವೆನ್ನಿಸುವುದು. ಇಂತಹ ಹಿರಿಮೆ ಇತರ ಯಾವುದೇ ಮಾಲೆಗಳಿಗೂ ಇಲ್ಲ ಎಂಬುದು ತುಲಸಿಯ ಮತ್ತೊಂದು ಹಿರಿಮೆ.



ತುಲಸೀಮಾಲಯಾ ಜಪ್ತಂ ತಜ್ಜಪ್ತಂ ಹರಿಸನ್ನಿಧೌ ।
ಹರೇಸ್ತು ಸನ್ನಿಧೌ ಜಪ್ತಂ ತದನಂತಫಲಪ್ರದಮ್ ॥

– ಶಾರ್ಙ್ಗಧರಸಹಿತಾ (೩/೮೧)

ತುಲಸಿಮಾಲೆಯಿಂದ ಮಾಡಿದ ಜಪವು ಶ್ರೀಹರಿಯ ಸನ್ನಿಧಿಯಲ್ಲಿ ಮಾಡಿದ ಜಪಕ್ಕೆ ಸಮ; ತುಲಸಿಮಾಲೆಯನ್ನು ಧರಿಸಿ ಶ್ರೀಹರಿಯ ಸನ್ನಿಧಿಯಲ್ಲಿ ಮಾಡುವ ಜಪವಂತೂ ಅನಂತಕೋಟಿ ಫಲಪ್ರದ.

★★★

# ಧೂಪಕ್ಕೂ ತುಲಸಿಯು ವಿಹಿತ

ಭಗವತ್ಪೂಜಾಂಗವಾದ ಷೋಡಶೋಪಚಾರಗಳಲ್ಲಿ ಧೂಪವೂ ಒಂದು. ಅಂತಹ ಧೂಪಕ್ಕೆ ಚಂದನ, ಅಗರು ಮೊದಲಾದವುಗಳು ವಿಹಿತ. ಅವುಗಳೊಂದಿಗೆ ತುಲಸೀಕಾಷ್ಠವು ಸಹ ವಿಹಿತ ಎನ್ನುವುದು ವಿಹಿತ. ಬೇರೆ ದ್ರವ್ಯಗಳು ಅಲಭ್ಯವೆನ್ನಿಸಿದಾಗಲೂ ಕೇವಲ ತುಲಸೀಕಾಷ್ಠವನ್ನು ಘೃತದೊಂದಿಗೆ ಧೂಪಕ್ಕೆ ಉಪಯೋಗಿಸಬೇಕು.



**ಯೋ ದದಾತಿ ಹರೇರ್ಧೂಪಂ ತುಲಸೀಕಾಷ್ಠಸಂಭವಮ್ ।**
**ಶತಕ್ರತುಸಮಂ ಪುಣ್ಯಂ ಲಭತೇ ಗೋಶತಂ ಫಲಮ್ ॥**

– ಪದ್ಮಪುರಾಣ (೬/೨೪/೧೭)

ಯಾವನು ತುಲಸೀಕಾಷ್ಠದಿಂದ ಕೂಡಿದ ದೀಪವನ್ನು ಶ್ರೀಹರಿಗೆ ಸಮರ್ಪಿಸುವನೋ ಅವನಿಗೆ ನೂರು ಯಜ್ಞಗಳನ್ನು ಮಾಡಿದ ಪುಣ್ಯವು ನೂರು ಗೋವುಗಳನ್ನು ದಾನಮಾಡಿದ ಪುಣ್ಯವೂ ಲಭಿಸುವುದು.

★★★

ದಶಾಂಗವು ಧೂಪಕ್ಕೆ ವಿಹಿತವಾದ್ದು; ದಶಾಂಗಗಳಲ್ಲಿ ತುಲಸಿಯೂ ಸೇರಿದೆ. ಇತರ ಅಂಗಗಳಿಲ್ಲದೆ ಕೇವಲ ತುಲಸಿಯ ಕಾಷ್ಠದ ಪುಡಿಯಿಂದಲೂ ಧೂಪವನ್ನು ಮಾಡಬಹುದು ಎಂಬುದು ವಿಶೇಷ.



**ಯೋದದಾತಿ ಹರೇರ್ಧೂಪಂ ತುಲಸೀಕಾಷ್ಠವಹ್ನಿನಾ ।**
**ಮೇರುತುಲ್ಯಂ ಭವೇದ್ದತ್ತಂ ತದ್ದತ್ತಂ ಕೇಶವಸ್ಯ ಹಿ ॥** – ಸ್ಕಂದಪುರಾಣ

ಯಾವನು ಶ್ರೀಹರಿಗೆ ತುಲಸಿಕಾಷ್ಠದ ವಹ್ನಿಯಿಂದ ಧೂಪವನ್ನು ಸಮರ್ಪಿಸುವನೋ ಅದು ಮೇರುತುಲ್ಯವೆನ್ನಿಸುವುದು. ಕೇಶವನಿಗೆ ಅತ್ಯಂತ ಪ್ರಿಯವೆನ್ನಿಸುವುದು.

★★★

# ದೀಪಪ್ರಜ್ವಾಲನೆಗೂ ತುಲಸಿಯು ಅಗತ್ಯ

ದೀಪವನ್ನು ಎಂದೂ ನಂದದಂತೆ ನೋಡಿಕೊಳ್ಳುವುದು ಮುಖ್ಯ ಕರ್ತವ್ಯ. ಕಾರಣಾಂತರದಿಂದ ದೀಪವು ನಂದಿದ್ದಲ್ಲಿ ಅದನ್ನು ತುಲಸಿಕಾಷ್ಠದ ವಹ್ನಿಯಿಂದಲೇ ಪುನಃ ಪ್ರಜ್ವಾಲನಮಾಡಬೇಕು. ಅದರಂತೆ ನಂದಾದೀಪದಿಂದ ಇತರ ದೀಪಗಳನ್ನು ಹಚ್ಚಿಸುವಾಗಲೂ ಸಹ ತುಲಸೀಕಾಷ್ಠವನ್ನೇ ಉಪಯೋಗಿಸುವುದು ಅತ್ಯಂತ ಪ್ರಶಸ್ತವಾದುದು.



**ತುಲಸೀಪಾವಕೇನೈವ ದೀಪಂ ಯಃ ಕುರುತೇ ಹರೇಃ ।**
**ದೀಪಲಕ್ಷಸಹಸ್ರಾಣಾಂ ಪುಣ್ಯಂ ಭವತಿ ದೈತ್ಯಜ ॥** – ಸ್ಕಂದಪುರಾಣ

ತುಲಸಿಯ ವಹ್ನಿಯಿಂದಲೇ ಶ್ರೀಹರಿಗೆ ದೀಪವನ್ನು ಯಾವನು ಪ್ರಜ್ವಾಲನೆಮಾಡುವನೋ ಅವನಿಗೆ ಲಕ್ಷಸಾವಿರ ದೀಪಗಳನ್ನು ಹಚ್ಚಿದ ಪುಣ್ಯವು ಲಭಿಸುವುದು.

★★★

ದೇವರ ದೀಪವನ್ನು ಎಂದೂ ನಂದದಂತೆ ನೋಡಿಕೊಳ್ಳುವುದು ಸಾಧಕನ ಮುಖ್ಯಕರ್ತವ್ಯಗಳಲ್ಲೊಂದು. ದೀಪವು ಕುಡಿಗಟ್ಟುವುದು ಮೊದಲಾದ ಕಾರಣಗಳಿಂದ ನಂದುವ ಹಂತ ತಲುಪಿದಾಗ ಆ ದೀಪದಿಂದ ಮತ್ತೊಂದು ದೀಪವನ್ನು ಸಿದ್ಧಪಡಿಸಿಕೊಂಡು ನಂದಾದೀಪವನ್ನು ಸರಿಪಡಿಸಬೇಕು ಎಂಬುದು ಮುಖ್ಯವಿಧಿ. ನಂದಾದೀಪ ಎಂಬ ಹೆಸರು ಸಾರ್ಥಕವಾಗುವುದು ಆಗಲೇ. ಅನೇಕರು ಪೂಜಾಕಾಲದಲ್ಲಿ ಮಾತ್ರ ದೀಪವನ್ನು ಬೆಳಗಿಸಿ, ಉಳಿದ ಕಾಲದಲ್ಲಿ ನಂದಿಸುವುದುಂಟು ಅದು ಸರಿಯಲ್ಲ. ಕಾರಣಾಂತರದಿಂದ ದೀಪವು ನಂದಿದ್ದರೆ, ಅದನ್ನು ತುಲಸೀಕಾಷ್ಠದ ವಹ್ನಿಯಿಂದಲೇ ಪುನಃ ಹಚ್ಚಬೇಕು. ಬೆಂಕಿಕಡ್ಡಿಯಿಂದ ಹಚ್ಚುವುದು ಒಳಿತಲ್ಲ. ಅದರೊಂದಿಗೆ ನಂದಾದೀಪದಿಂದ ಇತರ ದೀಪಗಳನ್ನು ಹಚ್ಚುವಾಗಲೂ ಸಹ ತುಲಸೀಕಾಷ್ಠವನ್ನೇ ಉಪಯೋಗಿಸಬೇಕು. ಇಲ್ಲವಾದಲ್ಲಿ ಆ ದೀಪವು ಪೂಜೆಗೆ ಶ್ರೇಷ್ಠವೆನ್ನಿಸುವುದಿಲ್ಲ.

**ತುಲಸೀಪಾವಕೇನಾಥ ಯೋ ದೀಪಂ ಕುರುತೇ ಹರೇಃ।**
**ದೀಪಲಕ್ಷಸಹಸ್ರಾಣಾಂ ಪುಣ್ಯಂ ಸ ಲಭತೇ ಫಲಮ್ ॥**

– ಪದ್ಮಪುರಾಣ (೬/೨೪/೧೯)

ತುಲಸಿಯ ಕಾಷ್ಠದ ವಹ್ನಿಯಿಂದ ಯಾವನು ಶ್ರೀಹರಿಗೆ ದೀಪವನ್ನು ಮುಡಿಸುವನೋ ಅವನಿಗೆ ಲಕ್ಷಸಾವಿರ ದೀಪಗಳನ್ನು ಹಚ್ಚಿದ ಫಲವು ಲಭಿಸುವುದು.

★★★

# ತುಲಸೀ ಅರ್ಚನೆಯಿಂದ ಸಕಲ ಪಾಪಗಳ ಪರಿಹಾರ

**ಗುಹ್ಯಾನಿ ಯಾನಿ ಪಾಪಾನಿ ಹ್ಯನಾಖ್ಯೇಯಾನಿ ಮಾನವೈಃ।**
**ನಾಶಯೇತ್ ತುಲಸೀ ಭಕ್ತ್ಯಾ ದತ್ತಾ ಕೇಶವಮೂರ್ಧನಿ ॥** – ಪದ್ಮಪುರಾಣ

**ಪುಷ್ಪೈರ್ದ್ವಾದಶಲಕ್ಷಂ ತು ಸುವರ್ಣೈಃ ಕೋಟಿರುಚ್ಯತೇ।**
**ತತ್ಫಲಂ ಸಮವಾಪ್ನೋತಿ ತುಲಸ್ಯಾಸ್ತು ದಲೇನ ವಾ ॥** – ಶತಾನಂದಃ

**ಮಣಿಕಾಂಚನಪುಷ್ಪಾಣಿ ತಥಾ ಮುಕ್ತಾಮಯಾನಿ ಚ।**
**ತುಲಸೀಪತ್ರದಾನಸ್ಯ ಕಲಾಂ ನಾರ್ಹಂತಿ ಷೋಡಶೀಮ್ ॥**

– ವಿಷ್ಣುಧರ್ಮೋತ್ತರ

ಶ್ರೀಹರಿಗೆ ತುಲಸಿಯಿಂದ ಪೂಜಿಸುವ ಮೂಲಕ ಇತರರಿಗೆ ತಿಳಿಸಲಾಗದಂತಹ ಗುಪ್ತ ಪಾಪಗಳು ಪರಿಹಾರವಾಗುವವು. ಒಂದು ತುಲಸೀದಳದಿಂದ ಪೂಜೆಯು ಹನ್ನೆರಡು ಲಕ್ಷ ಪುಷ್ಪಗಳಿಂದ ಕೋಟಿಸುವರ್ಣಗಳಿಂದ ಮಾಡುವ ಪೂಜೆಗೆ ಸಾಟಿಯೆನ್ನಿಸುವುದು. ಮಣಿ, ಸುವರ್ಣ, ಮುತ್ತುಗಳಿಂದ ರಚಿತವಾದ ಪುಷ್ಪಗಳ ಪೂಜೆಯು ತುಲಸೀದಳಗಳನ್ನು ಸಮರ್ಪಿಸಿ ಮಾಡುವ ಪೂಜೆಯ ಹದಿನಾರನೆಯ ಒಂದಂಶಕ್ಕೂ ಸಾಟಿಯೆನ್ನಿಸದು.

★★★

## ತುಲಸಿಯ ಅಲಂಕಾರದ ದರ್ಶನವೂ ಪುಣ್ಯಕರ

**ಪರೇಣಾಂಲಂಕೃತಂ ಪುಣ್ಯಂ ತುಲಸೀಕಾನನಂ ನರಃ ।**
**ದೃಷ್ಟ್ವಾತು ಮೋದತೇ ವಿಷ್ಣೋಃ ಸಾರೂಪ್ಯಂ ಪ್ರಾಪ್ಯತೇ ನರಃ ॥**

– ವಿಷ್ಣುಧರ್ಮೋತ್ತರ

ಇತರರು ಮಾಡಿದ ತುಲಸಿಯ ಅಲಂಕಾರವನ್ನು ಹೊಂದಿದ ತುಲಸಿಯ ವನವನ್ನು ನೋಡಿ, ಆನಂದಿಸುವ ಮಾನವನು ಸಹ ವಿಷ್ಣುವಿನ ಸಾರೂಪ್ಯವನ್ನು ಪಡೆಯುವನು.

**ದಿನಂ ತಚ್ಚ ಶುಭಂ ಪ್ರೋಕ್ತಂ ತುಲಸೀ ಯತ್ರ ದೃಶ್ಯತೇ ।**
**ನ ತತ್ರ ಜಾಯತೇ ತಸ್ಯ ವಿಪತ್ತಿಃ ಕುತ್ರಚಿನ್ಮುನೇ ॥** – ವಿಷ್ಣುಧರ್ಮೋತ್ತರ

ಯಾವ ದಿನ ಮಂಗಳಕರವಾದ ತುಲಸಿಯ ದರ್ಶನವಾಗುವುದೋ ಆ ದಿನವು ಶುಭದಿನವೆನ್ನಿಸುವುದು. ಆ ದಿನದಂದು ಅವನಿಗೆ ಯಾವ ಸ್ಥಳದಲ್ಲೂ ಸಹ ಆಪತ್ತು ಸರ್ವಥಾ ಉಂಟಾಗದು.

**ಅಪಿ ಜನ್ಮಾಂತರಕೃತಂ ಪಾಪಮತ್ಯಂತಗರ್ಹಿತಮ್ ।**
**ವಿನಶ್ಯತಿ ಮುನಿಶ್ರೇಷ್ಠ ತುಲಸೀವೃಕ್ಷದರ್ಶನಾತ್ ॥** – ವಿಷ್ಣುಧರ್ಮೋತ್ತರ

ತುಲಸಿವೃಕ್ಷವನ್ನು ನೋಡುತ್ತಿದ್ದಂತೆಯೇ ಒಳಗಿನ ಹಾಗೂ ಹೊರಗಿನ ಜನ್ಮಾಂತರದಲ್ಲಿ ಮಾಡಿದ ಪಾಪವೆಲ್ಲವೂ ಸಂಪೂರ್ಣವಾಗಿ ನಾಶವಾಗುವುದು.

★★★

## ತುಲಸಿಗೆ ನೀರೆರೆಯುವುದು ಪುಣ್ಯಕರ

**ಏಕಂ ಕುಂಭೋದಕಂ ವಾಽಪಿ ಪ್ರೋಕ್ಷಯೇತ್ ತುಲಸೀವನೇ ।**
**ತಸ್ಯ ಸರ್ವೇಽಪಿ ಪಿತರಃ ಸಾನಂದಾತ್ ಸ್ವರ್ಗಮಾಪ್ನುಯುಃ ॥**

– ವಿಷ್ಣುಧರ್ಮೋತ್ತರ

ಒಂದು ಬಿಂದಿಗೆ ನೀರನ್ನಾದರೂ ಸಹ ತಪ್ಪದೆ ತುಲಸಿವನಕ್ಕೆ ಎರೆಯುವವನ ಸಕಲ ಪಿತೃಗಳು ಸಹ ಆನಂದದಿಂದ ಸ್ವರ್ಗಕ್ಕೆ ತೆರಳುವರು.

***

## ತುಲಸಿಯ ವಿವಾಹದ ಹಿರಿಮೆ

ತುಲಸಿಯ ಸೇವೆಗೆ ವಿಹಿತವಾಗಿರುವ ಮತ್ತೊಂದು ವಿಶೇಷವಾದ ಕಾರ್ಯ ತುಲಸಿಯ ವಿವಾಹ. ಅಶ್ವತ್ಥ ವಿವಾಹ ಮೊದಲಾದವುಗಳು ಸಹ ಶಾಸ್ತ್ರದಲ್ಲಿ ವಿಹಿತವಾಗಿವೆ. ಆದರೆ ಅವುಗಳಿಗೆ ಒಮ್ಮೆ ಮಾತ್ರವೇ ನಡೆಯುವಂತಹ ಸೇವೆಗಳೇ ಹೊರತು ವಾರ್ಷಿಕ ಸೇವೆಗಳೇನಲ್ಲ. ಅದರಂತೆ ಅರ್ಹರಿಗೆ, ಸೂಕ್ತವಾದ ಧನಾದಿಗಳ ನೆರವನ್ನು ನೀಡಿ ಮಾಡಿಸುವ ವಿವಾಹಗಳೂ ಸಹ ಒಂದೊಂದು ಬಾರಿಯೇ ಹೊರತು ಪುನಃಪುನಃ ಅಲ್ಲ. ಪುನಃಪುನಃ ಮಾಡುವುದು ನಿಷಿದ್ಧವೇ ಆಗಿದೆ. ಆದರೆ ತುಲಸೀವಿವಾಹ ಅತ್ಯಂತ ವಿಚಿತ್ರಬಗೆಯ ಪುಣ್ಯಕಾರ್ಯ. ಪ್ರತಿವರ್ಷದ ಕಾರ್ತೀಕಮಾಸದ ಶುಕ್ಲ ಪಕ್ಷದ ದ್ವಾದಶಿಯಂದು ತುಲಸಿಯ ವಿವಾಹವು ಶಾಸ್ತ್ರಗಳಲ್ಲಿ ವಿಹಿತವಾಗಿದೆ. ಇದು ಲಕ್ಷ್ಮೀನಾರಾಯಣರ ಕಲ್ಯಾಣವನ್ನು ಸ್ಮರಣೆಗೆ ತಂದುಕೊಡುವ ಅಪೂರ್ವವಾದ ವಿವಾಹ. ಚಾತುರ್ಮಾಸ್ಯದಲ್ಲಿ ವಿವಾಹ ಮೊದಲಾದ ಕೆಲವು ಶುಭಕಾರ್ಯಗಳು ನಿಷಿದ್ಧವೆನ್ನಿಸಿವೆ. ಚಾತುರ್ಮಾಸ್ಯಮುಗಿಯುವ ಮೊದಲ ದಿನವೇ ಉತ್ಥಾನದ್ವಾದಶಿ; ಅಂದು ಶ್ರೀಹರಿಯೊಂದಿಗೆ ತುಲಸಿಯ ವಿವಾಹಮಾಡುತ್ತಾ ವಿವಾಹಾದಿ ಶುಭಕಾರ್ಯಗಳಿಗೆ ಚಾಲನೆ ದೊರೆಯುವುದು. ಇಂತಹ ತುಲಸಿಯ ವಿವಾಹವೆಂದರೆ ಲಕ್ಷ್ಮೀನಾರಾಯಣರ ಕಲ್ಯಾಣವೇ ಸರಿ. ಅವರಿಬ್ಬರೂ ನಿತ್ಯ ದಂಪತಿಗಳು; ಸದಾ ಅವಿಯೋಗಿಗಳು ಎಂಬ ಶ್ರೇಷ್ಠ ತತ್ತ್ವವನ್ನು ಮನನ ಮಾಡಿಕೊಳ್ಳಲು ಈ ತುಲಸೀವಿವಾಹವು ಸಂಕೇತದಂತಿದೆ. ಗೃಹ, ಮಠ, ದೇವಸ್ಥಾನಗಳು ಸೇರಿದಂತೆ ಎಲ್ಲೆಡೆಗಳಲ್ಲೂ ಸಹ ತುಲಸೀವಿವಾಹವು ಕಡ್ಡಾಯವಾಗಿಯೇ ವಿಹಿತವಾಗಿದೆ. ಮತ್ತೊಂದು ರೀತಿಯಲ್ಲಿ ಇದು ಚಾತುರ್ಮಾಸ್ಯದ ಸಮಾರೋಪಸಮಾರಂಭವೂ ಆಗಿದೆ. ಅಂದು ಸಂಜೆ ವೈಭವದಿಂದ ತುಲಸಿಯ ವಿವಾಹವನ್ನು ಶ್ರೀಹರಿಯೊಂದಿಗೆ ನೆರವೇರಿಸಬೇಕು. ಮನೆಯ ಬಳಿಯ ವೃಂದಾವನದಲ್ಲಿನ ತುಲಸಿಯೊಂದಿಗೆ ಶ್ರೀಹರಿಯ ವಿವಾಹ.

**ವಿವಾಹಂ ಸಂಪ್ರವಕ್ಷ್ಯಾಮಿ ತುಲಸ್ಯಾಸ್ತು ಯಥಾವಿಧಿ ।**
**ಯಥೋಕ್ತಂ ಪಂಚರಾತ್ರೇ ವೈ ಬ್ರಹ್ಮಣಾ ಭಾಷಿತಂ ಪುರಾ ॥**

– ಹರಿಭಕ್ತಿವಿಲಾಸ

ತುಲಸಿಯ ವಿವಾಹವನ್ನು ಯಥಾವತ್ತಾಗಿ ತಿಳಿಸುವೆನು. ಪಂಚರಾತ್ರದಲ್ಲಿ ಬ್ರಹ್ಮದೇವರು ಹಿಂದೆ ತಿಳಿಸಿದ ವಿವರ ಇದು.

**ಆದಾವೇವ ವನೇ ವಾಪ್ಯ ತುಲಸೀಂ ಸ್ವಗೃಹೇಽಪಿ ವಾ ।**
**ವರ್ಷತ್ರಯೇಣ ಪೂರ್ಣೇನ ತತೋ ಯಜನಮಾರಭೇತ್ ॥**

– ಹರಿಭಕ್ತಿವಿಲಾಸ

ಆ ಮುನ್ನವೇ ವನದಲ್ಲಿ ಅಥವಾ ತನ್ನ ಮನೆಯಲ್ಲಿ ತುಲಸಿಯನ್ನು ನೆಟ್ಟು ಪೋಷಿಸಬೇಕು. ಮೂರು ವರ್ಷಗಳು ಪೂರೈಸಿದ ಬಳಿಕ ವಿಶೇಷವಾದ ಆರಾಧನೆಯನ್ನು ತುಲಸಿಗೆ ನೆಡಸಬೇಕು.

**ಸೌಮ್ಯಾಯನೇ ಪ್ರಕರ್ತವ್ಯಂ ಗುರುಶುಕ್ರೋದಯೇ ತಥಾ ।**
**ಅಥವಾ ಕಾರ್ತಿಕೇ ಮಾಸಿ ಭೀಷ್ಮ ಪಂಚದಿನೇಷು ಚ ॥**

– ಹರಿಭಕ್ತಿವಿಲಾಸ

ದಕ್ಷಿಣಾಯನದಲ್ಲಿ ಗುರುಶುಕ್ರರ ಉದಯಕಾಲದಲ್ಲಿ, ಕಾರ್ತೀಕಮಾಸದಲ್ಲಿ ಭೀಷ್ಮಪಂಚಕ ಎಂದು ವಿಹಿತವಾದ ವ್ರತದ ಕಾಲದಲ್ಲಿ ಈ ತುಲಸೀವಿವಾಹವು ಪ್ರಶಸ್ತ.

**ವೈವಾಹಿಕೇಷು ಋಕ್ಷೇಷು ಪೂರ್ಣಮಾಯಾಂ ವಿಶೇಷತಃ ।**
**ಮಂಡಪಂ ಕಾರಯೇತ್ ತತ್ರ ಕುಂಡವೇದೀಂ ತಥಾ ಪುನಃ ॥**

– ಹರಿಭಕ್ತಿವಿಲಾಸ

ವಿವಾಹಕ್ಕೆ ಯೋಗ್ಯವಾದ ನಕ್ಷತ್ರಗಳಲ್ಲಿ ವಿಶೇಷವಾಗಿ ಪೌರ್ಣಮೆಯಂದು ಈ ಕಾರ್ಯವು ಶ್ರೇಷ್ಠ. ಮಂಟಪವನ್ನು ನಿರ್ಮಿಸಿ, ಅದರಲ್ಲಿ ಕುಂಡ ಹಾಗೂ ವೇದಿಕೆಗಳನ್ನು ನಿರ್ಮಿಸಬೇಕು.

**ಶಾಂತಿಕಂ ಚ ಪ್ರಕರ್ತವ್ಯಂ ಮಾತೃಣಾಂ ಸ್ಥಾಪನಂ ತಥಾ ।**
**ಮಾತೃಶ್ರಾದ್ಧಾದಿಕಂ ಸರ್ವಂ ವಿವಾಹವತ್ ಸಮಾಚರೇತ್ ॥**
**ಬ್ರಾಹ್ಮಣಾಂಶ್ಚ ಶುಚಿಸ್ನಾತಾನ್ ವೇದವೇದಾಂಗಪಾರಗಾನ್ ।**
**ಬ್ರಹ್ಮಾ ಚಾದೇಶಕಶ್ಚೈವ ಚತ್ವಾರಶ್ಚ ತಥರ್ತ್ವಿಜಃ ॥**
**ವೈಷ್ಣವೇನ ವಿಧಾನೇನ ವರ್ಧನೀ ಕಲಶಂ ಯಜೇತ್ ।**
**ಮಂಡಪಂ ಕಾರಯೇತ್ ತತ್ರ ಲಕ್ಷ್ಮೀನಾರಾಯಣಂ ಶುಭಮ್ ॥**
**ಗ್ರಹಯಜ್ಞಂ ಪುರಃ ಕೃತ್ವಾ ಮಾತೃಣಾಂ ಯಜನಂ ತಥಾ ।**
**ಕೃತ್ವಾ ನಾಂದೀಮುಖಂ ಶ್ರಾದ್ಧಂ ಸೌವರ್ಣಂ ಸ್ಥಾಪಯೇದ್ಧರಿಮ್ ॥**

– ಹರಿಭಕ್ತಿವಿಲಾಸ

ವಿವಾಹದ ವಿಧಿಗೆ ಅನುಗುಣವಾಗಿ ನಾಂದೀಶ್ರಾದ್ಧಾದಿಗಳನ್ನು ಮಾಡಬೇಕು. ಶುಚಿಸ್ನಾತರಾದ ವೇದವೇದಾಂಗಪಾರಂಗತರಾದ ಬ್ರಾಹ್ಮಣರನ್ನು, ಆದೇಶ ನೀಡುವ

ಬ್ರಹ್ಮನನ್ನು, ನಾಲ್ಕು ಋತ್ವಿಕ್ಕುಗಳನ್ನು ವೈಷ್ಣವವಿಧಾನದಲ್ಲಿ ಯೋಜಿಸಬೇಕು. ಸೂರ್ಯನು ಅಸ್ತಮಿಸುವ ಕಾಲದಲ್ಲಿ ತುಲಸೀದಾಮೋದರರನ್ನು ಪೂಜಿಸಿ, ಶಾಸ್ತ್ರೋಕ್ತವಿಧಿಯಿಂದ ವಿವಾಹವನ್ನು ನಡೆಸಬೇಕು.

**ಕೃತ್ವಾಽರೋಪ್ಯ ಚ ತುಲಸೀಂ ಲಗ್ನೇ ತ್ವಸ್ತಮಿತೇ ರವೌ ।**
**ವಾಸಃ ಶತೇನ ಮಂತ್ರೇಣ ವಸ್ತ್ರಯುಗ್ಮೇನ ವೈಷ್ಟಯೇತ್ ॥**

**ಯದಾ[೨೫] ಬಧ್ನೇತಿ ಮಂತ್ರೇಣ ಕಂಕಣಂ ಪಾಣಿಪಲ್ಲವೇ ।**
**ಕೋಽದಾದಿತಿ[೨೬] ಚ ಮಂತ್ರೇಣ ಪಾಣಿಗ್ರಾಹೋ ವಿಧೀಯತೇ ॥**

**ತತಃ ಕುಂಡೇ ಸಮಾಗತ್ಯ ಆಚಾರ್ಯಃ ಸಹಸಾ ದ್ವಿಜೈಃ ।**
**ಆಚಾರ್ಯೋ ವೇದಿಕಾ ಕುಂಡೇ ಜುಹುಯಾಚ್ಚ ನವಾಹುತೀ ॥**

– ಹರಿಭಕ್ತಿವಿಲಾಸ

ತುಲಸೀ-ದಾಮೋದರರಿಗೆ ವಸ್ತ್ರಯುಗ್ಮಗಳನ್ನು ತೊಡಿಸಿ, ಕೈಗಳಿಗೆ ಕಂಕಣವನ್ನು ಕಟ್ಟಬೇಕು. ಪಾಣಿಗ್ರಹಣವನ್ನು ಮಾಡಿಸಬೇಕು. ಆ ಬಳಿಕ ಕುಂಡದಲ್ಲಿ ದ್ವಿಜರ ಮೂಲಕ ಒಂಭತ್ತು ಆಹುತಿಗಳನ್ನು ಸಮರ್ಪಿಸಬೇಕು.

**ವಿವಾಹಕರ್ಮವತ್ಸರ್ವಂ ವೈಷ್ಣವಂ ದೇಶಿಕೋತ್ತಮೈಃ ।**
**ಕರ್ತವ್ಯಶ್ಚ ತತೋ ಹೋಮೋ ವಿಶೇಷಾದ್ವಿಧಿಪೂರ್ವಕಮ್ ॥**
– ಹರಿಭಕ್ತಿವಿಲಾಸ

ವಿವಾಹಕಾರ್ಯದಲ್ಲಿ ನಡೆಯುವಂತೆ ಹೇಗೋ ಹಾಗೆ ಹೋಮಾದಿಗಳನ್ನು ವಿಧಿಪೂರ್ವಕವಾಗಿ ನಡೆಸಬೇಕು.

**ಯಜಮಾನಃ ಸಪತ್ನೀಕೋ ಹ್ಯನ್ಯೇ ಯೇ ಗೋತ್ರಬಾಂಧವಾಃ ।**
**ಪ್ರದಕ್ಷಿಣಾಶ್ಚ ಕರ್ತವ್ಯಾಶ್ಚತ್ವಾರೋ ವಿಷ್ಣುನಾ ಸಹ ।** – ಹರಿಭಕ್ತಿವಿಲಾಸ

ಯಜಮಾನನು ಸಪತ್ನೀಕವಾಗಿ ಹಾಗೂ ಇತರ ಗೋತ್ರಬಾಂಧವರು ನಾಲ್ಕು ಪ್ರದಕ್ಷಿಣೆಗಳನ್ನು ಹಾಕಬೇಕು.

**ತುಲಸ್ಯಾಃ ಪಾಣಿಗ್ರಹಣೇ ವೇದಿಕಾಯಾಂ ವಿಭಾವಸೌ ।**
**ಶಾತಕುಂಭಂ ಜಪೇತ್ ಸೂಕ್ತಂ ಪಾವಮಾನೀಂ ವಿಶೇಷತಃ ॥** – ಹರಿಭಕ್ತಿವಿಲಾಸ

---

೨೫ ಅಥರ್ವವೇದ (೧/೩.೫/೧)

೨೬ ಯಜುರ್ವೇದ (೭/೪೮)

ಪಾಣಿಗ್ರಹಣಕಾಲದಲ್ಲಿ ವೇದಿಕೆಯಲ್ಲಿ ಪವಮಾನಸೂಕ್ತ ಮೊದಲಾದವುಗಳನ್ನು ಹಾಗೆಯೇ ಶಾಂತಿಸೂಕ್ತಗಳನ್ನು ಇತರ ವೈಷ್ಣವಸೂಕ್ತಗಳನ್ನೂ ಪಠಿಸಬೇಕು. ಶಂಖ, ಭೇರಿ ಮೊದಲಾದ ಮಂಗಳವಾದ್ಯಗಳೊಂದಿಗೆ ವಿವಾಹಕಾರ್ಯವನ್ನು ನಡೆಸಬೇಕು.

**ತಥೈವ ಶಾಂತಿಕಾಧ್ಯಾಯಂ ನವಸೂಕ್ತೀಂ ತಥೈವ ।**
**ಜೀವಸೂಕ್ತಂ ಪುನರ್ಜಪ್ತ್ವಾ ತಥಾ ವೈಷ್ಣವಸಂಹಿತಾಮ್ ॥**

**ಶಂಖಭಲ್ಲರಿನಿರ್ಘೋಷೈರ್ಭೇರೀತೂರ್ಯಸ್ಯ ನಿಃಸ್ವನೈಃ ।**
**ಗಾಯಂತಿ ಮಂಗಲಾ ನಾರ್ಯೋ ಮಾಂಗಲ್ಯಂ ವಿಧಿಮಾಚರೇತ್ ॥**

**ದದ್ಯಾತ್ ಪೂರ್ಣಾಹುತಿಂ ಪಶ್ಚಾದಭಿಷೇಕವಿಧಿಂ ತತಃ ।**
**ಬ್ರಹ್ಮಣೇ ವೃಷಭಂ ದದ್ಯಾದಾಚಾರ್ಯಂ ಪರಿಧಾಪ್ಯ ಚ ॥**

**ಗಾಂ ಪಟಂ ಚ ತಥಾ ಶಯ್ಯಾಮಾಚಾರ್ಯಾಯ ಪ್ರದಾಪಯೇತ್ ।**
**ಋತ್ವಿಗ್ಭ್ಯೋ ದಾಪಯೇದ್ವಸ್ತ್ರಾಣ್ಯೇಷಾಂ ದದ್ಯಾಚ್ಚ ದಕ್ಷಿಣಾಮ್ ॥**

– ಹರಿಭಕ್ತಿವಿಲಾಸ

ಬಳಿಕ ಮಂಗಳಸ್ನಾನವನ್ನು ಮಾಡಿಸಿ, ಬ್ರಹ್ಮಸ್ಥಾನದ ಆಚಾರ್ಯರಿಗೆ ವೃಷಭವನ್ನು ದಾನವಾಗಿ ನೀಡಬೇಕು. ಅದರಂತೆ ಗೋವನ್ನು ವಸ್ತ್ರಗಳನ್ನು, ಶಯ್ಯೆಯನ್ನು ಋತ್ವಿಜರಿಗೆ ಅರ್ಪಿಸಬೇಕು. ಇತರರಿಗೆಲ್ಲಾ ವಸ್ತ್ರಗಳನ್ನೂ ದಕ್ಷಿಣೆಯನ್ನೂ ನೀಡಬೇಕು.

★★★

# ತುಲಸೀಕಾಷ್ಠದ ಹೋಮ

ಅನೇಕ ಗಿಡಮರಗಳು ಅವು ನೀಡುವ ಹೂವುಹಣ್ಣುಗಳಿಂದಾಗಿ ಭಗವತ್ಪೂಜೆಗೆ ವಿಹಿತವೆನ್ನಿಸಿವೆ. ಮಾವು ತೋರಣಕ್ಕೆ, ಬಾಳೆಯು ಮಂಟಪಕ್ಕೆ ಮೊದಲಾಗಿ ಅವುಗಳ ಉಪಯೋಗ ಅನೇಕಬಗೆಯದು. ಆದರೆ ಎಲ್ಲ ವೃಕ್ಷಗಳ ಸಮಿತ್ತು ಸಹ ಹೋಮಕ್ಕೆ ಶ್ರೇಷ್ಠವೆಂಬುದಾಗಿ ವಿಹಿತವಾಗಿಲ್ಲ. ಶಮೀ, ಅಶ್ವತ್ಥ ಮೊದಲಾದವುಗಳ ಸಮಿತ್ತು ವಿಶೇಷ ಎನ್ನಿಸಿವೆ. ಆದರೆ ತುಲಸೀ ಕಾಷ್ಠ ಅತ್ಯಂತ ಶ್ರೇಷ್ಠವಾದ ಸಮಿತ್ತು ಎಂಬುದಾಗಿ ಹೋಮಕಾರ್ಯಕ್ಕೆ ವಿಹಿತವಾಗಿವೆ. ಇತರ ಸಮಿತ್ತುಗಳು ಸಹ ಶ್ರೇಷ್ಠ ಎನ್ನಿಸುವುದು ತುಲಸೀಕಾಷ್ಠದಿಂದ ಒಡಗೂಡಿದಾಗಲೇ. ಇದರಿಂದಾಗಿ ಇತರ ಕಾರ್ಯಗಳಲ್ಲಿ ಹೇಗೋ ಹಾಗೆ ಹೋಮಕಾರ್ಯದಲ್ಲೂ ಸಹ ತುಲಸಿಗೆ ಅಗ್ರಸ್ಥಾನ. ತುಲಸಿಯು ಹೋಮಕ್ಕೆ ವಿಹಿತ ಎಂಬುದನ್ನು ಶ್ರೀಮದಾಚಾರ್ಯರು ತಂತ್ರಸಾರಸಂಗ್ರಹದಲ್ಲಿ ತಿಳಿಸಿರುವರು :

ವಿದ್ಯಾಯೈ ಮಂತ್ರಿತಂ ವಾರಿ ವಚಾಂ ವಾ ತುಲಸೀಮಪಿ ।

– ತಂತ್ರಸಾರಸಂಗ್ರಹ (೪/೧೨೦)

ವಿದ್ಯಾಪ್ರಾಪ್ತಿಗಾಗಿ ಅಭಿಮಂತ್ರಿತವಾದ ಜಲವನ್ನು ಬಜೆಯನ್ನು ಹಾಗೂ ತುಲಸಿಯನ್ನು ಸಹ ಹೋಮಿಸಬೇಕು.

ಹೋಮಂ ಕುರ್ವಂತಿ ಯೇ ವಿಪ್ರಾಸ್ತುಲಸೀಕಾಷ್ಠವಹ್ನಿನಾ ।
ಶಿಕ್ಥೇ ಶಿಕ್ಥೇ ತಿಲೇ ವಾऽಪಿ ಅಗ್ನಿಷ್ಟೋಮಫಲಂ ಲಭೇತ್ ॥

– ಪದ್ಮಪುರಾಣ (೬/೨೪/೧೬)

ಯಾವ ವಿಪ್ರರು ತುಲಸೀಕಾಷ್ಠದಿಂದ ಬೆಳಗುವ ವಹ್ನಿಯಲ್ಲಿ ಹೋಮವನ್ನು ಮಾಡುವರೋ ಅವರು ಪ್ರತಿಹವಿಸ್ಸಿಗೂ ಸಹ ಅಗ್ನಿಷ್ಟೋಮಯಾಗದ ಫಲವನ್ನು ಪಡೆಯುವರು.

***

## ನೈವೇದ್ಯದ ಅಡುಗೆಗೂ ತುಲಸೀಕಾಷ್ಠವು ವಿಹಿತ

ನೈವೇದ್ಯದ ಅಡುಗೆಗೆ ಕಾಷ್ಠ ಅತ್ಯಗತ್ಯ. ಆದರೆ ಎಲ್ಲ ಬಗೆಯ ವೃಕ್ಷಗಳೂ ಸಹ ಅಡುಗೆಗೆ ವಿಹಿತವಾಗಿಲ್ಲ. ವಿಹಿತವಾಗಿರುವ ಕಾಷ್ಠಗಳು ಸಹ ನೈವೇದ್ಯದ ಪಾಕಕ್ಕೆ ಅರ್ಹವೆನ್ನಿಸಲು ತುಲಸೀಕಾಷ್ಠವು ಅತ್ಯಗತ್ಯ. ನೈವೇದ್ಯಸಮರ್ಪಣೆ ಮಾತ್ರವಲ್ಲದೆ ನೈವೇದ್ಯದ ಅಡುಗೆಯ ಪಾಕಕ್ಕೂ ಸಹ ಅತ್ಯಗತ್ಯವೆನ್ನಿಸಿರುವುದು ತುಲಸಿಯ ವಿಶೇಷ ಮಹತ್ತ್ವ.

ನೈವೇದ್ಯಂ ಪಚತೇ ಯಸ್ತು ತುಲಸೀಕಾಷ್ಠವಹ್ನಿನಾ ।
ಮೇರುತುಲ್ಯಂ ಭವೇದ್ದತ್ತಂ ತದನ್ನಂ ಕೇಶವಸ್ಯ ಹಿ ॥

– ಪದ್ಮಪುರಾಣ (೬/೨೪/೧೮)

ಯಾವನು ತುಲಸೀಕಾಷ್ಠದ ವಹ್ನಿಯಿಂದ ನೈವೇದ್ಯದ ಅಡುಗೆಯನ್ನು ಪಾಕಮಾಡಿ ಶ್ರೀಹರಿಗೆ ಸಮರ್ಪಿಸುವನೋ ಅವನು ಅಂತಹ ಅಡುಗೆಯ ನೈವೇದ್ಯದಿಂದ ಮೇರುಪರ್ವತದಷ್ಟು ಪುಣ್ಯವನ್ನು ಪಡೆದುಕೊಳ್ಳುವನು.

***

## ಮರಣಕಾಲದಲ್ಲಿ ತುಲಸಿಯ ಮಹತ್ತ್ವ

ಮರಣಕಾಲ ಜೀವನದ ಅತ್ಯಂತ ದುರ್ಭರವಾದ ಕಾಲ. ಬದುಕಿನ ಎಲ್ಲ ದುಃಖಗಳಿಗಿಂತಲೂ ಗರ್ಭವಾದ ದುಃಖ ಹೆಚ್ಚು ತೀವ್ರವಾದುದು. ಅದಕ್ಕಿಂತಲೂ ಹೆಚ್ಚು

ದುರ್ಭರವಾದ ದುಃಖ ಮರಣಕಾಲದ್ದು. ಮರಣಕಾಲದಲ್ಲಿ ಅಪೇಕ್ಷಿತವಾದದ್ದು ಎರಡು. ಒಂದು ಅನಾಯಾಸದ ಸುಖಮರಣ, ಮತ್ತೊಂದು ಉತ್ತಮವಾದ ಪುನರ್ಜನ್ಮಕ್ಕೆ ನಾಂದಿ. ಇವೆರಡನ್ನೂ ಸಹ ಸಾಧಿಸುವುದೇ ಜೀವನದ ಮಹಾಸಿದ್ಧಿ. ಇಹಲೋಕದ ಸುಖದತ್ತ ಹೆಚ್ಚಿನ ಗಮನಹರಿಸುವ ಜನ ಅಂತ್ಯಕಾಲ ಹಾಗೂ ಪರಲೋಕದ ಬಗ್ಗೆ ಯಾವುದೇ ಚಿಂತನೆಯನ್ನು ಮಾಡುವುದಿಲ್ಲ ಎಂಬುದು ಸೋಜಿಗದ ಸಂಗತಿ. ಮರಣವು ಸರ್ವರಿಗೂ ನಿಶ್ಚಿತ. ಅದಕ್ಕೆ ವಯಸ್ಸಿನ ಅಥವಾ ಕಾಲದ ಹಂಗಿಲ್ಲ. ಅಂತಹ ನಿಶ್ಚಿತವಾದ ಮರಣದ ಬಗ್ಗೆ ಮಾತ್ರವೇ ನಿಶ್ಚಿಂತೆಯಿಂದ ಇರುವುದು ಜನರ ಮಹಾ ಅವಿವೇಕಕ್ಕೆ ಸೂಚಕ. ಮರಣಕಾಲವು ಹೇಗೋ ಹಾಗೆ ಮರಣಕಾಲದ ಅನಂತರದ ಉತ್ತರಕ್ರಿಯೆಗಳು ಸಹ ಜೀವಿಯ ಸದ್ಗತಿಪ್ರಾಪ್ತಿಗೆ ಗಣನೀಯವೆನ್ನಿಸುವವು. ಅಂತ್ಯಕಾಲದಲ್ಲಿ ತುಲಸಿಯ ಧಾರಣೆ, ತುಲಸೀತೀರ್ಥದ ಪ್ರಾಶನ, ತುಲಸಿಯ ಸನ್ನಿಧಿ ಮೊದಲಾದ ಪ್ರತಿಯೊಂದು ಸಹ ಸದ್ಗತಿಗೆ ಸಾಧಕ. ತುಲಸಿಯು ಭಗವಂತನೊಂದಿಗೆ ಹೊಂದಿರುವ ನಿಕಟವಾದ ನಂಟೇ ಇದಕ್ಕೆ ಮುಖ್ಯಕಾರಣ.



**ಶರೀರಂ ದಹ್ಯತೇ ಯೇಷಾಂ ತುಲಸೀಕಾಷ್ಠವಹ್ನಿನಾ ।**
**ನ ತೇಷಾಂ ಪುನರಾವೃತ್ತಿರ್ವಿಷ್ಣುಲೋಕಾತ್ ಕಥಂಚನ ॥**

– ಪದ್ಮಪುರಾಣ (೬/೨೪/೩)

ಯಾರ ಶರೀರವು ತುಲಸೀಕಾಷ್ಠದ ವಹ್ನಿಯಿಂದ ದಹಿಸಲ್ಪಡುವುದೋ ಅಂತಹವರಿಗೆ ವಿಷ್ಣುಲೋಕದಿಂದ ಯಾವುದೇ ರೀತಿಯಲ್ಲೂ ಸಹ ಮರಳುವ ಪ್ರಸಂಗವು ಹುಟ್ಟದು.



**ಗ್ರಸ್ತೋ ಯದಿ ಮಹಾಪಾಪೈರಗಮ್ಯಾಗಮನಾದಿಕೈಃ ।**
**ಮೃತಃ ಶುಷ್ಯತಿ ದೇಹೇನ ತುಲಸೀಕಾಷ್ಠವಹ್ನಿನಾ ॥** – ಪದ್ಮಪುರಾಣ (೬/೨೪/೪)

ಅಗಮ್ಯಾಗಮನ ಮೊದಲಾದ ಮಹಾಪಾತಕಗಳಿಂದ ಕೂಡಿದ್ದರೂ ಸಹ ಯಾರ ಮೃತದೇಹಕ್ಕೆ ತುಲಸೀಕಾಷ್ಠದ ವಹ್ನಿಯಿಂದ ದಹನವಾಗುವುದೋ ಅವರಿಗೆ ಪಾಪಗಳು ನಾಶವಾಗುವವು.

**ದತ್ವಾ ಚ ತುಲಸೀಕಾಷ್ಠಂ ಸರ್ವಾಂಗೇಷು ಮೃತಸ್ಯ ವೈ ।**
**ಪಶ್ಚಾದ್ಯಃ ಕುರುತೇ ದಾಹಂ ಸೋಽಪಿ ಪಾಪಾತ್ ಪ್ರಮುಚ್ಯತೇ ॥**

– ಪದ್ಮಪುರಾಣ (೬/೨೪/೫)

ಮೃತನ ಸಕಲ ಅವಯವಗಳಲ್ಲೂ ತುಲಸಿಯ ಕಾಷ್ಠವನ್ನಿರಿಸಿ ಬಳಿಕ ದಹನವನ್ನು ಮಾಡಿದರೆ, ಅವನು ಪಾಪಗಳಿಂದ ಬಿಡುಗಡೆಯನ್ನು ಹೊಂದುವನು.

**ಮರಣೇ ಯಸ್ಯ ಸಂಪ್ರಾಪ್ತಂ ಕೀರ್ತನಂ ಸ್ಮರಣಂ ಹರೇಃ ।**
**ತುಲಸೀದಾರುಣಾ ದಾಹೋ ನ ತಸ್ಯ ಪುನರಾಗತಿಃ ॥**

– ಪದ್ಮಪುರಾಣ (೬/೨೪/೬)

ಮರಣಕಾಲದಲ್ಲಿ ಶ್ರೀಹರಿಯ ಕೀರ್ತನ, ಸ್ಮರಣೆಗಳು ಒದಗಿ ಯಾವನ ದೇಹವು ತುಲಸೀ ಕಾಷ್ಠದಿಂದ ದಹನಗೊಳ್ಳುವುದೋ ಅವನಿಗೆ ಪುನರ್ಜನ್ಮವು ಇರದು.

**ಯದ್ಯೇಕಂ ತುಲಸೀಕಾಷ್ಠಂ ಮಧ್ಯೇ ಕಾಷ್ಠಸ್ಯ ತಸ್ಯ ಹಿ ।**
**ದಾಹಕಾಲೇ ಭವೇನ್ಮುಕ್ತಿಃ ಕೋಟಿಪಾಪಯುತಸ್ಯ ಚ ॥**

– ಪದ್ಮಪುರಾಣ (೬/೨೪/೭)

ದಹನಮಾಡುವ ಕಾಷ್ಠಗಳಲ್ಲಿ ಒಂದಾದರೂ ತುಲಸೀಕಾಷ್ಠವಿದ್ದಲ್ಲಿ ಕೋಟಿಪಾಪಗಳನ್ನು ಹೊಂದಿದ್ದವನೂ ಸಹ ಅವುಗಳಿಂದ ಬಿಡುಗಡೆಹೊಂದುವನು.

**[೨೭]ಗಂಗಾಂಭಸಾಽಭಿಷೇಕೇಣ ಯಾಂತಿ ಪುಣ್ಯಾನಿ ಪುಣ್ಯತಾಮ್ ।**
**ತುಲಸೀಕಾಷ್ಠಮಿಶ್ರಾಣಿ ಯಾಂತಿ ದಾರೂಣಿ ಪುಣ್ಯತಾಮ್ ॥**

– ಪದ್ಮಪುರಾಣ (೬/೨೪/೮)

ಗಂಗೆಯ ಜಲದ ಅಭಿಷೇಕದಿಂದ ಪುಣ್ಯಕಾರ್ಯಗಳು ಹೆಚ್ಚು ಪುಣ್ಯಕರವೆನ್ನಿಸುವವು. ಅದರಂತೆ ತುಲಸೀಕಾಷ್ಠದೊಂದಿಗೆ ಒಡಗೂಡಿದಾಗ ಇತರ ಕಾಷ್ಠಗಳು ಪವಿತ್ರವೆನ್ನಿಸುವವು.

**ತುಲಸೀಕಾಷ್ಠಸಂಮಿಶ್ರಾ ಯಾವತ್ಪ್ರಜ್ವಲಿತಾ ಚಿತಾ ।**
**ದಹ್ಯಂತೇ ತಸ್ಯ ಪಾಪಾನಿ ಕಲ್ಪಕೋಟಿಕೃತಾನಿ ಚ ॥**

– ಪದ್ಮಪುರಾಣ (೬/೨೪/೯)

ತುಲಸೀಕಾಷ್ಠದಿಂದ ಒಡಗೂಡಿದ ಚಿತೆಯು ಪ್ರಜ್ವಲಿಸುತ್ತಿದ್ದಂತೆ ಆ ಜೀವಿಯ ಕೋಟಿಕಲ್ಪಗಳಿಂದ ಮಾಡಿದ ಪಾಪಗಳೆಲ್ಲಾ ಭಸ್ಮವಾಗುವವು.

**ದಹ್ಯಮಾನಂ ನರಂ ದೃಷ್ಟ್ವಾ ತುಲಸೀಕಾಷ್ಠವಹ್ನಿನಾ ।**
**ನಯಂತಿ ತಂ ವಿಷ್ಣುದೂತಾ ನ ಚ ವೈ ಯಮಕಿಂಕರಾಃ ॥**

– ಪದ್ಮಪುರಾಣ (೬/೨೪/೧೦)

ತುಲಸೀಕಾಷ್ಠದಿಂದ ಯಾವ ಮನುಷ್ಯನ ದೇಹವು ದಹಿಸಲ್ಪಡುವುದೋ ಅಂತಹ ಮನುಷ್ಯನನ್ನು ವಿಷ್ಣುದೂತರು ಕರೆದೊಯ್ಯುವರು. ಆದರೆ ಯಮದೂತರು ಸರ್ವಥಾ ಕರೆದೊಯ್ಯರು.

---

೨೭ ಗಂಗಾಂಭಸೋ ವಿಶೇಷಣ ಯಾಂತಿ ತೋಯಾನಿ ಪುಣ್ಯತಾಮ್ ।
ತುಲಸೀಕಾಷ್ಠಮಿಶ್ರಾಣಿ ಯಾಂತಿ ದಾರೂಣಿ ಪೂತತಾಮ್ ॥ – ಗರುಡಪುರಾಣ

**ಜನ್ಮಕೋಟಿಸಹಸ್ರೈಸ್ತು ಮುಕ್ತೋ ಯಾತಿ ಜನಾರ್ದನಮ್ ।**
**ದಹ್ಯಂತೇ ಯೇ ನರಾ ಲೋಕೇ ತುಲಸೀಕಾಷ್ಠವಹ್ನಿನಾ ॥**

– ಪದ್ಮಪುರಾಣ (೬/೨೪/೧೧)

ಯಾವ ಮನುಷ್ಯನು ತುಲಸೀಕಾಷ್ಠದ ವಹ್ನಿಯಿಂದ ದಹಿಸಲ್ಪಡುವನೋ ಅವನು ಸಾವಿರ ಕೋಟಿ ಜನ್ಮಗಳಿಂದ ಬಿಡುಗಡೆಹೊಂದಿ ಜನಾರ್ದನನಾದ ಶ್ರೀಹರಿಯನ್ನು ಹೊಂದುವನು.

**ತಾನ್ ವಿಮಾನಸ್ಥಿತಾನ್ ದೇವಾಃ ಕ್ಷಿಪಂತಿ ಕುಸುಮಾಂಜಲಿಮ್ ।**
**ನೃತ್ಯಂತ್ಯಮಪ್ಸರಸಃ ಸರ್ವಾ ಗೀತಂ ಗಾಯಂತಿ ಗಾಯಕಾಃ ॥**

– ಪದ್ಮಪುರಾಣ (೬/೨೪/೧೨)

ಅಂತಹವರ ಮೇಲೆ ವಿಮಾನದಲ್ಲಿ ನೆಲೆಸಿದ ದೇವತೆಗಳು ಪುಷ್ಪವೃಷ್ಟಿಯನ್ನು ಸುರಿಸುವರು; ಅಪ್ಸರೆಯರು ನರ್ತಿಸುವರು; ಗಂಧರ್ವರು ಗೀತೆಗಳನ್ನು ಹಾಡುವರು.

**ಜಾಯತೇ ವೀಕ್ಷ್ಯ ತಂ ವಿಷ್ಣುಃ ಸಂತುಷ್ಟಃ ಶಂಭುನಾ ಸಹ ।**
**ಗೃಹೀತ್ವಾ ತಂ ಕರೇ ಶೌರಿರ್ಗೃಹಂ ನೀತ್ವಾಽಸ್ಯ ಚಾಗ್ರತಃ ॥**

– ಪದ್ಮಪುರಾಣ (೬/೨೪/೧೩)

**ಮಾರ್ಜಯೇತ್ ಸರ್ವಪಾಪಾನಿ ಪಶ್ಯತಾಂ ತ್ರಿದಿವೌಕಸಾಮ್ ।**
**ಮಹೋತ್ಸವಂ ಕಾರಯಿತ್ವಾ ಜಯಶಬ್ದಪುರಸ್ಸರಮ್ ॥**

– ಪದ್ಮಪುರಾಣ (೬/೨೪/೧೪)

ಅಂತಹವನನ್ನು ನೋಡಿ ಹರನೊಂದಿಗೆ ಹರಿಯೂ ಸಹ ಸಂತುಷ್ಟನಾಗುವನು. ಶ್ರೀಹರಿಯು ಅವನ ಕೈಹಿಡಿದು ಮುಂದಕ್ಕೆ ಕರೆದುಕೊಳ್ಳುವನು; ದೇವತೆಗಳು ನೋಡು-ತ್ತಿದ್ದಂತೆಯೇ ಜಯಕಾರವನ್ನು ಹಾಕುತ್ತಾ ಅವನ ಸಕಲ ಪಾಪಗಳನ್ನು ಸಹ ಬೂದಿ ಮಾಡುವನು.

**ಜ್ವಲತೇ ಯತ್ರ ಚಾಜ್ಯೇನ ತುಲಸೀಕಾಷ್ಠಪಾವಕಃ ।**
**ಅಗ್ನ್ಯಾಗಾರೇ ಶ್ಮಶಾನೇ ವಾ ದಹ್ಯತೇ ಪಾತಕಂ ನೃಣಾಮ್ ॥**

– ಪದ್ಮಪುರಾಣ (೬/೨೪/೧೫)

ತುಲಸೀಕಾಷ್ಠದ ವಹ್ನಿಯಿಂದ, ತುಪ್ಪದಿಂದ, ಸ್ಮಶಾನದಲ್ಲಿ ಚಿತೆಯನ್ನು ಉರಿಸಿದಾಗ, ಮನುಷ್ಯರ ಸಕಲ ಪಾತಕಗಳೂ ಸಹ ಬೂದಿಯಾಗುವವು.

**ತುಲಸೀಮಂಜರೀಯುಕ್ತೋ ಯಸ್ತು ಪ್ರಾಣಾನ್ ವಿಮುಂಚತಿ ।**
**ಯಮೋಽಪಿ ನೇಕ್ಷಿತುಂ ಶಕ್ತೋ ಯುಕ್ತಂ ಪಾಪಶತೈರಪಿ ॥**

–ಪದ್ಮಪುರಾಣ, ಉತ್ತರಖಂಡ (೬); ಸ್ಕಂದಪುರಾಣ (೨/೪/೨೩/೧೫)

ತುಲಸೀಮಂಜರಿಗಳಿಂದ ಕೂಡಿದವನಾಗಿ ಯಾವನು ಪ್ರಾಣಗಳನ್ನು ತೊರೆಯುವನೋ ಅವನನ್ನು ಅವನು ನೂರಾರು ಪಾಪಗಳಿಂದ ಕೂಡಿದ್ದರೂ ಸಹ ಯಮನು ಕಣ್ಣೆತ್ತಿ ನೋಡನು.

**[೨೮]ತುಲಸೀಮಂಜರೀಯುಕ್ತೋ ಯಸ್ತು ಪ್ರಾಣಾನ್ ವಿಮುಂಚತಿ ।**
**ವಿಷ್ಣೋಃ ಸಾಯುಜ್ಯಮಾಪ್ನೋತಿ ಸತ್ಯಂ ಸತ್ಯಂ ನೃಪೋತ್ತಮ ॥**

– ಪದ್ಮಪುರಾಣ (೬/೧೦೭/೧೫)

ತುಲಸೀಮಂಜರಿಯಿಂದ ಕೂಡಿದವನಾಗಿ ಯಾವನು ಪ್ರಾಣವನ್ನು ತೊರೆಯುವನೋ ಅವನು ವಿಷ್ಣುವಿನ ಸಾಯುಜ್ಯವನ್ನು ಪಡೆಯುವನು. ಇದು ಸತ್ಯ ಸತ್ಯ.

**ಯಸ್ಯ ಸ್ಯಾತ್ ತುಲಸೀಪತ್ರಂ ಮುಖೇ ಶಿರಸಿ ಕರ್ಣಯೋಃ ।**
**ಮೃತ್ಯುಕಾಲೇ ದ್ವಿಜಶ್ರೇಷ್ಠ ತತ್ರ ಸ್ವಾಮೀ ನ ಭಾಸ್ಕರಿಃ ॥**

– ಪದ್ಮಪುರಾಣ, ಕ್ರಿಯಾಯೋಗಸಾರ

ಮರಣಕಾಲದಲ್ಲಿ ಯಾರ ಮುಖದಲ್ಲಿ, ಶಿರಸ್ಸಿನಲ್ಲಿ, ಎರಡು ಕಿವಿಗಳಲ್ಲಿ, ತುಲಸಿಯ ಪತ್ರವು ಇರುವುದೋ ಅಂತಹವನಿಗೆ ಎಂದೂ ಯಮನ ಭಯವಾಗಲಿ, ಶನಿಯ ಭಯವಾಗಲಿ, ಇರದು.

**[೨೯]ತುಲಸೀಮೃತ್ತಿಕಾಲಿಪ್ತೋ ಯಸ್ತು ಪ್ರಾಣಾನ್ ವಿಮುಂಚತಿ ।**
**ಯಮೋಽಪಿ ನೇಕ್ಷಿತುಂ ಶಕ್ತೋ ಯುಕ್ತಂ ಪಾಪಶತೈರಪಿ ॥**

– ಪದ್ಮಪುರಾಣ (೬/೧೦೭/೧೬)

ತುಲಸಿಯ ಮೃತ್ತಿಕೆಯಿಂದ ಲೇಪಹೊಂದಿದವನಾಗಿ ಯಾವನು ಪ್ರಾಣಗಳನ್ನು ತೊರೆ–ಯುವನೋ ಅವನು ನೂರಾರು ಪಾಪಗಳಿಂದ ಕೂಡಿದ್ದರೂ ಅವನನ್ನು ಯಮನು ಕಣ್ಣೆತ್ತಿ ನೋಡಲಾರ.

---

೨೮ ಗರುಡಪುರಾಣ (೯/೮)

೨೯ ತುಲಸೀಮೃತ್ತಿಕಾಲಿಪ್ತೋ ಯದಿ ಪ್ರಾಣಾನ್ ಪರಿತ್ಯಜೇತ್ ।
ಯಮೇನ ನೇಕ್ಷಿತುಂ ಶಕ್ತೋ ಯುಕ್ತಂ ಪಾಪಶತೈರಪಿ ॥ –ಪದ್ಮಪುರಾಣ, ಉತ್ತರಖಂಡ (೬)

**ತುಲಸೀಮೃತ್ತಿಕಾಲಿಪ್ತೋ ಯುಕ್ತಃ ಪಾಪಶತೈರಪಿ ।**
**ವಿಮುಂಚತಿ ನರಃ ಪ್ರಾಣಾನ್ ಸ ಯಾತಿ ಹರಿಮಂದಿರಮ್ ॥**

– ಪದ್ಮಪುರಾಣ (೩/೨೨/೮)

ತುಲಸೀಮೃತ್ತಿಕೆಯಿಂದ ಲೇಪಹೊಂದಿದವನಾಗಿ ಪ್ರಾಣತೊರೆಯುವ ಮಾನವನು ನೂರಾರು ಪಾಪಗಳಿಂದ ಕೂಡಿದ್ದರೂ ಶ್ರೀಹರಿಯ ಮಂದಿರವನ್ನು ಹೊಂದುವನು.

**ಯೋ ಯುಕ್ತಸ್ತುಲಸೀಪತ್ರೈಃ ಪಾಪೀ ಪ್ರಾಣಾನ್ ವಿಮುಂಚತಿ ।**
**ವಿಷ್ಣೋರ್ನಿಕೇತನಂ ಯಾತಿ ಸತ್ಯಮೇತನ್ಮಯೋದಿತಮ್ ॥**

– ಪದ್ಮಪುರಾಣ (೩/೨೨/೭)

ಪಾಪಿಯಾಗಿದ್ದರೂ ಯಾವನು ತುಲಸೀಪತ್ರಗಳಿಂದ ಕೂಡಿದವನಾಗಿ ಪ್ರಾಣಗಳನ್ನು ತೊರೆಯುವನೋ ಅವನು ವಿಷ್ಣುವಿನ ಮಂದಿರವನ್ನು ತಲುಪುವನು. ನಾನು ಹೇಳಿದ ಇದು ಸತ್ಯವಾದುದು.

**ತುಲಸೀಂ ಸ್ವಕರೇ ಧೃತ್ವಾ ದೇಹೇ ಧೃತ್ವಾ ಚ ಮಾನವಃ ।**
**ಪ್ರಾಣಾಂಸ್ತ್ಯಜತಿ ತೀರ್ಥೇಷು ವಿಷ್ಣುಲೋಕಂ ಸ ಗಚ್ಛತಿ ॥**

– ಬ್ರಹ್ಮವೈವರ್ತಪುರಾಣ (೨/೨೧/೪೬)

ತುಲಸಿಯನ್ನು ಕೈಯಲ್ಲಿ ಹಿಡಿದು, ದೇಹದ ಮೇಲೂ ಇರಿಸಿಕೊಂಡು, ಯಾವ ಮಾನವನು ತೀರ್ಥಕ್ಷೇತ್ರಗಳಲ್ಲಿ ಪ್ರಾಣಗಳನ್ನು ತೊರೆಯುವನೋ ಅವನು ವಿಷ್ಣುಲೋಕಕ್ಕೆ ತೆರಳುವನು.

**ಶಿಖಾಯಾಂ ತುಲಸೀಂ ಕೃತ್ವಾ ಯಸ್ತು ಪ್ರಾಣಾನ್ ಪರಿತ್ಯಜೇತ್ ।**
**ದುಷ್ಕೃತೌಘಾದ್ವಿನಿರ್ಮುಕ್ತಃ ಸ್ವರ್ಗಮೇತಿ ನಿರಾಮಯಮ್ ॥**

– ಪದ್ಮಪುರಾಣ (೫/೫೮/೧೩೬)

ಶಿಖೆಯಲ್ಲಿ ತುಲಸಿಯನ್ನು ಇರಿಸಿಕೊಂಡು ಯಾವನು ಪ್ರಾಣಗಳನ್ನು ತೊರೆಯುವನೋ ಅವನು ದುಷ್ಕೃತಗಳ ರಾಶಿಯಿಂದ ಬಿಡುಗಡೆಹೊಂದಿ ನಿರ್ದೋಷವಾದ ಸ್ವರ್ಗವನ್ನು ಸೇರುವನು.

**ತುಲಸೀಪತ್ರತೋಯಂ ಚ ಮೃತ್ಯುಕಾಲೇ ಚ ಯೋ ಲಭೇತ್ ।**
**ಸ ಮುಚ್ಯತೇ ಸರ್ವಪಾಪಾದ್ವಿಷ್ಣುಲೋಕಂ ಸ ಗಚ್ಛತಿ ॥**

– ಬ್ರಹ್ಮವೈವರ್ತಪುರಾಣ (೨/೨೧/೫೦)

ತುಲಸೀಪತ್ರದ ಜಲವನ್ನು ಮರಣಕಾಲದಲ್ಲಿ ಪಡೆಯುವವನು ಸಕಲ ಪಾಪಗಳಿಂದ ಮುಕ್ತನಾಗಿ ವಿಷ್ಣುಲೋಕವನ್ನು ಪಡೆಯುವನು.

**ಕರ್ಮಯೋಗಾದ್ಯದಾ ದೇಹೀ ಮುಂಚತ್ಯತ್ರ ನಿಜಂ ವಪುಃ।**
**ತುಲಸೀಸನ್ನಿಧೌ ಕುರ್ಯಾನ್ಮಂಡಲಂ ಗೋಮಯೇನ ತು॥**

- ಗರುಡಪುರಾಣ (೯/೩)

ಕರ್ಮಯೋಗದಿಂದಾಗಿ ತನ್ನ ದೇಹವನ್ನು ತೊರೆಯುವವನು ತುಲಸೀಸನ್ನಿಧಿಯಲ್ಲಿ ಗೋಮಯದಿಂದ ಮಂಡಲವನ್ನು ಮಾಡಿ ದೇಹ ತೊರೆಯಬೇಕು.

**ತಸ್ಯಾ ದಲಂ ಮುಖೇ ಕೃತ್ವಾ ತಿಲದರ್ಭಾಸನೇ ಮೃತಃ।**
**ನರೋ ವಿಷ್ಣುಪದಂ ಯಾತಿ ಪುತ್ರಹೀನೋಽಪ್ಯಸಂಶಯಃ॥**

- ಗರುಡಪುರಾಣ (೯/೯)

ತುಲಸೀದಳವನ್ನು ಮುಖದಲ್ಲಿರಿಸಿ ತಿಲ ಹಾಗೂ ದರ್ಭೆಗಳ ಆಸನದಲ್ಲಿ ಮರಣಿಸುವ ನರನು ಪುತ್ರಹೀನನಾಗಿದ್ದರೂ ಸಹ ವಿಷ್ಣುಪದವನ್ನು ಪಡೆಯುವನು; ಸಂಶಯವಿಲ್ಲ.

**ಇತಿ ಸಂಪ್ರಾರ್ಥಯಿತ್ವಾಽಗ್ನಿಂ ಚಿತಾಂ ತತ್ರೈವ ಕಾರಯೇತ್।**
**ಶ್ರೀಖಂಡತುಲಸೀಕಾಷ್ಠೈಃ ಪಲಾಶಾಶ್ವತ್ಥದಾರುಭಿಃ॥**

- ಗರುಡಪುರಾಣ (೧೦/೨೦)

ಹೀಗೆ ಅಗ್ನಿಯನ್ನು ಪ್ರಾರ್ಥಿಸಿ ಶ್ರೀಖಂಡ, ತುಲಸೀಕಾಷ್ಠ, ಮುತ್ತುಗ, ಅಶ್ವತ್ಥ ಮೊದಲಾದವುಗಳ ಕಾಷ್ಠಗಳಿಂದ ಚಿತೆಯನ್ನು ಸಿದ್ಧಪಡಿಸಬೇಕು.

**ತುಲಸೀವಿಟಪಚ್ಛಾಯಾ ಯತ್ರಾಸ್ತಿ ಭವತಾಪಹಾ।**
**ತತ್ರೈವ ಮರಣಾನ್ ಮುಕ್ತಿಃ ಸರ್ವದಾ ದಾನದುರ್ಲಭಾ॥**

- ಗರುಡಪುರಾಣ (೯/೬)

ಭವತಾಪವನ್ನು ನೀಗಿಸುವ ತುಲಸೀವೃಕ್ಷದ ನೆರಳು ಎಲ್ಲಿರುವುದೋ ಅಲ್ಲಿ ಮರಣ-ಹೊಂದುವುದು ಮುಕ್ತಿಗೆ ಸಾಧನ. ಅದು ಸಕಲ ದಾನಗಳಿಗಿಂತಲೂ ದುರ್ಲಭವಾದುದು.

**ತುಲಸೀವಿಟಪಸ್ಥಾನಂ ಗೃಹೇ ಯಸ್ಯಾವತಿಷ್ಠತೇ।**
**ತದ್ಗೃಹಂ ತೀರ್ಥರೂಪಂ ಹಿ ನ ಯಾಂತಿ ಯಮಕಿಂಕರಾಃ॥**

- ಗರುಡಪುರಾಣ (೯/೭)

ತುಲಸೀವೃಕ್ಷದ ನೆಲೆಯು ಯಾವನ ಮನೆಯಲ್ಲಿ ಇರುವುದೋ ಅದು ಪವಿತ್ರವೆನ್ನಿಸುವುದು. ಅಲ್ಲಿಗೆ ಯಮದೂತರು ಆಗಮಿಸರು.

**ತಿಲಾಃ ಪವಿತ್ರಾಸ್ತ್ರಿವಿಧಾ ದರ್ಭಾಶ್ಚ ತುಲಸೀರಪಿ ।**
**ನರಂ ನಿವಾರಯಂತ್ಯೇತೇ ದುರ್ಗತಿಂ ಯಾಂತಮಾತುರಮ್ ॥**

– ಗರುಡಪುರಾಣ (೯/೧೦)

ಪವಿತ್ರವಾದ ಎಳ್ಳುಗಳು, ಮೂರು ಬಗೆಯ ದರ್ಭೆಗಳು ಹಾಗೂ ತುಲಸಿ ಇವು ದುರ್ಗತಿಗೆ ತೆರಳುವ ರೋಗಿಯನ್ನು ಉದ್ಧರಿಸುವವು.

**ತುಲಸೀಮಂಜರೀಭಿಶ್ಚ ಪೂಜಯೇದ್ವಿಷ್ಣುಪಾದುಕಾಮ್ ।**
**ತಸ್ಯಾಲವಾಲತೀರ್ಥೇಷು ಪಿಂಡಾನ್ ದದ್ಯಾದ್ಯಥಾಕ್ರಮಮ್ ॥**

– ಗರುಡಪುರಾಣ (೧೩/೧೧೧); ಗಯಾಶ್ರಾದ್ಧೇ ಇತ್ಯನುವೃತ್ತಿಃ

ವಿಷ್ಣುವಿನ ಪಾದುಕೆಗಳನ್ನು ತುಲಸೀಮಂಜರಿಗಳಿಂದ ಪೂಜಿಸಬೇಕು. ಅದು ಬೆಳೆದಂತಹ ಹಾಲವಾಲದ ತೀರ್ಥಗಳಲ್ಲಿ ಕ್ರಮವಾಗಿ ಪಿಂಡಗಳನ್ನು ಸಮರ್ಪಿಸಬೇಕು.

**ಅತಃ ಕುಶಾ ವಹ್ನಿಮಂತ್ರಸ್ತುಲಸೀವಿಪ್ರಧೇನವಃ ।**
**ನೈತೇ ನಿರ್ಮಾಲ್ಯತಾಂ ಯಾಂತಿ ಕ್ರಿಯಮಾಣಾಃ ಪುನಃ ಪುನಃ ॥**

– ಗರುಡಪುರಾಣ (೯/೧೪)

ದರ್ಭೆಗಳು, ಅಗ್ನಿ, ಮಂತ್ರಗಳು, ತುಲಸೀ, ವಿಪ್ರರು ಹಾಗೂ ಧೇನುಗಳು ಎಷ್ಟುಬಾರಿ ಪ್ರಯೋಗಿಸಿದರೂ ನಿರ್ಮಾಲ್ಯವೆನ್ನಿಸಲಾರವು.

**ದರ್ಭಾಃ ಪಿಂಡೇಷು ನಿರ್ಮಾಲ್ಯಾ ಬ್ರಾಹ್ಮಣಾಃ ಪ್ರೇತಭೋಜನೇ ।**
**ಮಂತ್ರಾ ಗೌಸ್ತುಲಸೀ [೬೦]ನೀಚೇ ಚಿತಾಯಾಂ ಚ ಹುತಾಶನಃ ॥**

– ಗರುಡಪುರಾಣ (೯/೧೫)

ಪಿಂಡಗಳಿಗೆ ಸಮರ್ಪಿಸಿದ ದರ್ಭೆಗಳು ನಿರ್ಮಾಲ್ಯವೆನ್ನಿಸುವವು. ಪ್ರೇತಭೋಜನಮಾಡಿದ ಬ್ರಾಹ್ಮಣ, ಶುಚಿ ಎನ್ನಿಸನು; ನೀಚರು ಉಪದೇಶಿಸುವ ಮಂತ್ರ, ಗೋವುಗಳು, ತುಲಸಿಗಳು ನಿರ್ಮಾಲ್ಯವೆನ್ನಿಸುವವು. ಅದರಂತೆ ಪ್ರೇತಾಗ್ನಿಯು ಸಹ ನಿರ್ಮಾಲ್ಯವೆ.

**ದತ್ವಾ ತು ತುಲಸೀಕಾಷ್ಠಂ ಸರ್ವಾಂಗೇಷು ಮೃತಸ್ಯ ಚ ।**
**ಪಶ್ಚಾದ್ಯಃ ಕುರುತೇ ದಾಹಂ ಸೋಽಪಿ ಪಾಪಾತ್ ಪ್ರಮುಚ್ಯತೇ ॥**

– ಗರುಡಪುರಾಣ (೯/೩)

೬೦ ತುಲಸೀ ನೀಚಗೃಹೇ ಆಗ್ರಾಹ್ಯಾ ಇತ್ಯರ್ಥಃ ।

ಮೃತನ ಸರ್ವ ಅಂಗಗಳಲ್ಲೂ ತುಲಸೀಕಾಷ್ಠವನ್ನಿರಿಸಿ, ಬಳಿಕ ದಹನಮಾಡುವವನು ಸಹ ಸಕಲ ಪಾಪಗಳಿಂದ ಬಿಡುಗಡೆಹೊಂದುವನು.

**ತೀರ್ಥಂ ಯದಿ ನ ಸಂಪ್ರಾಪ್ತಂ ಕೀರ್ತನಂ ಸ್ಮರಣಂ ಹರೇಃ।**
**ತುಲಸೀಕಾಷ್ಠದಗ್ಧಸ್ಯ ನ ತಸ್ಯ ಪುನರಾವೃತಿಃ॥** –ಗರುಡಪುರಾಣ

ಒಂದು ವೇಳೆ ತೀರ್ಥವು ಲಭಿಸದಿದ್ದಲ್ಲಿ ಶ್ರೀಹರಿಯ ಕೀರ್ತನ ಹಾಗೂ ಸ್ಮರಣೆಗಳನ್ನು ಮಾಡಿ ತುಲಸೀಕಾಷ್ಠದಿಂದ ದಹನ ಮಾಡಿದರೆ ಅವನು ಮರಳಿಹುಟ್ಟನು.

**ಯದ್ಯೇಕಂ ತುಲಸೀಕಾಷ್ಠಂ ಮಧ್ಯೇ ಕಾಷ್ಠಶತಸ್ಯ ಹಿ।**
**ದಾಹಕಾಲೇ ಭವೇನ್ಮುಕ್ತಿಃ ಪಾಪಕೋಟಿಯುತಸ್ಯ ಚ॥** – ಗರುಡಪುರಾಣ

ದಹನ ಕಾಲದಲ್ಲಿ ನೂರಾರು ಕಾಷ್ಠಗಳ ಮಧ್ಯೆ ಒಂದಾದರೂ ತುಲಸೀಕಾಷ್ಠವಿದ್ದಲ್ಲಿ ಅವನು ಕೋಟಿ ಪಾಪಗಳಿಂದ ಕೂಡಿದ್ದರೂ ಮುಕ್ತನಾಗುವನು.

**ದಹ್ಯಮಾನಂ ನರಂ ದೃಷ್ಟ್ವಾ ತುಲಸೀಕಾಷ್ಠವಹ್ನಿನಾ।**
**ನೀಯಮಾನೋ ಯಮೇನಾಶು ವಿಷ್ಣುಲೋಕಂ ಸ ಗಚ್ಛತಿ॥** – ಗರುಡಪುರಾಣ

ತುಲಸೀಕಾಷ್ಠದ ವಹ್ನಿಯಿಂದ ದಹನಹೊಂದುವ ಮನುಷ್ಯನು ಯಮಲೋಕಕ್ಕೆ ತೆರಳುತ್ತಿದ್ದರೂ ಸಹ ಕೂಡಲೇ ವಿಷ್ಣುಲೋಕಕ್ಕೆ ತೆರಳುವನು.

**ಜನ್ಮಕೋಟಿಸಹಸ್ರೈಸ್ತು ಪೂಜಿತೋ ಯೈರ್ಜನಾರ್ದನಃ।**
**ದಹ್ಯಂತೇ ತೇ ನರಾಃ ಸರ್ವೇ ತುಲಸೀಕಾಷ್ಠವಹ್ನಿನಾ॥** – ಗರುಡಪುರಾಣ

ಸಾವಿರ ಕೋಟಿ ಜನ್ಮಗಳಿಂದ ಶ್ರೀಹರಿಯನ್ನು ಪೂಜಿಸಿದ ಮಾನವರು ಮಾತ್ರ ತುಲಸೀಕಾಷ್ಠದ ವಹ್ನಿಯಿಂದ ದಹಿಸಲ್ಪಡುವ ಭಾಗ್ಯವನ್ನು ಹೊಂದುವರು.

***

# ಶ್ರಾದ್ಧದಲ್ಲಿ ತುಲಸೀ

ಶ್ರಾದ್ಧವು ಪಿತೃಯಜ್ಞವೆಂದು ಮಾನ್ಯವಾಗಿರುವ ಶ್ರೇಷ್ಠಕಾರ್ಯ. ಅದನ್ನು ತಪ್ಪದೇ ಮಾಡುವುದು ಮಕ್ಕಳ ಕಾರ್ಯ. ಅದರಿಂದ ಮೃತರಿಗೆ ಸದ್ಗತಿ ಲಭಿಸುವುದು. ಅಂತಹ ಶ್ರಾದ್ಧ ಕಾರ್ಯವು ಸಹ ತರ್ಪಣ, ಪಿಂಡಪ್ರದಾನ, ತೀರ್ಥಶ್ರಾದ್ಧ ಮೊದಲಾಗಿ ಅನೇಕ ವಿಧವಾದುದು. ಶ್ರಾದ್ಧವು ಸಾರ್ಥಕವೆನ್ನಿಸಲು ಅದಕ್ಕೆ ವಿಹಿತವಾದ ಮಂತ್ರಗಳು, ದ್ರವ್ಯಗಳು, ಕಾಲ ಮೊದಲಾದವು ಅತ್ಯಗತ್ಯ. ಶ್ರಾದ್ಧಕ್ಕೆ ತಿಲ ಮೊದಲಾದವು ಅತ್ಯಗತ್ಯ ಎಂಬುದು ಸುಪ್ರಸಿದ್ಧ. ಆದರೆ ಎಲ್ಲಕ್ಕಿಂತಲೂ ಹೆಚ್ಚು ಮಿಗಿಲಾದುದು ತುಲಸೀ ಎಂಬುದು ಶಾಸ್ತ್ರಗಳ ಘೋಷಣೆ. ತುಲಸೀತೀರ್ಥ,

ತುಲಸೀಯುಕ್ತವಾದ ಅರ್ಘ್ಯಾದಿ ಕಾರ್ಯಗಳು, ಪಿಂಡದ ಮೇಲೆ ತುಲಸಿಯ ಸಮರ್ಪಣೆ, ಕೊನೆಗೆ ಕೃಷ್ಣಾರ್ಪಣಕ್ಕೂ ತುಲಸಿ. ಹೀಗೆ ಇತರ ದೇವಕಾರ್ಯಗಳಲ್ಲಿ ಹೇಗೋ ಹಾಗೆ ಪಿತೃಕಾರ್ಯಗಳಲ್ಲೂ ಸಹ ತುಲಸೀ ಅತ್ಯಂತ ಅಗತ್ಯವಾಗಿದೆ. ಕೆಲವು ಪದಾರ್ಥಗಳು ದೇವಕಾರ್ಯಗಳಲ್ಲಿ ಪ್ರಧಾನ, ಮತ್ತೆ ಕೆಲವು ಪದಾರ್ಥಗಳು ಪಿತೃಕಾರ್ಯಗಳಲ್ಲಿ ಪ್ರಧಾನ; ಆದರೆ ತುಲಸಿಯು ಮಾತ್ರ ಸರ್ವಕಾರ್ಯಗಳಲ್ಲೂ ಪ್ರಧಾನ.

**ಶ್ರಾದ್ಧಂ ದಾನಂ ತಪೋ ಹೋಮಃ ಸಂಧ್ಯೋಪಾಸನಪೂಜನೇ ।**
**ಪುರಾಣಪಠನಂ ಚಾಪಿ ತುಲಸೀಸನ್ನಿಧೌ ಚರೇತ್ ॥**

– ಬೃಹದ್ಧರ್ಮಪುರಾಣ (೧/೮/೫೪)

ಶ್ರಾದ್ಧ, ದಾನ, ತಪಸ್ಸು, ಹೋಮ, ಸಂಧ್ಯೋಪಾಸನೆ, ದೇವಪೂಜೆ, ಪುರಾಣಪಠಣ ಮೊದಲಾದವುಗಳನ್ನು ತುಲಸಿಯ ಸನ್ನಿಧಿಯಲ್ಲಿಯೇ ಆಚರಿಸಬೇಕು.

**ತುಲಸೀವಿಪಿನಚ್ಛಾಯಾ ಯತ್ರ ಯತ್ರ ಭವೇನ್ನೃಪ ।**
**ತತ್ರ ಶ್ರಾದ್ಧಂ ಪ್ರಕರ್ತವ್ಯಂ ಪಿತೄಣಾಂ ದತ್ತಮಕ್ಷಯಮ್ ।**

– ಪದ್ಮಪುರಾಣ (೬/೧೦೭/೧೮); ಸ್ಕಂದಪುರಾಣ (೨/೪/೨೩/೨೮)

ತುಲಸೀಕಾನನದ ನೆರಳು ಎಲ್ಲಿ ಬೀಳುವುದೋ ಅಲ್ಲಿ ಪಿತೃಗಳಿಗೆ ಶ್ರಾದ್ಧವನ್ನು ಮಾಡಬೇಕು. ಅದು ಅಕ್ಷಯವೆನ್ನಿಸುವುದು.

**ತುಲಸೀವಿಪಿನಚ್ಛಾಯಾ ಯತ್ರ ಚೈವ ಭವೇದ್ದ್ವಿಜ ।**
**ತತ್ರ ಶ್ರಾದ್ಧಂ ಪ್ರಕರ್ತವ್ಯಂ ಪಿತೄಣಾಂ ತೃಪ್ತಿಹೇತವೇ ॥**

– ಸ್ಕಂದಪುರಾಣ (೨/೪/೮/೧೬)

ಪಿತೃಗಳಿಗೆ ತೃಪ್ತಿಗೋಸ್ಕರ ತುಲಸಿಯ ಕಾನನದ ನೆರಳು ಎಲ್ಲಿ ಬೀಳುವುದೋ ಆ ಸ್ಥಳದಲ್ಲಿ ಶ್ರಾದ್ಧವನ್ನು ಮಾಡಬೇಕು.

**ತುಲಸೀಬೀಜನಿಕರೋ ಯಸ್ಮಿನ್ ಪತತಿ ವೈ ಮುನೇ ।**
**ತತ್ಸ್ಥಾನಂ ಪರಮಂ ಜ್ಞೇಯಂ ಪಿತೄಣಾಂ ಪ್ರೀತಿವರ್ಧನಮ್ ॥**

– ಪದ್ಮಪುರಾಣ, ಉತ್ತರಖಂಡ (೬)

ತುಲಸಿಯ ಬೀಜಗಳ ರಾಶಿ ಎಲ್ಲಿ ಬಿದ್ದಿರುವುದೋ ಅದು ಪಿತೃಗಳಿಗೆ ಪ್ರೀತಿಯನ್ನು ಹೆಚ್ಚಿಸುವಂತಹ ಶ್ರೇಷ್ಠ ಸ್ಥಾನ ಎಂದು ತಿಳಿಯಬೇಕು.

**ತುಲಸೀವನಜಾ ಛಾಯಾ ಯತ್ರ ಯತ್ರ ಭವೇದ್ದ್ವಿಜಾಃ ।**
**ತರ್ಪಣಂ ಕುರುತೇ ತತ್ರ ಪಿತೄಣಾಂ ತೃಪ್ತಿಹೇತವೇ ॥**

– ಪದ್ಮಪುರಾಣ (೬/೨೫/೩೭)

ತುಲಸಿವನದ ನೆರಳು ಎಲ್ಲೆಲ್ಲಿ ಬೀಳುವುದೋ ಅಲ್ಲಿಯೇ ಪಿತೃಗಳ ತೃಪ್ತಿಗೋಸ್ಕರವಾಗಿ ತರ್ಪಣವನ್ನು ನೀಡಬೇಕು.

**ತುಲಸೀನಿಕರೇ ವಾಽಪಿ ಪತತೇ ಯತ್ರ ನಾರದ।**
**ಪಿಂಡದಾನಾದಿಕಂ ತತ್ರ ಪಿತೄಣಾಂ ದತ್ತಮಕ್ಷಯಮ್ ॥**

– ಪದ್ಮಪುರಾಣ (೬/೨೫/೩೮)

ತುಲಸಿಯ ಗುಂಪು ಎಲ್ಲಿ ನೆಲೆಸಿರುವುದೋ ಅಲ್ಲಿ ಪಿತೃಗಳಿಗೆ ಮಾಡುವ ಪಿಂಡದಾನಾದಿ ಕಾರ್ಯಗಳು ಅಕ್ಷಯವೆನ್ನಿಸುವವು.

**ತುಲಸೀಕಾನನೋದ್ಭೂತಾ ಛಾಯಾ ಯತ್ರ ಭವೇನ್ಮನೇ।**
**ತತ್ರ ಶ್ರಾದ್ಧಂ ಪ್ರದಾತವ್ಯಂ ಪಿತೄಣಾಂ ತೃಪ್ತಿಹೇತವೇ ॥** – ಪದ್ಮಪುರಾಣ

ತುಲಸಿಕಾನನದಿಂದ ಹುಟ್ಟುವ ನೆರಳು ಎಲ್ಲಿ ಇರುವುದೋ ಅಲ್ಲಿಯೇ ಪಿತೃಗಳ ತೃಪ್ತಿ-ಗೋಸ್ಕರವಾಗಿ ಶ್ರಾದ್ಧವನ್ನು ಆಚರಿಸಬೇಕು.

[೬೧]**ತುಲಸ್ಯಾ ವಿಪಿನೇ ಧಾತ್ರ್ಯಾಶ್ಛಾಯಾಸು ಯೋ ನರೋತ್ತಮಃ।**
**ಪಿಂಡಂ ದದಾತಿ ಪಿತರೋ ಮುಕ್ತಿಂ ಯಾಂತಿ ದ್ವಿಜೋತ್ತಮ ॥**

– ಪದ್ಮಪುರಾಣ (೩/೨೨/೧೯)

ತುಲಸಿಯ ವನ ಹಾಗೂ ಧಾತ್ರಿಯ ನೆರಳು ಇರುವಲ್ಲಿ ಪಿಂಡವನ್ನು ಸಮರ್ಪಿಸಿದರೆ ಪಿತೃಗಳು ಮುಕ್ತಿಯನ್ನು ಹೊಂದುವರು.

**ಯೋ ದದಾತಿ ಪಿತೄಣಾಂ ತು ಪಿಂಡೇ ತುಲಸಿಸಂಭವಮ್।**
**ದಲಂ ಸಂಜಾಯತೇ ತೃಪ್ತಿಃ ಪತ್ರೇ ಪತ್ರೇ ಶತಾಬ್ದಿಕಾ ॥**

– ಪದ್ಮಪುರಾಣ (೬/೨೪/೨೫)

ತುಲಸಿಯಿಂದ ಕೂಡಿದ ಪಿಂಡವನ್ನು ಸಮರ್ಪಿಸಿದಾಗ ಪಿತೃಗಳಿಗೆ ಪ್ರತಿಯೊಂದು ದಳಕ್ಕೂ ಸಹ ನೂರು ವರ್ಷಗಳಿಗೆಂಬಂತೆ ತೃಪ್ತಿಯು ಲಭಿಸುವುದು.

**ತುಲಸೀಗಂಧಮಾಘ್ರಾಯ ಪಿತರಸ್ತುಷ್ಟಮಾನಸಾಃ।**
**ಪ್ರಯಾಂತಿ ಗರುಡಾರೂಢಾಸ್ತತ್ಪದಂ ಚಕ್ರಪಾಣಿನಃ ॥**

– ಪದ್ಮಪುರಾಣ (೬/೨೪೪/೪)

---

[೬೧] ಪದ್ಮಪುರಾಣ (೩/೨೨/೧೬)

ತುಲಸಿಯ ಗಂಧವನ್ನು ಮೂಸುತ್ತಲೇ ಪಿತೃಗಳು ಸಂತುಷ್ಟಮನಸ್ಸಿನವರಾಗಿ ಗರುಡನ ಹೆಗಲೇರಿ, ಚಕ್ರಪಾಣಿಯಾದ ಶ್ರೀಹರಿಯ ಸದನವನ್ನು ಸೇರುವರು.

**ವಿಧವಾತ್ವಂ ನ ಚಾಪ್ನೋತಿ ನಾರೀ ಜನ್ಮನಿ ಜನ್ಮನಿ ।**
**ತುಲಸೀವಿಪಿನಚ್ಛಾಯಾ ಯತ್ರ ಚೈವ ಭವೇದ್ ದ್ವಿಜ ।**
**ತತ್ರ ಶ್ರಾದ್ಧಂ ಪ್ರಕರ್ತವ್ಯಂ ಪಿತೄಣಾಂ ತೃಪ್ತಿಹೇತವೇ ॥**

– ಸ್ಕಂದಪುರಾಣ (೨/೪/೮/೧೬),(೨/೪/೨೩/೧೮)

ತುಲಸಿಯ ವನದ ನೆರಳು ಇರುವ ಸ್ಥಳದಲ್ಲಿ ನೆಲೆಸುವ ಸ್ತ್ರೀಯರಿಗೆ ವೈಧವ್ಯ ಉಂಟಾಗದು. ಹಾಗೂ ಅಂತಹ ಸ್ಥಳದಲ್ಲಿಯೇ ಪಿತೃಗಳ ತೃಪ್ತಿಗೋಸ್ಕರವಾಗಿಯೇ ಶ್ರಾದ್ಧವನ್ನು ಆಚರಿಸಬೇಕು.

**ಯನ್ಮುಖೇ ತುಲಸೀಪತ್ರಂ ಕರ್ಣೇ ಶಿರಸಿ ದೃಶ್ಯತೇ ।**
**ಯಮಸ್ತಂ ನೇಕ್ಷಿತುಂ ಶಕ್ತಃ ಕಿಮು ದೂತಾ ಭಯಂಕರಾಃ ॥**

– ಸ್ಕಂದಪುರಾಣ (೨/೪/೮/೧೭)

ಯಾರ ಮುಖದಲ್ಲಿ, ಕಿವಿಯಲ್ಲಿ, ಶಿರಸ್ಸಿನಲ್ಲಿ ತುಲಸಿಯ ಪತ್ರವು ಇರುವುದೋ ಅಂತಹವರನ್ನು ಯಮನು ಸಹ ಕಣ್ಣೆತ್ತಿ ನೋಡಲಾರ. ಇನ್ನು ಭಯಂಕರರಾದ ಅವನ ದೂತರ ಬಗ್ಗೆ ಹೇಳುವುದೇನಿದೆ?

[೩.೨]**ತುಲಸೀತೋಯಕಣಿಕಾಂ ಮೃತ್ಯುಕಾಲೇ ಚ ಯೋ ಲಭೇತ್ ।**
**ರತ್ನಯಾನಂ ಸಮಾರುಹ್ಯ ವೈಕುಂಠೇ ಸ ಪ್ರಯಾತಿ ಚ ॥**

– ಬ್ರಹ್ಮವೈವರ್ತಪುರಾಣ, ಪ್ರಕೃತಿಖಂಡ (೨೧/೫೦)

ತುಲಸಿಜಲದ ಹನಿಯನ್ನು ಮರಣಕಾಲದಲ್ಲಿ ಯಾವನು ಹೊಂದುವನೋ ಅವನು ರತ್ನಖಚಿತ ವಾಹವನ್ನೇರಿ ವೈಕುಂಠಕ್ಕೆ ತೆರಳುವನು.

**ತುಲಸೀಮೃತ್ತಿಕಾ ಲಿಪ್ತೋ ಯದಿ ಪ್ರಾಣಾನ್ ಪರಿತ್ಯಜೇತ್ ।**
**ಯಮೇನ ನೇಕ್ಷಿತುಂ ಶಕ್ತೋ ಯುಕ್ತಃ ಪಾಪಶತೈರಪಿ ॥**

– ಪದ್ಮಪುರಾಣ, ಉತ್ತರಖಂಡ (೬)

---

೩.೨ ತುಲಸೀಪತ್ರತೋಯಕಣಿಕಾಂ ಮೃತ್ಯುಕಾಲೇ ಚ ಯೋ ಲಭೇತ್ ।
ರತ್ನಯಾನಂ ಸಮಾರುಹ್ಯ ವೈಕುಂಠಂ ಸ ಪ್ರಯಾತಿ ಚ ॥

– ಬ್ರಹ್ಮವೈವರ್ತಪುರಾಣ, ಪ್ರಕೃತಿಖಂಡ (೨/೨೧/೫೦)

ತುಲಸಿಯ ಮೃತ್ತಿಕೆಯಿಂದ ಲೇಪಿತನಾಗಿ ಪ್ರಾಣವನ್ನು ತೊರೆಯುವವನು ನೂರಾರು ಪಾಪಗಳಿಂದ ಕೂಡಿದವನಾಗಿದ್ದರೂ ಅವನನ್ನು ನೋಡಲು ಯಮನು ಶಕ್ತನಾಗನು.

**ಇಮಾಂ ತು ತುಲಸೀಗಾಥಾಂ ಶ್ರಾದ್ಧಕಾಲೇ ತು ಯಃ ಪಠೇತ್ ।**
**ಸರ್ವೇ ತೇ ಪಿತರಸ್ತಸ್ಯ ಯಾಸ್ಯಂತಿ ಪರಮಾಂ ಗತಿಮ್ ॥**

– ವಿಷ್ಣುಧರ್ಮೋತ್ತರ (೧೫/೮೧)

ಈ ತುಲಸೀ ಗಾಥೆಯನ್ನು ಶ್ರಾದ್ಧಕಾಲದಲ್ಲಿ ಯಾವನು ಪಠಿಸುವನೋ ಅವನ ಪಿತೃಗಳೆಲ್ಲರೂ ಪರಮಗತಿಯನ್ನು ಹೊಂದುವರು.

**ಇದಂ ಪವಿತ್ರಂ ಪರಮಂ ಸರ್ವಪಾಪಪ್ರಣಾಶನಮ್ ।**
**ಯಃ ಪಠೇತ್ ಪ್ರಾತರುತ್ಥಾಯ ಸ ದೇವೈರಪಿ ಪೂಜ್ಯತೇ ॥**

– ವಿಷ್ಣುಧರ್ಮೋತ್ತರ (೧೫/೮೨)

ಈ ತುಲಸೀಮಾಹಾತ್ಮ್ಯವು ಅತ್ಯಂತ ಪವಿತ್ರವಾದುದು. ಸಕಲ ಪಾಪಗಳನ್ನೂ ಪರಿಹರಿಸುವಂತಹುದು. ಇದನ್ನು ಬೆಳಿಗ್ಗೆ ಎದ್ದು ಯಾವನು ಪಠಿಸುವನೋ ಅವನು ದೇವತೆಗಳಿಂದಲೂ ಗೌರವಿಸಲ್ಪಡುವನು.

**ತುಲಸೀದಲಮಿಶ್ರೇಣ ನೈವೇದ್ಯೇನೈವ ಚಕ್ರಿಣಃ ।**
**ಭೋಜಯೇಚ್ಚ ಪಿತೄನ್ ಭಕ್ತ್ಯಾ ವಿಧಿನಾ ಪಾರ್ವಣೇನ ಚ ।**
**ಸಹಸ್ರವಾರ್ಷಿಕೀಂ ತೃಪ್ತಿಂ ಪಿತರೋ ಯಾಂತಿ ನಾನ್ಯಥಾ ॥**

– ವಿಷ್ಣುಧರ್ಮೋತ್ತರ (೧೫/೧೮)

ತುಲಸೀದಳಮಿಶ್ರಿತವಾದ ಶ್ರೀಹರಿಯ ನೈವೇದ್ಯದಿಂದ ಪಿತೃಗಳನ್ನು ಪಾರ್ವಣವಿಧಿಯಿಂದ ಭೋಜನಮಾಡಿಸಬೇಕು. ಅದರಿಂದ ಪಿತೃಗಳು ಸಾವಿರ ವರ್ಷಗಳ ಕಾಲದ ತೃಪ್ತಿಯನ್ನು ಹೊಂದುವರು.

**ತನ್ಮಾಸಪೂರ್ಣಮಾಯಾಂ ವಾ ಭೂತೇ ವಾ ಹರಿವಾಸರೇ ।**
**ನಿವೇದ್ಯ ದೇವ್ಯೈ ಮಾಷಾನ್ನಂ ಯಮಲೋಕಂ ನ ಪಶ್ಯತಿ ॥**

– ವಿಷ್ಣುಧರ್ಮೋತ್ತರ (೧೫/೧೯)

ಪ್ರತಿ ತಿಂಗಳ ಹುಣ್ಣಿಮೆಯಂದು ಹಾಗೂ ದ್ವಾದಶಿಯಂದು ತುಲಸೀದೇವಿಗೆ ಮಾಷಾನ್ನವನ್ನು ನೈವೇದ್ಯಮಾಡಿದರೆ, ಯಮಲೋಕವು ತಪ್ಪುವುದು.

**ತುಲಸೀಮೂಲಮಧ್ಯೇ ತು ಯಃ ಕ್ಷಿಪೇತ್ ತರ್ಪಣೋದಕಮ್ ।**
**ಭವಂತಿ ಪಿತರಸ್ತೃಪ್ತಾಃ ದ್ವಾದಶಾಬ್ದಾನಿ ಭೂಮಿಪ ॥** – ಗರುಡಪುರಾಣ

ತುಲಸಿಯ ಬೇರಿನ ಮಧ್ಯದಲ್ಲಿ ಯಾವನು ತರ್ಪಣವನ್ನು ನೀಡುವನೋ ಅವನ ಪಿತೃಗಳು ೧೨ ವರ್ಷಗಳ ವರೆಗೆ ತೃಪ್ತರಾಗುವರು.

**ತುಲಸ್ಯಾ ತರ್ಪಣಂ ಯೇ ಚ ಪಿತೃನುದ್ದಿಶ್ಯ ಮಾನವಾಃ।**
**ಕುರ್ವಂತಿ ತೇಷಾಂ ಪಿತರಸ್ತೃಪ್ತಾ ವರ್ಷಾಯುತಂ ಜಲೈಃ॥** – ಗರುಡಪುರಾಣ

ಯಾವ ಮನುಷ್ಯರು ಪಿತೃಗಳನ್ನು ಉದ್ದೇಶಿಸಿ, ತುಲಸಿಯಿಂದ ತರ್ಪಣವನ್ನು ನೀಡುವರೋ ಅವರ ಪಿತೃಗಳು ಆ ಜಲಗಳಿಂದ ಹತ್ತು ಸಾವಿರವರ್ಷಗಳ ವರೆಗೆ ತೃಪ್ತರಾಗುವರು.

**ಪಿತೃಪಿಂಡಾರ್ಚನಂ ಶ್ರಾದ್ಧೇ ಯ್ಯೆಃ ಕೃತಂ ತುಲಸೀದಲೈಃ।**
**ತರ್ಪಿತಾಃ ಪಿತರೋಽತ್ಯರ್ಥಂ ಯಾವಚ್ಚಂದ್ರಾರ್ಕಮೇದಿನೀ॥**

– ಗರುಡಪುರಾಣ

ಶ್ರಾದ್ಧದಲ್ಲಿ ಯಾರಿಂದ ಪಿತೃಗಳ ಪಿಂಡವು ತುಲಸೀದಳಗಳಿಂದ ಸಮರ್ಪಿತವಾಗುವುದೋ ಅವನ ಪಿತೃಗಳು ಚಂದ್ರ, ಸೂರ್ಯ ಹಾಗೂ ಭೂಮಿ ಇರುವವರೆಗೂ ಸಹ ಸಂಪೂರ್ಣವಾಗಿ ತೃಪ್ತರಾಗುವರು.

**ನ ದದಾತಿ ಗಯಾಂ ಗತ್ವಾ ಪಿಂಡಂ ಪುತ್ರೋ ಮಹಾಮನೇ।**
**ತುಲಸೀಕಾನನೇ ಶ್ರಾದ್ಧಂ ದತ್ವಾ ಸಂತಾರಯೇತ್ ಪಿತೃನ್॥** – ಗರುಡಪುರಾಣ

ಯಾವುದೇ ಕಾರಣದಿಂದ ಪುತ್ರನಾದವನು ಗಯಾಕ್ಷೇತ್ರಕ್ಕೆ ಹೋಗಿ ಪಿತೃಗಳಿಗೆ ಪಿಂಡ ಸಮರ್ಪಣೆ ಮಾಡಲು ಆಗದಿದ್ದವನು ತುಲಸಿಯ ವನದಲ್ಲಿ ಶ್ರಾದ್ಧವನ್ನು ಮಾಡಿದರೆ, ಪಿತೃಗಳನ್ನು ಉದ್ಧರಿಸುವನು.

★★★

## ತುಲಸೀಕಾಷ್ಠದ ಪ್ರತಿಮೆಗಳೂ ಗ್ರಾಹ್ಯ

ಪೂಜೆಗೆ ಚಿನ್ನ ಮೊದಲಾದ ಲೋಹಗಳ, ಶಿಲೆ, ಮೃತ್ತಿಕೆ ಮೊದಲಾದ ದ್ರವ್ಯಗಳ ಪ್ರತಿಮೆಗಳು ವಿಹಿತವಾಗಿವೆ. ಅದರಂತೆ ಕಾಷ್ಠದಿಂದ ಮಾಡಿದ ಪ್ರತಿಮೆಗಳು ಸಹ ಪೂಜೆಗೆ ವಿಹಿತ. ವಿಶೇಷವಾಗಿ ತುಲಸಿಕಾಷ್ಠಗಳ ಪ್ರತಿಮೆಗಳ ಅರ್ಚನೆಯು ಸಹ ಪ್ರಶಸ್ತ ಎಂಬುದು ವಿಶೇಷ. ಶ್ರೀಹರಿಯ ಹಾಗೂ ಮಹಾಲಕ್ಷ್ಮಿಯ ಬಗೆಬಗೆಯ ಅವತಾರಗಳ ಹಾಗೂ ಮೂಲರೂಪಗಳ ಪ್ರತಿಮೆಗಳನ್ನು ಮಾಡಿಸಿಕೊಂಡು ಪೂಜಿಸಬಹುದು. ಆದರೆ ಇತರ

ದೇವತೆಗಳ ವಿಗ್ರಹಗಳನ್ನು ತುಲಸಿಕಾಷ್ಠದಿಂದ ನಿರ್ಮಿಸುವ ಅವಕಾಶವನ್ನು ಶಾಸ್ತ್ರಗಳು ಕಲ್ಪಿಸಿಲ್ಲ. ಇದು ಸಹ ತುಲಸಿಯು ಮಹಾಲಕ್ಷ್ಮಿ ಎಂಬುದಕ್ಕೆ ಗಮಕವೆನ್ನಿಸುವ ಅಂಶ.



**ರಾಮಂ ಕೃಷ್ಣಂ ಹಯಗ್ರೀವಂ ವಾಮನಂ ವಾ ವಿಶೇಷತಃ।**
**ವಿಧಾಯ ತುಲಸೀಕಾಷ್ಠೈಃ ಪ್ರತಿಮಾಂ ರೂಪಕಾಮಿನಾ ॥** - ಪದ್ಮಪುರಾಣ

ಸುರೂಪವನ್ನು ಬಯಸುವವನು ಶ್ರೀರಾಮ, ಶ್ರೀಕೃಷ್ಣ, ಹಯಗ್ರೀವ ಅದರಲ್ಲೂ ವಾಮನ ಮೊದಲಾದ ಪ್ರತಿಮೆಗಳನ್ನು ತುಲಸಿಕಾಷ್ಠದಿಂದ ನಿರ್ಮಿಸಿ, ಪೂಜಿಸಬೇಕು.



**ಸೀತಾಂ ಭೂಮಿಂ ಮಹಾಲಕ್ಷ್ಮೀಂ ತುಲಸೀಂ ಭುವನೇಶ್ವರೀಮ್।**
**ದುರ್ಗಾದ್ಯಾ ದೇವತಾಶ್ಚಾऽಪಿ ತುಲಸೀಕಾಷ್ಠನಿರ್ಮಿತಾಃ।**
**ಅರ್ಚಿತೇ ತು ಫಲಂ ವಕ್ತುಂ ನ ಜಾನೀತೇ ಪರಃ ಪುಮಾನ್ ॥** - ಪದ್ಮಪುರಾಣ

ಸೀತಾದೇವಿ, ಭೂದೇವಿ, ಮಹಾಲಕ್ಷ್ಮಿ, ತುಲಸಿ, ಭುವನೇಶ್ವರಿ, ದುರ್ಗಾ ಮೊದಲಾದ ದೇವತೆಗಳ ವಿಗ್ರಹಗಳನ್ನು ತುಲಸಿಯಿಂದ ನಿರ್ಮಿಸಿ ಪೂಜಿಸಿದಲ್ಲಿ ದೊರೆಯುವ ಫಲವನ್ನು ವರ್ಣಿಸಲು ಯಾವ ಪುರುಷನಿಗೂ ಸಾಧ್ಯವೆನ್ನಿಸದು.

★★★

## ತುಲಸೀಮಾಲೆ

ಉಪನೀತ ಪುರುಷನಿಗೆ ಯಜ್ಞೋಪವೀತದಂತೆ ನಿತ್ಯಧಾರಣೆಗೆ ವಿಹಿತವಾದ ಮಾಲೆ ಎಂದರೆ ತುಲಸಿಮಾಲೆ. ತುಲಸಿಕಾಷ್ಠದಿಂದ ಮಾಲೆಯನ್ನು ನಿರ್ಮಿಸಿಕೊಂಡು, ಪ್ರತಿನಿತ್ಯದಲ್ಲೂ ಸಹ ತಪ್ಪದೆ ಧರಿಸಲೇಬೇಕು ಎಂಬ ವಿಧಿ ಶಾಸ್ತ್ರಗಳಲ್ಲಿ ನಿರೂಪಿತವಾಗಿದೆ. ಕಮಲಾಕ್ಷ ಮೊದಲಾದವುಗಳ ಮಾಲೆಯು ಸಹ ವೈಷ್ಣವರಿಗೆ ವಿಹಿತವಾಗಿದ್ದರೂ ತುಲಸಿಮಾಲೆಯು ಮಾತ್ರ ಕಡ್ಡಾಯವಾಗಿ ವಿಹಿತ ಎಂಬುದು ವಿಶೇಷ. ಗೋಪಿಚಂದನ ಊರ್ಧ್ವಪುಂಡ್ರಗಳೂ ಅಸಾಧಾರಣವಾದ ವೈಷ್ಣವ ಲಾಂಛನವೆನ್ನಿಸಿರುವಂತೆ ತುಲಸಿಮಾಲೆಯ ಧಾರಣೆಯು ಸಹ ಶ್ರೇಷ್ಠ ವೈಷ್ಣವ ಲಾಂಛನ ಎನ್ನಿಸಿದೆ ಎಂಬುದು ಗಮನಿಸಬೇಕಾದ ಅಂಶ. ತುಲಸಿಕಾಷ್ಠಗಳ ಮಾಲೆಯಲ್ಲದೆ ತುಲಸಿದಳಗಳಿಂದ ನಿರ್ಮಿತವಾದ ಶ್ರೀಹರಿಯ ನಿರ್ಮಾಲ್ಯತುಲಸಿಗಳ ಮಾಲೆಯು ಸಹ ವೈಷ್ಣವರಿಗೆ ವಿಹಿತ. ಸುಮಧ್ವವಿಜಯದಲ್ಲಿ ಶ್ರೀಮದಾಚಾರ್ಯರ ಕೊರಳಲ್ಲಿ ಹಾಗೆ ನಿರ್ಮಾಲ್ಯ ತುಲಸಿಮಾಲೆಯನ್ನು ಶಿಷ್ಯನೊಬ್ಬನು ಸಮರ್ಪಿಸಿದ ಉಲ್ಲೇಖ ಬಂದಿದೆ: "ಅವಧಾರ್ಯ ವಿಶೇಷಕಾರಿಶಂಖಪ್ರಕಟಾಂಕಾನ್ ಸುಧಿಯಾ ಗತಾರ್ದ್ರಭಾವಾನ್

। ಲಸಿತಾ ತುಲಸೀಸ್ರಗಸ್ಯ ಕಂಠೇ ಹರಿನಿರ್ಮಾಲ್ಯತಯೋಚಿತಾ ನ್ಯಧಾಯಿ ॥'' - (೧೪/೧೨)

**ತುಲಸೀಮಾಲಯಾ ವಿಷ್ಣುಮರ್ಚಯೇದ್ಯಸ್ತು ಪರ್ವಸು ।**
**ತಸ್ಯ ಪುಣ್ಯಫಲಂ ವಕ್ತುಂ ಕಃ ಶಕ್ತೋ ದಿವಿ ವಾ ಭುವಿ ॥**

- ವಿಷ್ಣುಧರ್ಮೋತ್ತರ (೧೫/೧೩)

ತುಲಸಿಯ ದಳಗಳಂತೆ ತುಲಸಿಯ ದಳಗಳಿಂದ ಕಟ್ಟಿದ ಮಾಲೆಯು ಸಹ ಭಗವತ್ಪೂಜೆಗೆ ವಿಶೇಷ ಸಾಧನವೆನ್ನಿಸಿದೆ. ಅಂತಹ ಮಾಲೆಯಿಂದ ಲಭಿಸುವ ಪುಣ್ಯವನ್ನು ವರ್ಣಿಸಲು ದೇವಲೋಕದಲ್ಲಿಯ ಅಥವಾ ಭೂಲೋಕದಲ್ಲಿಯ ಯಾರಿಗೂ ಸಾಧ್ಯವಾಗದು.

**ತುಲಸೀದಲಜಾಂ ಮಾಲಾಂ ಕಂಠಸ್ಥಾಂ ವಹತೇ ತು ಯಃ ।**
**ವಿಷ್ಣೋಚ್ಛಿಷ್ಟಾಂ ವಿಶೇಷೇಣ ಸ ನಮಸ್ಯೋ ದಿವೌಕಸಾಮ್ ॥**

- ಪದ್ಮಪುರಾಣ (೩/೨೨/೧೨)

ವಿಷ್ಣುವಿಗೆ ಸಮರ್ಪಿಸಿ ನಿರ್ಮಾಲ್ಯವೆನ್ನಿಸಿದ ತುಲಸೀದಳಗಳ ಮಾಲೆಯನ್ನು ಕೊರಳಲ್ಲಿ ಯಾವನು ಧರಿಸುವನೋ ಅವನು ದೇವತೆಗಳಿಂದಲೂ ಸಹ ಗೌರವಿಸಲ್ಪಡುವನು.

**ತುಲಸೀದಲಜಾಂ ಮಾಲಾಂ ಮಮೋತ್ತೀರ್ಣಾಂ ವಹೇತ್ ತು ಯಃ ।**
**ಪತ್ರೇ ಪತ್ರೇಽಶ್ವಮೇಧಾನಾಂ ದಶಾನಾಂ ಲಭತೇ ಫಲಮ್ ॥**-ಸ್ಕಂದಪುರಾಣ

ತುಲಸಿದಳಗಳಿಂದ ಮಾಡಿದ ನನ್ನ ನಿರ್ಮಾಲ್ಯವನ್ನು ಯಾವನು ಧರಿಸುವನೋ ಅಂತಹವನಿಗೆ ಆ ತುಲಸಿಮಾಲೆಯಲ್ಲಿನ ಪ್ರತಿಯೊಂದು ದಳಕ್ಕೂ ಸಹ ೧೦ ಅಶ್ವಮೇಧ ಯಾಗಗಳಷ್ಟು ಪುಣ್ಯವು ಲಭಿಸುವುದು.

**ಮೌಕ್ತಿಕಂ ಚ ಪ್ರವಾಲಂ ಚ ಪದ್ಮಾಕ್ಷಂ ತುಲಸೀಮಣಿಮ್ ।**
**ಜಪಪೂಜನವೇಲಯಾಂ ಧಾರಿತೋ ಯಃ ಸ ದೈವಿಕಃ ॥** - ಸ್ಕಂದಪುರಾಣ

ಮುತ್ತಿನ ಮಾಲೆ, ಹವಳದ ಮಾಲೆ, ಕಮಲಾಕ್ಷಮಾಲೆ ಹಾಗೂ ತುಲಸಿಮಾಲೆಗಳನ್ನು ಜಪ ಹಾಗೂ ಪೂಜೆಗಳ ಸಮಯದಲ್ಲಿ ಧರಿಸುವುದು ದೇವಸಾನ್ನಿಧ್ಯಕ್ಕೆ ಸಾಧನ.

**ತುಲಸೀಪತ್ರಸಂಯುಕ್ತಂ ಧಾರಯೇನ್ಮಸ್ತಕೇ ಜಲಮ್ ।**
**ತಸ್ಯ ಸ್ಯಾತ್ ಸಫಲಂ ಜನ್ಮ ತನ್ಮೇ ನಿಗದತಃ ಶೃಣು** ॥ ೮ ॥

**ಗಂಗಾದಿಸರ್ವತೀರ್ಥೇಷು ಸ್ನಾತ್ವಾ ಯತ್ಫಲಮಶ್ನುತೇ ।**
**ತತ್ಫಲಂ ಸಮವಾಪ್ನೋತಿ ಮಧುಸೂಧನಶಾಸನಾತ್** ॥ ೯ ॥

ತುಲಸಿಪತ್ರದಿಂದ ಕೂಡಿದ ನೀರನ್ನು ಶಿರಸಾಧರಿಸುವವನ ಜನ್ಮವು ಸಾರ್ಥಕವೆನ್ನಿಸುವುದು. ಗಂಗಾ ಮೊದಲಾದ ಸಕಲ ತೀರ್ಥಗಳಲ್ಲಿ ಸ್ನಾನಮಾಡಿದಾಗ ಲಭಿಸುವ ಫಲವು ಸಹ ಪ್ರಾಪ್ತವಾಗುವುದು.

**ತ್ರುಟಿತಾಂ ಮಲಸಂದಿಗ್ಧಾಂ ಲಿಪ್ತಾಂ ವಾಽಶುಚಿವಸ್ತುಭಿಃ ।**
**ವಿಮಲೀಕೃತ್ಯ ಸಂಧಾರ್ಯಾ ತದನ್ಯಾ ವಾಽಪಿ ತತ್ಕ್ಷಣೇ ॥**

-ಶಾರ್ಙ್ಗಸಂಹಿತಾ.(೩/೫೪)

ಹರಿದ, ಕಶ್ಮಲದೂಷಿತವಾದ, ಅಶುಚಿವಸ್ತುಗಳ ಸಂಪರ್ಕವನ್ನು ಹೊಂದಿದ ತುಲಸಿಮಾಲೆಯನ್ನು ಸ್ವಚ್ಛಗೊಳಿಸಿ ಪುನಃ ಧರಿಸಬಹುದು ಅಥವಾ ಆ ತುಲಸಿಮಾಲೆಯ ಬದಲು ಮತ್ತೊಂದು ಶುದ್ಧವಾದ ತುಲಸಿಮಾಲೆಯನ್ನು ಆ ಕೂಡಲೇ ಧರಿಸಬೇಕು.

**ಶಯನೇ ಭೋಜನೇ ಚೈವ ಮಲಮೂತ್ರವಿಸರ್ಜನೇ ।**
**ನ ತ್ಯಜೇತ್ ತುಲಸೀಮಾಲಾಂ ತ್ಯಾಗೇ ಚ ಬ್ರಹ್ಮಹಾ ಭವೇತ್ ॥**

-ಶಾರ್ಙ್ಗಸಂಹಿತಾ.(೩/೫೪)

ಮಲಗುವಾಗ, ಉಣ್ಣುವಾಗ, ಮಲಮೂತ್ರಗಳನ್ನು ವಿಸರ್ಜನೆಮಾಡುವಾಗ ಸಹ ತುಲಸಿ ಮಾಲೆಯನ್ನು ತೊರೆಯಬೇಕಿಲ್ಲ; ಹಾಗೆ ತೊರೆದಲ್ಲಿ ಬ್ರಹ್ಮಹತ್ಯಾಪಾಪವು ಲಭಿಸುವುದು.

**ಸ್ನಾನೇ ಮೂತ್ರಪುರೀಷೇ ಚ ಮೈಥುನೇ ಪಾಪಕರ್ಮಸು ।**
**ನ ತ್ಯಜೇತ್ ತುಲಸೀಮಾಲಾಂ ತ್ಯಾಗೇ ಚ ಬ್ರಹ್ಮಹಾ ಭವೇತ್ ॥**

-ಶಾರ್ಙ್ಗಸಂಹಿತಾ.(೩/೫೪)

ಸ್ನಾನ, ಮಲಮೂತ್ರವಿಸರ್ಜನೆ, ಮೈಥುನ ಹಾಗೂ ಕೆಲವು ಅನಿವಾರ್ಯವಾಗಿ ಘಟಿಸುವ ಕೆಲವು ಪಾಪಕಾರ್ಯಗಳು, ಇಂತಹ ಸಮಯದಲ್ಲೂ ತುಲಸಿಮಾಲೆಯನ್ನು ತೊರೆಯಕೂಡದು. ಹಾಗೆ ತೊರೆದಲ್ಲಿ ಬ್ರಹ್ಮಹತ್ಯಾಪಾಪವು ಲಭಿಸವುದು.

**ಯಜ್ಞೋಪವೀತವದ್ಧಾರ್ಯಾ ಕಂಠೇ ತುಲಸಿಮಾಲಿಕಾ ।**
**ಕ್ಷಣಮಾತ್ರಪರಿತ್ಯಾಗಾತ್ ವಿಷ್ಣುದ್ರೋಹೀ ಭವೇನ್ನರಃ ॥** -ಶಾರ್ಙ್ಗಸಂಹಿತಾ

ತುಲಸಿಮಾಲೆಯನ್ನು ಯಜ್ಞೋಪವೀತದಂತೆ ಸದಾ ಧರಿಸಿರಬೇಕು. ಒಂದು ಕ್ಷಣ ತುಲಸಿ ಮಾಲೆಯನ್ನು ತೊರೆದ ಮನುಷ್ಯನು ಸಹ ವಿಷ್ಣುದ್ರೋಹಿ ಎನ್ನಿಸುವನು.

**ಯೋ ದದ್ಯಾತ್ ತುಲಸೀಕಾಷ್ಠಂ ವಿಪ್ರಾಯ ಹರಿಸೇವಿನೇ ।**
**ಬ್ರಹ್ಮಾಂಡಶತಕೋಟೀನಾಂ ದಾನಸ್ಯ ಫಲಮಶ್ನುತೇ ॥** -ಶಾರ್ಙ್ಗಸಂಹಿತಾ.

ಯಾವನು ವಿಷ್ಣುಭಕ್ತನಾದ ವಿಪ್ರನಿಗೆ ತುಲಸಿಕಾಷ್ಠವನ್ನು ದಾನ ನೀಡುವನೋ ಅವನಿಗೆ ಶತಕೋಟಿ ಬ್ರಹ್ಮಾಂಡಗಳ ದಾನದ ಫಲವು ಲಭಿಸುವುದು.

**ತುಲಸೀಕಾಷ್ಠಮಾಲಾಂ ಯೋ ದದ್ಯಾದ್ಧೇಮ್ನಾऽಪಿ ಸಂಯುತಾಮ್ ।**
**ಲಕ್ಷ್ಮೀನಾರಾಯಣಂ ದೇವಂ ಸ ಕರೋತಿ ವಶಂ ಧ್ರುವಮ್ ॥**

–ಶಾರ್ಙ್ಗಸಂಹಿತಾ.(೩/೭೩)

ತುಲಸಿಕಾಷ್ಠದ ಮಾಲೆಯನ್ನು ಚಿನ್ನದಿಂದ ಮಾಡಿಸಿ ದಾನ ನೀಡುವವನಿಗೆ ದೇವನಾದ ಶ್ರೀಲಕ್ಷ್ಮೀನಾರಾಯಣನು ವಶವರ್ತಿಯಾಗುವನು.

**ತುಲಸ್ಯಾಂ ವಸತೇ ವಿಷ್ಣುಃ ಕನಕೇ ತು ರಮೇಶ್ವರೀ ।**
**ತಸ್ಮಾತ್ ಸುವರ್ಣಸಂಯಕ್ತಾ ಮಾಲಿಕಾ ಸರ್ವಕಾಮದಾ ॥**

–ಶಾರ್ಙ್ಗಸಂಹಿತಾ.(೩/೭೬)

ತುಲಸಿಯಲ್ಲಿ ವಿಷ್ಣುವು ನೆಲೆಸಿರುವವನು; ಸುವರ್ಣದಲ್ಲಿ ಮಹಾಲಕ್ಷ್ಮಿಯು ನೆಲೆಸಿರುವಳು, ಆದ್ದರಿಂದ ತುಲಸಿಮಾಲೆಯನ್ನು ಚಿನ್ನದಲ್ಲಿ ಮಾಡಿಸುವುದು ಸರ್ವಾಭೀಷ್ಟಪ್ರದ ಎನ್ನಿಸುವುದು.

**ತುಲಸೀಕಾಷ್ಠಮಾಲಾ ತು ಭಕ್ತಿರೂಪಾ ನ ಕಾಷ್ಠಜಾ ॥** –ಶಾರ್ಙ್ಗಸಂಹಿತಾ

ತುಲಸಿಕಾಷ್ಠಮಾಲೆಯು ಬರಿ ಕಟ್ಟಿಗೆ ಹಾರವಲ್ಲ, ಅದು ವಿಷ್ಣುಭಕ್ತಿಯ ಪ್ರತೀಕವೇ ಆಗಿದೆ.

**ದ್ವಾದಶೈಃ ಸಪ್ತವಿಂಶತ್ಯಾ ಚತುರ್ಭಿಶ್ಚ ಶತಾರ್ಧಕೈಃ ।**
**ಅಷ್ಟೋತ್ತರಶತೈರ್ಮಾಲಾ ಮಣಿಕೈರ್ವಿಜಯೇ ಮತಾ ॥** – ಸ್ಕಂದಪುರಾಣ

ಹನ್ನೆರಡು, ಇಪ್ಪತ್ತೇಳು, ಐವತ್ನಾಲ್ಕು ಅಥವಾ ನೂರೆಂಟು ಮಣಿಗಳಿಂದ ಮಾಡಿದ ತುಲಸಿ ಮಾಲೆಯನ್ನು ಧರಿಸುವುದು ವಿಜಯಕ್ಕೆ ಸಾಧನ.

**ನಿವೇದ್ಯ ಭಕ್ತ್ಯಾ ಮೇ ಮಾಲಾಂ ತುಲಸೀಕಾಷ್ಠಸಂಭವಾಮ್ ।**
**ವಹತೇ ಯೋ ನರೋ ಭಕ್ತ್ಯಾ ತಸ್ಯ ವೈ ನಾಸ್ತಿ ಪಾತಕಮ್ ॥** – ಸ್ಕಂದಪುರಾಣ

ತುಲಸಿಕಾಷ್ಠದ ಮಾಲೆಯನ್ನು ನಿರ್ಮಿಸಿ ಅದನ್ನು ಭಕ್ತಿಯಿಂದ ಶ್ರೀಹರಿಗೆ ಸಮರ್ಪಿಸಿ, ಆ ಬಳಿಕ ಕೊರಳಲ್ಲಿ ಧರಿಸುವ ಮಾನವನಿಗೆ ಪಾತಕವೇ ಇರುವುದಿಲ್ಲ.

**ಸದಾ ಪ್ರೀತಮನಾಸ್ತಸ್ಯ ವತ್ಸ ಪ್ರಾಣತರೋ ಹಿ ಸಃ ।**
**ತುಲಸೀಕಾಷ್ಠಸಂಭೂತಾಂ ಯೋ ಮಾಲಾಂ ವಹತೇ ನರಃ ।**
**ಪ್ರಾಯಶ್ಚಿತ್ತಂ ನ ತಸ್ಯಾಸ್ತಿ ನಾಶೌಚಂ ತಸ್ಯ ವಿದ್ಯತೇ ॥** – ಸ್ಕಂದಪುರಾಣ

ತುಲಸಿಕಾಷ್ಠದಿಂದ ಮಾಡಿದ ಮಾಲೆಯನ್ನು ಯಾವನು ಧರಿಸುವನೋ ಅವನು ನನಗೆ ಮಗುವಿನಂತೆ ಅತ್ಯಂತ ಪ್ರಿಯನೆನ್ನಿಸುವನು. ಅವನಿಗೆ ಬೇರೆ ಪ್ರಾಯಶ್ಚಿತ್ತದ ಅಗತ್ಯವಿಲ್ಲ. ಸೂತಕದ ಲೇಪವೂ ಅವನಿಗೆ ಆಗದು. (ಎಂದರೆ ಅನಿವಾರ್ಯಕಾರಣಗಳಿಂದ ಸೂತಕಿಗಳ ಸ್ಪರ್ಶವಾದರೂ ಅವನಿಗೆ ದೋಷವಿರದು ಎಂದರ್ಥ).

✓ ತುಲಸೀಕಾಷ್ಠಸಂಭೂತಂ ಶಿರೋಬಾಹುವಿಭೂಷಣಮ್ ।
ಬಾಹ್ವೋಃ ಕರೇ ಚ ಮರ್ತ್ಯಸ್ಯ ದೇಹೇ ಯಸ್ಯ ಸ ಮೇ ತನುಃ ॥

– ಸ್ಕಂದಪುರಾಣ

ತುಲಸಿಕಾಷ್ಠದಿಂದ ಮಾಡಿದ ಶಿರೋಭೂಷಣ, ಬಾಹುಭೂಷಣಗಳನ್ನು ದೇಹದಲ್ಲಿ ಹೊಂದಿದವನು ನನ್ನ ಪ್ರತಿಮೆಯಂತೆಯೇ ಸರಿ.

ಕ್ಷಾಲಿತಾಂ ಪಂಚಗವ್ಯೇನ ಮೂಲಮಂತ್ರೇಣ ಮಂತ್ರಿತಾಮ್ ।
ಗಾಯತ್ರ್ಯಾ ಚಾಷ್ಟಕೃತ್ವೋ ವೈ ಮಂತ್ರಿತಾಂ ಧೂಪಯೇಚ್ಚ ತಾಮ್ ॥
ವಿಧಿವತ್ ಪರಯಾ ಭಕ್ತ್ಯಾ ಸದ್ಯೋಜಾತೇನ ಪೂಜಯೇತ್ ॥

– ಸ್ಕಂದಪುರಾಣ

ತುಲಸಿಕಾಷ್ಠದಿಂದ ಮಾಲೆಯನ್ನು ನಿರ್ಮಿಸಿ ಅದನ್ನು ಪಂಚಗವ್ಯದಿಂದ ತೊಳೆಯಬೇಕು, ಮೂಲಮಂತ್ರದಿಂದ ಅಭಿಮಂತ್ರಿಸಬೇಕು, ಗಾಯತ್ರಿಯಿಂದ ೮ ಬಾರಿ ಮಂತ್ರಿಸಬೇಕು, ಆ ಬಳಿಕ ಧೂಪದೀಪಾದಿಗಳಿಂದ ಪೂಜಿಸಿ, ಶ್ರೀಹರಿಗೆ ಸಮರ್ಪಿಸಿ, ಬಳಿಕ ತಾನು ಧರಿಸಬೇಕು.

ಸನ್ನಿವೇದ್ಯೈವ ಹರಯೇ ತುಲಸಿಕಾಷ್ಠಸಂಭವಾಮ್ ।
ಮಾಲಾಂ ಪಶ್ಚಾತ್ ಸ್ವಯಂ ಧತ್ತೇ ಸ ವೈ ಭಾಗವತೋತ್ತಮಃ ॥

– ಸ್ಕಂದಪುರಾಣ

ತುಲಸಿಕಾಷ್ಠದಿಂದ ಮಾಡಿದ ಮಾಲೆಯನ್ನು ಶ್ರೀಹರಿಗೆ ಸಮರ್ಪಿಸಿದ ಬಳಿಕ ತಾನು ಧರಿಸುವವನೇ ಭಾಗವತೋತ್ತಮ.

ಹರಯೇ ನಾರ್ಪಯೇದ್ಯಸ್ತು ತುಲಸಿಕಾಷ್ಠಸಂಭವಾಮ್ ।
ಮಾಲಾಂ ಧತ್ತೇ ಸ್ವಯಂ ಮೂಢಃ ಸ ಯಾತಿ ನರಕಂ ಧ್ರುವಮ್ ॥

– ಸ್ಕಂದಪುರಾಣ

ತುಲಸಿಕಾಷ್ಠದಿಂದ ಮಾಡಿದ ಮಾಲೆಯನ್ನು ಶ್ರೀಹರಿಗೆ ಸಮರ್ಪಿಸದೆ, ಸ್ವಯಂ ತಾನೆ ಧರಿಸುವವನು ನಿಶ್ಚಿತವಾಗಿಯೂ ನರಕವನ್ನು ಹೊಂದುವನು.

**ಯೇ ಕಂಠಲಗ್ನತುಲಸೀನಲಿನಾಕ್ಷಮಾಲಾಃ**
**ಯೇ ಬಾಹುಮೂಲಪರಿಚಿಹ್ನಿತಶಂಖಚಕ್ರಾಃ।**
**ಯೇ ವಾ ಲಲಾಟಫಲಕೇ ಲಸದೂರ್ಧ್ವಪುಂಡ್ರಾಃ**
**ತೇ ವೈಷ್ಣವಾ ಭುವನಮಾಶು ಪವಿತ್ರಯಂತಿ ॥** – ಸ್ಕಂದಪುರಾಣ

ಕಂಠದಲ್ಲಿ ಧರಿಸಿದ ತುಲಸಿಕಮಲಾಕ್ಷ ಮಾಲೆಗಳು, ತೋಳಿನಲ್ಲಿ ಲಾಂಛಿತವಾದ ಶಂಖಚಕ್ರಗಳ ಚಿಹ್ನೆಗಳು, ಹಣೆಯಲ್ಲಿ ಹೊಳೆಯುವ ಊರ್ಧ್ವಪುಂಡ್ರಗಳು – ಇಂತಹ ವೈಷ್ಣವರು ಕೂಡಲೇ ಲೋಕವನ್ನೇ ಪವಿತ್ರಗೊಳಿಸುವರು.

**ಯಾನಿ ಕಾನಿ ಚ ಮಾಲ್ಯಾನಿ ಯತ್ಕಿಂಚಿದನುಲೇಪನಮ್ ।**
**ಅಲಕ್ಷ್ಮೀಪರಿಹಾರಾಯ ನಿತ್ಯಂ ಸೇವೇತ ವೈ ಬುಧಃ ॥** – ಸ್ಕಂದಪುರಾಣ

ತುಲಸಿಮಾಲಾಧಾರಣೆಯ ಮಂತ್ರ :



**ತುಲಸೀಕಾಷ್ಠಸಂಭೂತೇ ಮಾಲೇ ಕೃಷ್ಣಜನಪ್ರಿಯೇ ।**
**ಬಿಭರ್ಮಿ ತ್ವಾಮಹಂ ಕಂಠೇ ಕುರು ಮಾಂ ಕೃಷ್ಣವಲ್ಲಭಮ್ ॥** – ಸ್ಕಂದಪುರಾಣ

ಕೃಷ್ಣಭಕ್ತರಿಗೆ ಪ್ರಿಯವಾದ ತುಲಸಿಕಾಷ್ಠಗಳಿಂದ ಮಾಡಿದ ಮಾಲೆಯೇ! ನಿನ್ನನ್ನು ನಾನು ಕೊರಳಲ್ಲಿ ಧರಿಸುವೆನು. ನನ್ನನ್ನು ಶ್ರೀಕೃಷ್ಣನಿಗೆ ಪ್ರಿಯನನ್ನಾಗಿ ಮಾಡು.

**ಯಥಾ ತ್ವಂ ವಲ್ಲಭಾ ವಿಷ್ಣೋರ್ನಿತ್ಯಂ ವಿಷ್ಣುಜನಪ್ರಿಯೇ ।**
**ತಥಾ ಮಾಂ ಕುರು ದೇವೇಶಿ ನಿತ್ಯಂ ವಿಷ್ಣುಜನಪ್ರಿಯಮ್ ॥** – ಸ್ಕಂದಪುರಾಣ

ವಿಷ್ಣುಜನರಿಗೆ ಪ್ರಿಯಳಾದ ಎಲೈ ತುಲಸಿಯೇ ನೀನು ವಿಷ್ಣುವಿಗೆ ಹೇಗೆ ಸದಾ ಪ್ರಿಯಳೋ ಹಾಗೆ ನನ್ನನ್ನು ವೈಷ್ಣವರಿಗೆ ಸದಾ ಪ್ರಿಯನನ್ನಾಗಿ ಮಾಡು.

**ಲಾ ಧಾತುರುಕ್ತೋ ಹ್ಯಾದಾನೇ ಲಾಸಿ ಮಾಂ ಹರಿವಲ್ಲಭೇ ।**
**ಭಕ್ತೇಭ್ಯಶ್ಚ ಸಮಸ್ತೇಭ್ಯಃ ತೇನ ಮಾಲಾ ನಿಗದ್ಯಸೇ ॥**
**ಏವಂ ಸಂಪ್ರಾರ್ಥ್ಯ ವಿಧಿವತ್ ಮಾಲಾಂ ಕೃಷ್ಣಗಲೇಽರ್ಪಿತಾಮ್ ।**
**ಧಾರಯೇದ್ವೈಷ್ಣವೋ ಯೋಽಸೌ ಸ ಗಚ್ಛೇದ್ವೈಷ್ಣವಂ ಪದಮ್ ॥**
**ಸಮಾಪ್ತೇ ಕರ್ಮಣಿ ತಥಾ ಪ್ರಾರ್ಥ್ಯ ಗುಪ್ತಾಂ ನಿಧಾರಯೇತ್ ॥**

– ಸ್ಕಂದಪುರಾಣ

ಹೀಗೆ ಚೆನ್ನಾಗಿ ಪ್ರಾರ್ಥಿಸಿ, ಶ್ರೀಕೃಷ್ಣನ ಕೊರಳಲ್ಲಿ ಸಮರ್ಪಿಸಿದ ತುಲಸಿಮಾಲೆಯನ್ನು ವೈಷ್ಣವನು ಧರಿಸಬೇಕು. ಅಂತಹವನು ವೈಷ್ಣವಲೋಕವನ್ನು ಹೊಂದುವನು. ಕಾರ್ಯಪೂರೈಸಿದ ಮೇಲೆ ಮತ್ತೊಮ್ಮೆ ಪ್ರಾರ್ಥಿಸಿ, ತುಲಸಿಮಾಲೆಯನ್ನು ಸುರಕ್ಷಿತವಾಗಿ ತೆಗೆದಿರಿಸಬೇಕು (ನಿತ್ಯಧಾರಣೆಗೆ ತುಲಸಿಮಾಲೆ ಹೇಗೋ ಹಾಗೆ ವಿಶೇಷವಾದ ಪೂಜಾದಿ

ಕಾರ್ಯಗಳಿಗೆ ಪ್ರತ್ಯೇಕವಾದ ತುಲಸಿ ಮಾಲೆಯು ವಿಹಿತ. ಅಂತಹ ತುಲಸಿಮಾಲೆಯನ್ನು ಆ ಕಾರ್ಯವು ಪೂರೈಸಿದ ಮೇಲೆ ಪ್ರತ್ಯೇಕವಾಗಿ ತೆಗೆದಿರಿಸಬೇಕು ಎಂದರ್ಥ).

**ತುಲಸೀದಲಸಮ್ಮಿಶ್ರಂ ಗಂಗಾಪಾನೀಯಮುತ್ತಮಮ್ ।**
**ಧ್ರಿಯತೇ ಮಸ್ತಕೇ ಯೇನ ತಸ್ಯ ಪುಣ್ಯಫಲಂ ಶ್ರುಣು ॥**

**ಅಶ್ವಮೇಧಸಹಸ್ರಾಣಿ ಅಗ್ನಿಷ್ಟೋಮಾಯುತಾನಿ ಚ ।**
**ಕೃತ್ವಾ ಯತ್ಫಲಮಾಪ್ನೋತಿ ತತ್ಫಲಂ ಪ್ರಾಪ್ಯತೇ ಧ್ರುವಮ್ ॥** – ಸ್ಕಂದಪುರಾಣ

ತುಲಸಿದಳದಿಂದ ಮಿಶ್ರಿತವಾದ ಶ್ರೇಷ್ಠವಾದ ಗಂಗಾಜಲವನ್ನು ಶಿರಸ್ಸಿನಲ್ಲಿ ಧರಿಸುವವನಿಗೆ ಅಪಾರ ಪುಣ್ಯವು ಲಭಿಸುವುದು. ಸಾವಿರ ಅಶ್ವಮೇಧಗಳನ್ನು, ಹತ್ತುಸಾವಿರ ಅಗ್ನಿಷ್ಟೋಮ ಯಾಗಗಳನ್ನು ಮಾಡಿದಾಗ ಲಭಿಸುವ ಫಲವು ತುಲಸಿಮಿಶ್ರಿತ ಗಂಗಾಜಲವನ್ನು ಶಿರಸ್ಸಿನಲ್ಲಿ ಧರಿಸುವವನಿಗೆ ಲಭಿಸುವುದು.

**ತುಲಸೀಕಾಷ್ಠಮಾಲಾಭಿರ್ಭೂಷಿತಃ ಪುಣ್ಯಮಾಚರೇತ್ ।**
**ಪಿತೃಣಾಂ ದೇವತಾನಾಂ ಚ ಪುಣ್ಯಂ ಕೋಟಿಗುಣಂ ಕಲೌ ॥**

– ಗರುಡಪುರಾಣ

ತುಲಸಿಮಾಲೆಗಳಿಂದ ಭೂಷಿತನಾಗಿ ಪುಣ್ಯಕಾರ್ಯವನ್ನು ಆಚರಿಸಬೇಕು. ಅಂತಹ ಕಾರ್ಯವು ಕಲಿಯುಗದಲ್ಲಿ ಪಿತೃಗಳಿಗೂ, ದೇವತೆಗಳಿಗೂ ಕೋಟಿಪಟ್ಟು ಪುಣ್ಯಕರ-ವೆನ್ನಿಸುವುದು.

**ತುಲಸೀಕಾಷ್ಠಮಾಲಾಭಿರ್ಭೂಷಿತೇ ಭುವಿ ಮಾನವೇ ।**
**ದುಃಸ್ವಪ್ನಂ ದುರ್ನಿಮಿತ್ತಂ ಚ ನ ಭಯಂ ಶಾತ್ರವಂ ಕ್ವಚಿತ್ ॥** – ಗರುಡಪುರಾಣ

ತುಲಸಿಕಾಷ್ಠದ ಮಾಲೆಗಳಿಂದ ಭೂಷಿತನಾದ ಮಾನವನಿಗೆ ದುಃಸ್ವಪ್ನವಾಗಲಿ, ದುಃಶಕುನಗಳಾಗಲಿ, ಶತ್ರುಗಳ ಭಯವಾಗಲಿ, ಎಲ್ಲೂ ಇರದು.

**ತುಲಸೀಕಾಷ್ಠಮಾಲಾಭಿರ್ಭೂಷಿತೋ ಭ್ರಮತೇ ಯದಿ ।**
**ದುಃಸ್ವಪ್ನಂ ದುರ್ನಿಮಿತ್ತಂ ಚ ನ ಭಯಂ ಶಸ್ತ್ರಜಂ ಕ್ವಚಿತ್ ॥** – ಸ್ಕಂದಪುರಾಣ

ತುಲಸಿಕಾಷ್ಠದ ಮಾಲೆಗಳಿಂದ ಭೂಷಿತನಾದವನು ಎಲ್ಲಿಯೇ ಸಂಚರಿಸುತ್ತಿದ್ದರೂ ಅವನಿಗೆ ದುಃಸ್ವಪ್ನವಾಗಲಿ, ದುಃಶಕುನಗಳಾಗಲಿ, ಶಸ್ತ್ರಗಳಿಂದಾಗುವ ಭಯವಾಗಲಿ, ಎಂದೂ ಇರದು.

**ತುಲಸೀಕಾಷ್ಠಸಂಭೂತಾಂ ಯೋ ಮಾಲಾಂ ಧಾರಯೇನ್ನರಃ ।**
**ಪ್ರಾಯಶ್ಚಿತ್ತಂ ನ ತಸ್ಯಾಸ್ತಿ ನಾಶೌಚಂ ತಸ್ಯ ವಿಗ್ರಹೇ ॥** – ಪದ್ಮಪುರಾಣ

ತುಲಸಿಕಾಷ್ಠದಿಂದ ಮಾಡಿದ ಮಾಲೆಯನ್ನು ಯಾವ ಮಾನವನು ಧರಿಸುವನೋ ಅವನ ದೇಹಕ್ಕೆ ಪ್ರಾಯಶ್ಚಿತ್ತದ ಅಗತ್ಯವಿರದು, ಆಶೌಚವೂ ತಟ್ಟದು.

**ಸದಾ ಸಂಧಾರಯೇದ್ಯಸ್ತು ತುಲಸೀಮಣಿಮಾಲಿಕಾಮ್ ।**
**ಭೂತಪ್ರೇತಪಿಶಾಚೈಶ್ಚ ನ ದೃಷ್ಟ್ವೋ ವರ್ತತೇ ಸುಖೀ ॥** – ಗರುಡಪುರಾಣ

ಸದಾ ಯಾವನು ತುಲಸಿಮಣಿಗಳ ಮಾಲೆಯನ್ನು ಧರಿಸುವನೋ ಅವನು ಭೂತ, ಪ್ರೇತ, ಪಿಶಾಚಗಳ ಕಣ್ಣಿಗೆ ಬೀಳದೆ, ಸುಖದಿಂದಿರುವನು.

**ತುಲಸೀಕಾಷ್ಠಮಾಲಾಂ ತು ಪ್ರೇತರಾಜಸ್ಯ ದೂತಕಾಃ ।**
**ದೃಷ್ಟ್ವಾ ನಶ್ಯಂತಿ ದೂರೇಣ ವಾತೋದ್ಧೂತಾ ಯಥಾ ಘನಾಃ ॥**
– ಗರುಡಪುರಾಣ

ತುಲಸಿಕಾಷ್ಠದಿಂದ ಮಾಡಿದ ಮಾಲೆಯನ್ನು ಕಾಣುತ್ತಲೇ ಯಮರಾಜನ ದೂತರು, ಗಾಳಿಯ ಹೊಡೆತಕ್ಕೆ ಸಿಕ್ಕಿದ ಮೇಘಗಳಂತೆ ದೂರಕ್ಕೆ ಸಾಗುವರು.

**ತುಲಸೀಮಣಿಮಾಲಾಂ ಚ ಗಲೇ ಧೃತ್ವಾರ್ಚಯೇದ್ಧರಿಮ್ ।**
**ಸಾಲಗ್ರಾಮನಿವಾಸಸ್ಥಂ ನ ಸ ಯಾತಿ ಯಮಾಲಯಮ್ ॥** – ಗರುಡಪುರಾಣ

ತುಲಸಿಮಣಿಗಳ ಮಾಲೆಯನ್ನು ಕೊರಳಲ್ಲಿ ಧರಿಸಿ, ಸಾಲಿಗ್ರಾಮದಲ್ಲಿ ಸನ್ನಿಹಿತನಾದ ಶ್ರೀಹರಿಯನ್ನು ಪೂಜಿಸುವವನು ಯಮನ ಮಂದಿರಕ್ಕೆ ತೆರಳನು.

**ಯದ್ದೇಹೇ ತುಲಸೀಕಾಷ್ಠಂ ಪತ್ರಂ ಶುಷ್ಕಮಥಾರ್ದ್ರಕಮ್ ।**
**ಭರತೇ ತದ್ಗೃಹೇ ನೈವ ಪಾಪಂ ಸಂಕ್ರಮತೇ ಕಲೌ ॥** – ಗರುಡಪುರಾಣ

ಯಾವನ ದೇಹದಲ್ಲಿ ತುಲಸಿಕಾಷ್ಠವಾಗಲಿ, ಹಸಿಯಾದ ಅಥವಾ ಒಣಗಿದ ಎಲೆಯಾಗಲಿ ಧರಿಸಲ್ಪಟ್ಟಿರುವುದೋ ಅವನ ಮನೆಯಲ್ಲಿ ಪಾಪವು ಕಾಲಿಡಲು ಸಾಧ್ಯವೇ ಇಲ್ಲ.

**ತುಲಸೀಪತ್ರಸಂಭೂತಾಂ ಯೋ ಮಾಲಾಂ ವಹತೇ ನರಃ ।**
**ಫಲಂ ಯಚ್ಛಾಮ್ಯಹಂ ವತ್ಸ ಪ್ರತ್ಯಹಂ ದ್ವಾರಕೋದ್ಭವಮ್ ॥** – ಗರುಡಪುರಾಣ

ಯಾವ ಮಾನವನು ತುಲಸಿಎಲೆಗಳಿಂದ ಮಾಡಿದ ಮಾಲೆಯನ್ನು ಧರಿಸುವನೋ ಅವನಿಗೆ ನಾನು ಪ್ರತಿನಿತ್ಯವೂ ದ್ವಾರಕಾಯಾತ್ರೆಯ ಪುಣ್ಯವನ್ನು ನೀಡುವೆನು.

**ಧಾರಯಂತಿ ನ ಮೇ ಮಾಲಾಂ ಹೈತುಕಾಃ ಪಾಪಬುದ್ಧಯಃ ।**
**ನರಕಾನ್ನ ನಿವರ್ತಂತೇ ದಗ್ಧಾಃ ಕೋಪಾಗ್ನಿನಾ ಮಮ ॥** – ಗರುಡಪುರಾಣ

ಸಲ್ಲದ ಕಾರಣವನ್ನು ಮುಂದಿಟ್ಟು ಪಾಪಬುದ್ಧಿಯ ಯಾವ ಜನರು ತುಲಸಿಮಾಲೆಯನ್ನು ಧರಿಸುವುದಿಲ್ಲವೋ ಅವರು ನನ್ನ ಕೋಪದ ಅಗ್ನಿಗೆ ದಗ್ಧರಾಗಿ ನರಕದಲ್ಲಿ ಮರಳದಂತೆ ನೆಲೆಸುವರು.



ರುದ್ರಾಕ್ಷಸ್ಫಟಿಕಾದೀನಾಂ ಮಾಲಾಂ ಯೋ ವಹತೇ ನರಃ।
ನ ಮೇ ಭಕ್ತಃ ಸ ಪಾಪಾತ್ಮಾ ನರಕಾನ್ ಪ್ರತಿಪದ್ಯತೇ ॥
ತಸ್ಮದ್ಧಾರ್ಯಾ ಪ್ರಯತ್ನೇನ ಮಾಲಾ ತುಲಸಿಸಂಭವಾ । – ಗರುಡಪುರಾಣ

ರುದ್ರಾಕ್ಷಿ, ಸ್ಫಟಿಕ ವೊದಲಾದವುಗಳ ಮಾಲೆಯನ್ನು ಧರಿಸುವ ಪಾಪಿಯಾದ ಮಾನವನು ನನ್ನ ಭಕ್ತನಲ್ಲ ; ಅವನು ನರಕಗಳನ್ನೇ ಹೊಂದುವನು. ಆದ್ದರಿಂದ ಪ್ರಯತ್ನಪೂರ್ವಕವಾಗಿ ತುಲಸಿಯ ಮಾಲೆಯನ್ನು ಧರಿಸಲೇಬೇಕು.

ಪದ್ಮಾಕ್ಷನಿರ್ಮಿತಾ ಭಕ್ತ್ಯಾ ಫಲೈರ್ಧಾತ್ರ್ಯಾಃ ಸುಪುಣ್ಯದಾ।
ಪುಷ್ಪಮಾಲಾಸಹಸ್ರೇಣ ತುಲ್ಯಮೇಕಂ ಚ ನೀರಜಮ್ ।
ನೀರಜಾನಾಂ ಸಹಸ್ರೇಣ ತುಲ್ಯೈಕಾ ಪದ್ಮಮಾಲಿಕಾ ॥

ಪದ್ಮಮಾಲಾಸಹಸ್ರೇಣ ಸಮಂ ಶ್ರೀತುಲಸೀದಲಮ್ ।
ಸಹಸ್ರತುಲಸೀಪರ್ಣೈಃ ತುಲಸೀಮಂಜರೀಸಮಾ ॥

ತುಲಸೀಮಂಜರೀಣಾಂ ಚ ಕೋಟಿಭಿಃ ಸದೃಶೀ ಭವೇತ್ ।
ಏಕಾ ಶ್ರೀ ತುಲಸೀಮಾಲಾ ಧರ್ಮಧಾಮೇಶಪೂಜನೇ ॥ – ಗರುಡಪುರಾಣ

ಶ್ರೀಹರಿಯ ಪೂಜೆಗೆ ಕಮಲಾಕ್ಷಗಳಿಂದ ಮಾಡಿದ ಮಾಲೆಗಿಂತ ಧಾತ್ರಿಯ ಮಾಲೆಯು ಹೆಚ್ಚು ಪುಣ್ಯಪ್ರದವಾದುದು; ಸಾವಿರ ಪುಷ್ಪಮಾಲೆಗಳಿಗಿಂತ ಒಂದು ಕಮಲಾಕ್ಷಮಾಲೆ ಶ್ರೇಷ್ಠ; ಸಾವಿರ ಕಮಲಾಕ್ಷಮಾಲೆಗಳಿಗಿಂತ ಒಂದು ಕಮಲಮಾಲೆಯು ಶ್ರೇಷ್ಠ; ಸಾವಿರ ಕಮಲಮಾಲೆಗಳಿಗಿಂತ ಒಂದು ತುಲಸಿದಳವು ಶ್ರೇಷ್ಠ ; ಸಾವಿರ ತುಲಸಿ ಎಲೆಗಳಿಗೆ ಒಂದು ತುಲಸಿಮಂಜರಿಯು ಸಮ. ಕೋಟಿ ತುಲಸಿಮಂಜಗಳಿಗಿಂತ ಒಂದು ತುಲಸಿಮಾಲೆಯು ಶ್ರೇಷ್ಠ

★★★

# ವೈಶ್ವದೇವದಲ್ಲಿ ತುಲಸಿಯು ವಿಹಿತ

ಪ್ರತಿನಿತ್ಯದ ವೈಶ್ವದೇವವು ಗೃಹಸ್ಥನಿಗೆ ಕಡ್ಡಾಯವಾದ ಕಾರ್ಯ. ಅದಕ್ಕೆ ವಿಹಿತವಾದ ಸಮಿತ್ತು ಎಂದರೆ, ಮುಖ್ಯವಾಗಿ ತುಲಸಿಯಾಗಿದೆ. ಆದ್ದರಿಂದ ನಿತ್ಯ ವೈಶ್ವದೇವದಲ್ಲಿ ತುಲಸಿಕಾಷ್ಠವನ್ನೇ ಪ್ರಧಾನವಾದ ಸಮಿತ್ತನ್ನಾಗಿ ಉಪಯೋಗಿಸಬೇಕು.



**ತುಲಸೀದಲೇನ ರಹಿತಂ ವೈಶ್ವದೇವಂ ಕರೋತಿ ಯಃ ।**
**ದೇವತಾಸ್ತನ್ನ ಗೃಹ್ಣಂತಿ ಗೃಹ್ಣಂತಿ ಬ್ರಹ್ಮರಾಕ್ಷಸಾಃ ॥** – ಪದ್ಮಪುರಾಣ

ತುಲಸಿದಳವು ಇಲ್ಲದೆ ಯಾವನು ವೈಶ್ವದೇವವನ್ನು ಮಾಡುವನೋ ಅಂತಹ ಹೋಮವನ್ನು ದೇವತೆಗಳು ಸ್ವೀಕರಿಸುವುದಿಲ್ಲ, ಬ್ರಹ್ಮರಾಕ್ಷಸರು ಸ್ವೀಕರಿಸುವರು.

***

## ಹೋಮಕಾರ್ಯಕ್ಕೂ ತುಲಸಿಯು ವಿಹಿತ

ವೈಶ್ವದೇವದೊಂದಿಗೆ ಇತರ ಸಕಲ ಹೋಮಕಾರ್ಯಗಳಿಗೂ ಸಹ ತುಲಸಿಯ ಸಮಿತ್ತು ವಿಹಿತವಾಗಿದೆ. ದೇವಪೂಜೆಗೆ ತುಲಸಿಯು ಹೇಗೋ ಹಾಗೆ ಹೋಮಕಾರ್ಯಕ್ಕೂ ಸಹ ತುಲಸಿಯು ವಿಹಿತ ಎಂದು ತಿಳಿಯಬೇಕು. ಇತರ ಸಮಿತ್ತುಗಳು ವಿಹಿತವಾಗಿರುವ ಹೋಮಗಳಲ್ಲೂ ಸಹ ತುಲಸಿಯ ಸಮಿತ್ತನ್ನು ಸೇರಿಸಿಕೊಳ್ಳುವುದು ಅಗತ್ಯ ; ಪುಷ್ಪಗಳೊಂದಿಗೆ ತುಲಸಿಯ ಮಿಶ್ರಣ ಹೇಗೋ ಹಾಗೆ. ಕೆಲವು ವಿಶೇಷ ಪ್ರಸಂಗಗಳಲ್ಲಂತು ಕೇವಲ ತುಲಸಿಯ ಹೋಮವೇ ವಿಹಿತವಾಗಿದೆ. ಶ್ರೀಮದಾಚಾರ್ಯರು ತಂತ್ರಸಾರಸಂಗ್ರಹದಲ್ಲಿ ಈ ಮಾತನ್ನು ತಿಳಿಸಿರುವರು : ತುಲಸೀಮಪಿ (೪/೧೧೭)



**ಹೋಮಂ ಕುರ್ವಂತಿ ಯೇ ವಿಪ್ರಾಸ್ತುಲಸೀಕಾಷ್ಠವಹ್ನಿನಾ ।**
**ಸಿಕ್ಥೇ ಸಿಕ್ಥೇ ತಿಲೇ ವಾಽಪಿ ಅಗ್ನಿಷ್ಟೋಮಫಲಂ ಭವೇತ್ ॥** – ಪದ್ಮಪುರಾಣ

ಯಾವ ವಿಪ್ರರು ತುಲಸಿಕಾಷ್ಠದ ವಹ್ನಿಯಿಂದ ಹೋಮವನ್ನು ಮಾಡುವರೋ ಅವರಿಗೆ ಪ್ರತಿಹವಿಸ್ಸಿಗೂ ಅಗ್ನಿಷ್ಟೋಮದ ಫಲವು ಲಭಿಸುವುದು.

***

## ಪಾರಣೆಗೂ ತುಲಸಿಯು ವಿಹಿತ

ಏಕಾದಶೀ ಉಪವಾಸ, ವಿಷ್ಣುಪಂಚಕ, ಭೀಷ್ಮಪಂಚಕ ಮೊದಲಾದ ಇತರ ಉಪವಾಸಗಳಲ್ಲಿ ಪಾರಣೆಯು ಪ್ರಮುಖ ಅಂಗ. ಅಂತಹ ಪಾರಣೆಗೂ ಸಹ ತುಲಸಿಯ ಭಕ್ಷಣ ಅತ್ಯಂತ ಶ್ರೇಷ್ಠ. ಉಪವಾಸದ ಪುಣ್ಯವನ್ನು ಅಪಾರವಾಗಿ ಹೆಚ್ಚಿಸುವ ಹಿರಿಮೆ ತುಲಸಿಯದು.

**ಉಪೋಷ್ಯ ದ್ವಾದಶೀಂ ಶುದ್ಧಾಂ ಪಾರಣೇ ತುಲಸೀದಲಮ್ ।**
**ಪ್ರಾಶಯೇದ್ಯದಿ ವಿಪ್ರೇಂದ್ರಶ್ಚಾಶ್ವಮೇಧಾಷ್ಟಕಂ ಲಭೇತ್ ॥** – ಪದ್ಮಪುರಾಣ

ಏಕಾದಶಿಯಂದು ಉಪವಾಸಮಾಡಿ, ದ್ವಾದಶಿಯಂದು ಪಾರಣೆಗೆ ತುಲಸಿದಳವನ್ನು ಭಕ್ಷಿಸಿದಲ್ಲಿ ಎಂಟು ಅಶ್ವಮೇಧಗಳ ಪುಣ್ಯವು ಲಭಿಸುವುದು.

**ಪಕ್ಷೇ ಪಕ್ಷೇ ತು ಸಂಪ್ರಾಪ್ತೇ ದ್ವಾದಶ್ಯಾಂ ಮುನಿಪುಂಗವ ।**
**ಬ್ರಹ್ಮಾದಯೋಽಪಿ ಕುರ್ವಂತಿ ತುಲಸೀಪೂಜನಂ ಕ್ಷಿತೌ ॥**

- ಪದ್ಮಪುರಾಣ (೧೫/೩೦)

ಪಕ್ಷಪಕ್ಷದಲ್ಲೂ ದ್ವಾದಶಿಯಂದು ಬ್ರಹ್ಮಾದಿದೇವತೆಗಳು ಸಹ ಭೂಮಿಯಲ್ಲಿ ತುಲಸೀ ಪೂಜೆಯನ್ನು ಮಾಡುವರು.

**ಯೋ ದ್ವಾದಶ್ಯಾಂ ಸಮಭ್ಯರ್ಚ್ಯ ದೇವೇಶಿಂ ಘೃತಪಾಯಸೈಃ ।**
**ಆರಾಧ್ಯ ಚ ಮಹಾವಿಷ್ಣುಂ ಗೋಲೋಕಸ್ಯಾಧಿಪೋ ಭವೇತ್ ।**

- ಪದ್ಮಪುರಾಣ (೧೫/೨೨)

ದ್ವಾದಶಿಯಂದು ತುಲಸಿಯನ್ನು ಘೃತ, ಪಾಯಸಗಳಿಂದ ಪೂಜಿಸಿ, ವಿಷ್ಣುವನ್ನು ಆರಾಧಿಸುವವನು ಗೋಲೋಕಕ್ಕೆ ಒಡೆಯನಾಗುವನು.

★★★

## ತುಲಸೀಮಹಿಮೆಯ ಶ್ರವಣದ ಫಲ

ಕೆಲವು ವಸ್ತುಗಳ ಮಹಿಮೆಯು ಸಹ ವಿಶೇಷ ಫಲದಾಯಕ. ಮಹಾವಿಷ್ಣುವಿನ ಮಹಿಮೆಯ ಶ್ರವಣವು ಅವನಲ್ಲಿ ವಿಶೇಷವಾಗಿ ಭಕ್ತಿಗೆ ಕಾರಣವಾಗಿ ಮುಂದೆ ಮುಕ್ತಿಗೆ ಸೋಪಾನವೆನ್ನಿಸುವುದು. ಅದರಂತೆ ದೇವತೆಗಳ ಹಾಗೂ ಗುರುಗಳ ಮಹಿಮೆಯನ್ನು ತಾರತಮ್ಯ ಕ್ರಮದಲ್ಲಿ ತಿಳಿದು ಆರಾಧಿಸುವುದು ಸಹ ಹರಿಭಕ್ತಿ ಸಂಪಾದನೆಯ ವಿಹಿತಮಾರ್ಗಗಳಲ್ಲಿ ಸೇರಿದೆ. ತುಲಸಿಯ ಮಹಿಮೆಯು ಸಹ ಹೀಗೆ ವಿಶೇಷ ರೀತಿಯಲ್ಲಿ ತಾರಕವೆನ್ನಿಸಿದೆ. ಇದರ ಮಹಿಮೆಯನ್ನು ಭಕ್ತಿಯಿಂದ ಹೇಳುವವನು ಹಾಗೂ ಭಕ್ತಿಯಿಂದ ಕೇಳುವವನು ಸಹ ಮುಖ್ಯವಾಗಿ ಶ್ರೀಹರಿಯಲ್ಲಿ ಭಕ್ತಿಯನ್ನು ಹೊಂದುವಮೂಲಕ ಸದ್ಗತಿಯನ್ನು ಪಡೆದುಕೊಳ್ಳುವನು. ಇದರಿಂದ ತುಲಸಿಯ ಮಹಿಮೆಯನ್ನು ಸ್ವತಃ ಕೇಳಿ ತಿಳಿಯುವಂತೆ ಕೇಳುವಲ್ಲಿ ಆಸಕ್ತಿ ಹೊಂದಿದವರಿಗೆ ತಿಳಿಸಿ ಹೇಳುವುದು ಸಹ ಮಹತ್ತರವಾದ ಪುಣ್ಯಕಾರ್ಯ ಎಂಬ ವಿಶೇಷಾಂಶವು ಸಹ ಸೂಚಿತವಾಗಿದೆ. ಹರಿಮಹಿಮೆ, ಗುರುಮಹಿಮೆಗಳಂತೆ ತುಲಸಿಯ ಮಹಿಮೆಯ ಕೀರ್ತನ, ಶ್ರವಣಾದಿಗಳೂ ಸಹ ಅತ್ಯಂತ ತಾರಕ. ಶ್ರವಣವು ಭಕ್ತಿಯ ಒಂದು ಪ್ರಭೇದವಾಗಿದೆ. ತುಲಸಿಯಲ್ಲಿ ಭಕ್ತಿಯನ್ನು ಹೊಂದಲು ಅದರ ಮಹಾತ್ಮ್ಯದ ಶ್ರವಣ ಕಾರಣವಾಗುವುದರಿಂದ ಅದಕ್ಕೆ ಇಷ್ಟು ಮಹತ್ತ್ವ. ಕೇವಲ

ಶ್ರವಣದಿಂದಲೇ ಉದ್ಧಾರ ಎಂದರೆ ಅರ್ಥಪೂರ್ವಕವಾದ ಶ್ರವಣವು ಮನನ, ಮೊದಲಾದವುಗಳಿಗೆ ಕಾರಣವಾಗುವುದರಿಂದ ಸಫಲ ಎಂದು ತಾತ್ಪರ್ಯ. ಯಾಂತ್ರಿಕವಾದ ಶ್ರವಣಾದಿಗಳಿಗೆ ಈ ಬಗೆಯ ವಿಶೇಷ ಪುಣ್ಯ ಇರದು ಎಂಬುದನ್ನು ಗಮನಿಸಬೇಕು.

[೩.೨]ಧಾತ್ರೀತುಲಸ್ಯುದ್ಭವಕಾರಣಂ ಯಃ ಶೃಣೋತಿ ಯಃ ಶ್ರಾವಯತೇ ಚ ಭಕ್ತ್ಯಾ ।
ವಿಧೂತಪಾಪ್ಮಾ ಸಹ ಪೂರ್ವಜೈಃ ಸ್ವೈಃ ಸ್ವರ್ಗಂ ವ್ರಜತ್ಯಗ್ರ್ಯವಿಮಾನಸಂಸ್ಥೈಃ ॥
- ಸ್ಕಂದಪುರಾಣ (೨/೪/೨೩/೨೩)

ಧಾತ್ರೀ ಹಾಗೂ ತುಲಸಿಯ ಉತ್ಪತ್ತಿಯ ಕಾರಣವನ್ನು ಯಾವನು ಭಕ್ತಿಯಿಂದ ಕೇಳುವನೋ, ಹೇಳುವನೋ ಅವನು ಪಾಪಗಳನ್ನು ಪರಿಹರಿಸಿಕೊಂಡವನಾಗಿ ತನ್ನ ಪೂರ್ವಜರೊಂದಿಗೆ ಶ್ರೇಷ್ಠವಾದ ವಿಮಾನದಲ್ಲಿ ಕುಳಿತು ಸ್ವರ್ಗವನ್ನು ಪಡೆಯುವನು.

ತುಲಸ್ಯಾಃ ಶೃಣು ಮಾಹಾತ್ಮ್ಯಂ ಪಾಪಘ್ನಂ ಪುಣ್ಯವರ್ಧನಮ್ ।
ಯತ್ಪುರಾ ವಿಷ್ಣುನಾ ಪ್ರೋಕ್ತಂ ರಮಾಯೈ ತದ್ವದಾಮ್ಯಹಮ್ ॥

ಸಂಪ್ರಾಪ್ತೇ ಕಾರ್ತಿಕೇ ಮಾಸಿ ತುಲಸ್ಯಾ ಪೂಜನಂ ಹರೇಃ ।
ಯೇ ಕುರ್ವಂತಿ ನರಾ ಭಕ್ತ್ಯಾ ತೇ ಯಾಂತಿ ಪರಮಂ ಪದಮ್ ॥

- ಸ್ಕಂದಪುರಾಣ (೨/೪/೮/೭, ೮)

ಪಾಪವನ್ನು ಪರಿಹರಿಸುವ, ಪುಣ್ಯವನ್ನು ಹೆಚ್ಚಿಸುವ ತುಲಸಿಯ ಮಹಾತ್ಮ್ಯವನ್ನು ಶ್ರವಣ ಮಾಡು; ಹಿಂದೆ ಮಹಾಲಕ್ಷ್ಮಿಗೆ ವಿಷ್ಣುವು ಹೇಳಿದ ಇದನ್ನು ನಾನು ನಿನಗೆ ತಿಳಿಸುತ್ತಿರುವೆನು. ಕಾರ್ತಿಕಮಾಸ ಬಂದಾಗ ತುಲಸಿಯಿಂದ ಶ್ರೀಹರಿಯನ್ನು ಪೂಜಿಸುವವರು ಪರಮಪದವನ್ನು ಸೇರುವರು.

ಧಾತ್ರೀತುಲಸ್ಯೋರ್ಮಾಹಾತ್ಮ್ಯಮಪಿ ದೇವಶ್ಚತುರ್ಮುಖಃ ।
ನ ಸಮರ್ಥೋ ಭವೇದ್ವಕ್ತುಂ ಯಥಾ ದೇವಸ್ಯ ಶಾರ್ಙ್ಗಿಣಃ ॥
-ಪದ್ಮಪುರಾಣ (೬/೧೦೭/೨೮); ಸ್ಕಂದಪುರಾಣ (೨/೪/೨೩/೨೨)

ಧಾತ್ರೀ ಹಾಗೂ ತುಲಸಿಯರ ಮಾಹಾತ್ಮ್ಯವನ್ನು ವರ್ಣಿಸಲು ಚತುರ್ಮುಖ ಬ್ರಹ್ಮದೇವರು ಸಹ ಸಮರ್ಥರಲ್ಲ; ವಿಷ್ಣುವಿನ ಮಾಹಾತ್ಮ್ಯವನ್ನು ವರ್ಣಿಸಲು ಹೇಗೋ ಹಾಗೆ.

---

೩.೨. ಧಾತ್ರೀತುಲಸ್ಯುದ್ಭವಕಾರಣಂ ಚ ಶೃಣೋತಿ ಯಃ ಶ್ರಾವಯತೇ ಚ ಭಕ್ತ್ಯಾ ।
ವಿಧೂತಪಾಪ್ಮಾ ಸಹ ಪೂರ್ವಜೈಃ ಸ ಸ್ವರ್ಗಂ ವ್ರಜತ್ಯಗ್ರ್ಯವಿಮಾನಸಂಸ್ಥಃ ॥
-ಪದ್ಮಪುರಾಣ (೬/೧೦೭/೨೬)

**ತುಲಸ್ಯಾ ಮಹಿಮಾಂ ಯಸ್ತು ಶೃಣುಯಾನ್ನಿತ್ಯಮಾವೃತಃ।**
**ಸರ್ವಪಾಪವಿಮುಕ್ತಾತ್ಮಾ ಬ್ರಹ್ಮಲೋಕಂ ಸ ಗಚ್ಛತಿ ॥**

– ಸ್ಕಂದಪುರಾಣ (೨/೪/೮/೧೮)

ತುಲಸಿಯ ಮಹಿಮೆಯನ್ನು ಯಾವನು ಶ್ರದ್ಧೆಯಿಂದ ಪ್ರತಿನಿತ್ಯ ಆಲಿಸುವನೋ ಅವನು ಸರ್ವಪಾಪಗಳಿಂದ ಮುಕ್ತಸ್ವರೂಪನಾಗಿ, ಬ್ರಹ್ಮಲೋಕಕ್ಕೆ ತೆರಳುವನು.

**ಶೃಣು ನಾರದ ವಕ್ಷ್ಯಾಮಿ ಮಾಹಾತ್ಮ್ಯಂ ತುಲಸೀಭವಮ್ ।**
**ಯಚ್ಛ್ರುತ್ವಾ ಮುಚ್ಯತೇ ಪಾಪಾದಾಜನ್ಮಮರಣಾಂತಿಕಾತ್ ॥**

– ಪದ್ಮಪುರಾಣ (೬/೨೪/೧)

ನಾರದರೇ ತುಲಸಿಗೆ ಸಂಬಂಧಿಸಿದ ಮಾಹಾತ್ಮ್ಯವನ್ನು ತಿಳಿಸುವೆನು. ಅದನ್ನು ಕೇಳಿ ಹುಟ್ಟಿನಿಂದ ಸಾಯುವವರೆಗಿನ ಸಕಲ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದುವನು.

**ಇತಿ ವ್ಯಾಜೇನ ಭೋ ಭೂಪ ತುಲಸ್ಯುತ್ಪತ್ತಿಕಾರಣಮ್ ।**
**ಯೇ ಶೃಣ್ವಂತಿ ನರಶ್ರೇಷ್ಠಾ ನ ತೇಷಾಂ ಪಾತಕಂ ಕ್ವಚಿತ್ ॥**

– ಪದ್ಮಪುರಾಣ (೬/೧೬/೧೫೨)

ಎಲೈ ರಾಜನೇ ! ನೆಪದಿಂದಾದರೂ ತುಲಸಿಯ ಉತ್ಪತ್ತಿಯ ಕಾರಣವನ್ನು ಯಾವ ಶ್ರೇಷ್ಠ ಮನುಜರು ಕೇಳುವರೋ ಅವರಿಗೆ ಯಾವ ಪಾತಕವೂ ಎಲ್ಲೂ ಇರದು.

**ತುಲಸೀಮಾಹಾತ್ಮ್ಯಮಿದಂ ಪವಿತ್ರಂ ಪಾಪನಾಶನಮ್ ।**
**ಶ್ರುತ್ವಾ ತು ಲಭತೇ ಮೋಕ್ಷಮುಕ್ತ್ವಾ ಚೈವ ನ ಸಂಶಯಃ ॥**

– ಪದ್ಮಪುರಾಣ (೬/೧೬/೧೫೩)

ಪವಿತ್ರವಾದ ತುಲಸೀ ಮಹಾತ್ಮ್ಯವು ಪವಿತ್ರವೂ ಪಾಪನಾಶಕವೂ ಆದುದು. ಇದನ್ನು ಕೇಳಿ ಹಾಗೂ ಹೇಳಿ ಮುಕ್ತಿಯನ್ನೇ ಪಡೆಯುವನು; ಸಂಶಯವಿಲ್ಲ.

**ಉಪದೇಶಂ ದದೇದಸ್ಯಾಃ ಸ್ವಯಮಾಚರತೇ ಪುನಃ ।**
**ಸಂಯಾತಿ ಪರಮಂ ಸ್ಥಾನಂ ಮಾಧವಸ್ಯ ನಿಕೇತನಮ್ ॥**

–ಪದ್ಮಪುರಾಣ, ಸೃಷ್ಟಿಖಂಡ (೫/೫೮/೧೩೨)

ತುಲಸಿಯ ಮಹಿಮೆಯ ಉಪದೇಶವನ್ನು ಮಾಡುವವನು ಸ್ವತಃ ತಿಳಿಯುವವನು ಸರ್ವೋತ್ಕೃಷ್ಟಸ್ಥಾನವಾದ ಶ್ರೀಹರಿಯ ಮಂದಿರಕ್ಕೆ ತೆರಳುವನು.

**ವೈಶಾಖೇಽಕ್ಷತಧಾರಾಭಿರದ್ಭಿರ್ಯಸ್ತುಲಸೀಂ ಜನಃ ।**
**ಸೇಚಯೇತ್ ಸೋಽಯಮೇವಾಸ್ಯ ಫಲಂ ಪ್ರಾಪ್ನೋತಿ ನಿತ್ಯಶಃ ॥**

– ಪದ್ಮಪುರಾಣ, ಕ್ರಿಯಾಯೋಗಸಾರ

ವೈಶಾಖಮಾಸದಲ್ಲಿ ಅಕ್ಷತೆ ಧಾರೆಗಳಿಂದ ಕೂಡಿದ ನೀರಿನಿಂದ ತುಲಸಿಗೆ ನೀರೆರೆಯುವ ಮನುಷ್ಯರು ವಿಶೇಷ ಪುಣ್ಯವನ್ನು ಪಡೆದುಕೊಳ್ಳುವರು.

**ಕದಾಚಿದ್ದುಲಸೀಂ ದುಗ್ಧೈಃ ಸೇಚಯೇತ್ ಯೋ ನರೋತ್ತಮಃ ।**
**ತಸ್ಯ ವೇಶ್ಮನಿ ವಿಪ್ರರ್ಷೇ ! ಲಕ್ಷ್ಮೀರ್ಭವತಿ ನಿಶ್ಚಲಾ ॥**

–ಪದ್ಮಪುರಾಣ, ಕ್ರಿಯಾಯೋಗಸಾರ

ಒಮ್ಮೆಯಾದರೂ ನೀರೆರೆಯುವ ಶ್ರೇಷ್ಠ ಮನುಷ್ಯನ ಮನೆಯಲ್ಲಿ ಸ್ಥಿರವಾದ ಸಂಪತ್ತು ನೆಲೆಸುವುದು.

**ಗೋಮಯೈಸ್ತು ತುಲಸೀಮೂಲೇ ಯಃ ಕುರ್ಯಾದನುಲೇಪನಮ್ ॥**
**ಸಮ್ಮಾರ್ಜನಂ ಚ ಕುರುತೇ ತಸ್ಯ ಪುಣ್ಯಫಲಂ ಶೃಣು ॥**

– ಪದ್ಮಪುರಾಣ, ಕ್ರಿಯಾಯೋಗಸಾರ

ತುಲಸಿಯ ಬುಡದಲ್ಲಿ ಯಾವನು ಗೋಮಯದಿಂದ ಸಾರಿಸುವನೋ ಅವನಿಗೆ ಬರುವ ಪುಣ್ಯದ ಫಲವನ್ನು ತಿಳಿಸುವೆನು, ಕೇಳು !

**ರಜಾಂಸಿ ತಸ್ಯ ಯಾವಂತಿ ದೂರೀಭೂತಾನಿ ಜೈಮಿನಿ ।**
**ತಾವತ್ಕಲ್ಪಸಹಸ್ರಾಣಿ ಮೋದತೇ ಬ್ರಹ್ಮಣಾ ಸಹ ॥**

– ಪದ್ಮಪುರಾಣ, ಕ್ರಿಯಾಯೋಗಸಾರ

ಅಂತಹವನು ತುಲಸಿಯ ಸನಿಹದ ಎಷ್ಟು ಧೂಳಿನ ಕಣಗಳನ್ನು ದೂರಮಾಡುವನೋ ಅಷ್ಟು ಸಾವಿರ ಕಲ್ಪಗಳ ಕಾಲ ಬ್ರಹ್ಮದೇವರೊಂದಿಗೆ ಸುಖವಾಗಿ ನೆಲೆಸುವನು.

**ತುಲಸೀಸ್ಥಾನಸಂಕಲ್ಪಮಾತ್ರಾದೇವ ಚ ಮಾನವಃ ।**
**ಜನ್ಮತ್ರಯಾರ್ಜಿತೈಃ ಪಾಪೈಸ್ತತ್‌ಕ್ಷಣಾದೇವ ಮುಚ್ಯತೇ ॥** – ಪದ್ಮಪುರಾಣ

ತುಲಸಿಯನ್ನು ರಕ್ಷಿಸುವ ಸಂಕಲ್ಪಮಾತ್ರದಿಂದಲೇ ಮಾನವನು ಹಿಂದಿನ ಮೂರು ಜನ್ಮಗಳಲ್ಲಿ ಗಳಿಸಿದ ಪಾಪಗಳಿಂದ ತಕ್ಷಣದಲ್ಲೇ ಬಿಡುಗಡೆಹೊಂದುವನು.

★★★

# ತುಳಸ್ಯಾಹರಣಮಂತ್ರ

ತುಲಸಿಯು ಕೇವಲ ಸಸ್ಯವಾಗಿರದೆ, ಸಾಕ್ಷಾತ್ ಮಹಾಲಕ್ಷ್ಮಿಯನ್ನೇ ಅಭಿಮಾನಿದೇವತೆಯನ್ನಾಗಿ ಹೊಂದಿರುವುದು. ಪ್ರತಿಯೊಂದು ಜಡದ ಹಿಂದೆ ಅದಕ್ಕಭಿಮಾನಿಯಾದ ದೇವತೆ ಇದ್ದೇ ಇರುವುದು. ವಾರಸುದಾರರಿರುವ ವಸ್ತುವನ್ನು ಅವರ ಅನುಮತಿಯಿಂದ ಪಡೆದು ಉಪಯೋಗಿಸುವುದು ಪ್ರತಿಯೊಬ್ಬರಿಗೂ ನ್ಯಾಯಪ್ರಾಪ್ತವಾದ ಮಾರ್ಗ. ತುಲಸಿಗೆ ಹೀಗೆ ಮಹಾಲಕ್ಷ್ಮಿಯು ಅಭಿಮಾನಿ ದೇವತೆಯಾಗಿರುವುದರಿಂದ ಅವರನ್ನು ಮೊದಲಿಗೆ ಪ್ರಾರ್ಥಿಸಿ ತುಲಸಿಯನ್ನು ಬಿಡಿಸಲು ತೊಡಗಬೇಕು. ಮೊದಲಿಗೆ ತುಲಸಿಯ ಬಳಿಗೆ ಗಮನ, ಬಳಿಕ ದರ್ಶನ, ಸ್ಪರ್ಶನ, ಮಂತ್ರದಿಂದ ಪ್ರಾರ್ಥನ, ಆ ಬಳಿಕ ಚಯನ ಎಂಬುದು ಶಾಸ್ತ್ರದ ವಿಧಿ. ಇದನ್ನು ಗಮನಿಸದೆ, ನೇರವಾಗಿ ತುಲಸಿಯನ್ನು ಬಿಡಿಸುವುದು ಹಿಂಸಾರೂಪದ ಮಹಾಪಾಪವೆನ್ನಿಸಿ ಸಾಧನೆಗೆ ಅಡ್ಡಿಯಾಗುವುದು. ಇಲ್ಲಿ ದರ್ಶನ ಮೊದಲಾದವುಗಳಿಗೆ ವಿಹಿತವಾದ ಮಂತ್ರಗಳನ್ನು ಕೊಡಲಾಗಿದೆ.

★★★

### ದರ್ಶನಮಂತ್ರ

ದೇವಿ ವಿಷ್ಣುಪ್ರಿಯೇ ಮಾತಸ್ತುಲಸಿ ಪ್ರಿಯದರ್ಶಿನೇ ।
ಹರಿದರ್ಶನದೀಪಾರ್ಚಿಃ ಪ್ರಸೀದ ದ್ವಿಜವಲ್ಲಭೇ ॥

ನರ ಏತೇನ ಮಂತ್ರೇಣ ಪ್ರಫುಲ್ಲಾಕ್ಷಃ ಪ್ರಗೇ ಶುಭಾಮ್ ।
ಪ್ರಪಶ್ಯೇನ್ನ ಯಮಂ ಪಶ್ಯೇತ್ ಪ್ರಣಮೇತ್ ತದನಂತರಮ್ ॥

– ಬೃಹದ್ಧರ್ಮಪುರಾಣ (೧/೮/೩೬-೩೭)

ದೇವಿ, ಮಹಾವಿಷ್ಣುವಿಗೆ ಪ್ರಿಯಳೆ, ಅಮ್ಮಾ ಪ್ರಿಯದರ್ಶನಳೇ, ಶ್ರೀಹರಿಯದರ್ಶನಕ್ಕೆ ದೀಪದಂತೆ ಬೆಳಕಾಗುವಳೇ, ದ್ವಿಜರಿಗೆ ಪ್ರಿಯಳೇ, ಪ್ರಸನ್ನಳಾಗು. ಮಾನವನು ಈ ಮಂತ್ರದಿಂದ ಪ್ರಾತಃಕಾಲದಲ್ಲಿ ಪರಮಮಂಗಳೆಯಾದ ತುಲಸಿಯನ್ನು ದರ್ಶನ ಮಾಡಿ ಆ ಬಳಿಕ ನಮಸ್ಕರಿಸಬೇಕು. ಅದರಿಂದ ಯಮಲೋಕಕ್ಕೆ ಹೋಗುವ ಅಪಾಯ ತಪ್ಪುವುದು.

### ಪ್ರದಕ್ಷಿಣಮಂತ್ರ

ವಿಷ್ಣುಪ್ರೀತಿಕರೇ ಮಾತರ್ನಮಸ್ತೇ ತುಲಸೀಶ್ವರಿ ।
ಪವಿತ್ರೀಕುರು ಮೇಽಂಗಾನಿ ವಿಶ್ವಗ್ಘರ್ಷಸ್ಯ ಕಾರಿಣಿ ॥

ಮಂತ್ರೇಣಾನೇನ ತುಲಸೀಂ ವಂದೇತಾಷ್ಟಾಂಗಲೋಚನಃ ।
ನರಃ ಪ್ರದಕ್ಷಿಣೀಕೃತ್ಯ ನ ಛಾಯಾಂ ಲಂಘಯೇದಪಿ ॥

– ಬೃಹದ್ಧರ್ಮಪುರಾಣ (೧/೮/೩೮-೩೯)

ಮಹಾವಿಷ್ಣುವಿಗೆ ಪ್ರೀತಿಕರಳಾದವಳೇ, ಅಪಾರ ಸಾಮರ್ಥ್ಯವನ್ನು ಹೊಂದಿದವಳೇ, ಅಮ್ಮಾ ತುಲಸಿ ನಿನಗೆ ನಮಸ್ಕಾರಗಳು. ನನ್ನ ಅಂಗಗಳನ್ನು ಪಾವನವನ್ನಾಗಿಸು. ಈ ಮಂತ್ರದಿಂದ ತುಲಸಿಯನ್ನು ಸಾಷ್ಟಾಂಗ ನಮಸ್ಕರಿಸಬೇಕು. ತುಲಸಿಯ ನೆರಳನ್ನು ದಾಟದಂತೆ ಪ್ರದಕ್ಷಿಣೆ ಹಾಕಬೇಕು.

### ಸ್ಪರ್ಶನಮಂತ್ರ

ವೈಕುಂಠೇಶ್ವರಪಾದಾಬ್ಜವಾಸಿನಿ ಪ್ರಿಯದರ್ಶನೇ ।
ಸ್ಪೃಶಾಮಿ ತ್ವಾಂ ಮಹಾಪಾಪಸಂಚಯಾನ್ ಮೇ ಪ್ರಣಾಶಯ ॥
ಮಂತ್ರೇಣಾನೇನ ತುಲಸೀಂ ಸ್ಪೃಶೇನ್ಮರ್ತ್ಯೋ ವಿಮುಕ್ತಿಭಾಕ್ ।

– ಬೃಹದ್ಧರ್ಮಪುರಾಣ (೧/೮/೪೦-೪೧)

ವೈಕುಂಠನಾದ ಸರ್ವಸಮರ್ಥನಾದ ವಿಷ್ಣುವಿನ ಪಾದಕಮಲಗಳಲ್ಲಿ ನೆಲೆಸಿರುವವಳೇ, ಪ್ರಿಯದರ್ಶನಳೇ, ನಿನ್ನನ್ನು ನಾನು ಸ್ಪರ್ಶಿಸುತ್ತಿರುವೆ. ನನ್ನಲ್ಲಿ ನೆಲೆಸಿರುವ ಮಹಾಪಾತಕಗಳ ರಾಶಿಯನ್ನು ಸಂಪೂರ್ಣವಾಗಿ ನಾಶಪಡಿಸು.

### ಸಂಮಾರ್ಜನಮಂತ್ರ

ಮಾತಸ್ತುಲಸಿ ಕಲ್ಯಾಣಿ ಸ್ಥಲಂ ತೇ ಸುಮನೋಹರಮ್ ।
ಕ್ರೀಡಂತ್ಯಾಗತ್ಯ ವಿಬುಧಾ ಮಾರ್ಜಯೇ ತತ್ ಪ್ರಸೀದ ಮೇ ॥

ಮಂತ್ರೇಣಾನೇನ ತುಲಸೀಸ್ಥಾನಂ ಹಸ್ತಚತುಷ್ಟಯಮ್ ।
ಸಮ್ಮಾರ್ಜಯೇಚ್ಚತುರ್ದಿಕ್ಷು ಸಗೋಮಯಜಲೈರ್ಮುದಾ (ಮೃದಾ) ॥

– ಬೃಹದ್ಧರ್ಮಪುರಾಣ (೧/೮/೪೨-೪೩)

ಅಮ್ಮಾ, ಮಂಗಳಕರೆಯಾದ ತುಲಸಿ ! ನೀನು ನೆಲೆಸಿರುವ ನೆಲ ಅತ್ಯಂತ ಮನೋಹರವಾದುದು. ಇದರ ಬಳಿಗೆ ಬಂದು ದೇವತೆಗಳು ಸಹ ವಿಹರಿಸಿರುವರು. ಅದನ್ನು ನಾನು ನಿರ್ಮಲಗೊಳಿಸುವೆನು. ನನಗೆ ನೀನು ಪ್ರಸನ್ನಳಾಗು.

ಈ ಮಂತ್ರದಿಂದ ತುಲಸಿಯ ಸುತ್ತಲಿನ ನಾಲ್ಕು ಮೊಳದಷ್ಟುಜಾಗವನ್ನು ನಾಲ್ಕು ದಿಕ್ಕುಗಳಲ್ಲೂ ಸಹ ಗೋಮಯ ಹಾಕಿ ನಲಿಯುತ್ತಾ ಸಾರಿಸಬೇಕು.

### ಬಿಡಿಸುವ ಮಂತ್ರ

ಓಂ ತುಲಸ್ಯೈ ನಮ ಇತಿ ಮಂತ್ರೇಣ ಶಕ್ತಿಸಂಭವಾಮ್ ।
ಷಡಕ್ಷರೇಣ ಸಂಪೂಜ್ಯ ಜಪೇದಷ್ಟೋತ್ತರಂ ಶತಮ್ ॥

– ಬೃಹದ್ಧರ್ಮಪುರಾಣ (೧/೮/೪೪)

ಓಂ ತುಲಸ್ಯೈನಮಃ ಎಂಬ ಷಡಕ್ಷರ ಮಂತ್ರದಿಂದ ವಿಷ್ಣುವಿನ ಅನುಗ್ರಹದಿಂದ ಪ್ರಾದುರ್ಭವಿಸಿರುವ ತುಲಸಿಯನ್ನು ಭಕ್ತಿಯಿಂದ ಪೂಜಿಸಿ ಆ ಮಂತ್ರವನ್ನು ನೂರೆಂಟು ಬಾರಿ ಜಪಿಸಬೇಕು.

**ಮಾತಸ್ತುಲಸಿ ಕಲ್ಯಾಣಿ ಗೋವಿಂದಚರಣಪ್ರಿಯೇ ।**
**ಕೇಶವಾರ್ಥೇ ಚಿನೋಮಿ ತ್ವಾಂ ಪ್ರಸೀದ ಶುಭದರ್ಶನೇ ॥**

**ಮಂತ್ರೇಣಾನೇನ ತುಲಸೀಪತ್ರಾಣಿ ಪ್ರಚಯೇತ್ ಕೃತೀ ।**
**ಏತೈಃ ಪರ್ಯುಷಿತೈಶ್ಚಾಪಿ ಪೂಜಾ ಕಾರ್ಯಾ ಹರೇಃ ಸಖಿ ॥**

– ಬೃಹದ್ಧರ್ಮಪುರಾಣ(೧/೮/೪೫,೪೬)

ಅಮ್ಮಾ ! ಕಲ್ಯಾಣಿ ! ತುಲಸಿ ! ನೀನು ಗೋವಿಂದನ ಚರಣದಲ್ಲಿ ಭಕ್ತಿಯುಳ್ಳವಳು. ನೋಟದಿಂದಲೇ ಮಂಗಳವನ್ನು ಕರುಣಿಸುವವಳು. ಶ್ರೀಹರಿಯ ಪೂಜೆಗೆಂದು ನಿನ್ನನ್ನು ನಾನು ಬಿಡಿಸುತ್ತಿರುವೆನು, ಪ್ರಸನ್ನಳಾಗು. ಈ ಮಂತ್ರದಿಂದ ಭಕ್ತಿಯಿಂದ ತುಲಸಿಯ ದಳಗಳನ್ನು ಬಿಡಿಸಿ ಸಂಗ್ರಹಿಸಿಕೊಳ್ಳಬೇಕು. ಹೀಗೆ ಬಿಡಿಸಿದ ತುಲಸಿ ದಳಗಳು ಹಳೆಯದಾಗಿದ್ದರು ಸರಿ, ಅವುಗಳಿಂದ ಶ್ರೀಹರಿಯನ್ನು ಪೂಜಿಸಬೇಕು.

**ಮಾತಸ್ತುಲಸಿ ಗೋವಿಂದಹೃದಯಾನಂದಕಾರಿಣಿ ।**
**ನಾರಾಯಣಸ್ಯ ಪೂಜಾರ್ಥಂ ಚಿನೋಮಿ ತ್ವಾಂ ನಮೋऽಸ್ತು ತೇ ॥**

– ಪದ್ಮಪುರಾಣ

ಅಮ್ಮಾ ! ತುಲಸಿ! ನೀನು ಗೋವಿಂದನಾದ ಶ್ರೀಹರಿಯ ಮನಸ್ಸಿಗೆ ಆನಂದವನ್ನುಂಟುಮಾಡುವವಳು. ನಿನ್ನನ್ನು ನಾನು ಶ್ರೀಹರಿಯ ಪೂಜೆಗೆಂದು ಬಿಡಿಸುತ್ತಿರುವೆನು. ನಿನಗೆ ನಮಸ್ಕಾರ.

**ಕುಸುಮೈಃ ಪಾರಿಜಾತಾದ್ಯೈಃ ಸುಗಂಧೈರಪಿ ಕೇಶವಃ ।**
**ತ್ವಯಾ ವಿನಾ ನೈವ ತೃಪ್ತಿಂ ಚಿನೋಮಿ ತ್ವಾಮತಃ ಶುಭೇ ॥** – ಪದ್ಮಪುರಾಣ

ನೀನು ಇಲ್ಲವಾದಲ್ಲಿ ಪರಿಮಳಭರಿತವಾದ ಪಾರಿಜಾತ ಮೊದಲಾದ ಪುಷ್ಪಗಳಿಂದಲೂ ಸಹ ಶ್ರೀಹರಿಯು ತೃಪ್ತನಾಗಲಾರ. ಆದ್ದರಿಂದ ಅಮ್ಮಾ! ಮಂಗಳೇ! ನಾನು ನಿನ್ನನ್ನು ಬಿಡಿಸುತ್ತಿರುವೆನು.

**ತ್ವಯಾ ವಿನಾ ಮಹಾಭಾಗೇ ಸಮಸ್ತಂ ಕರ್ಮ ನಿಷ್ಫಲಮ್ ।**
**ಅತಸ್ತುಲಸಿ ದೇವಿ ತ್ವಾಂ ಚಿನೋಮಿ ವರದಾ ಭವ ॥** – ಪದ್ಮಪುರಾಣ

ಮಹಾಭಾಗಳೇ! ನೀನಿಲ್ಲವಾದಲ್ಲಿ ಸಕಲ ಕರ್ಮಗಳು ನಿಷ್ಫಲವೆನ್ನಿಸುವವು. ಆದ್ದರಿಂದ ಅಮ್ಮಾ! ದೇವಿ! ನಾನು ನಿನ್ನನ್ನು ಬಿಡಿಸುತ್ತಿರುವೆನು. ನೀನು ನನಗೆ ವರ ನೀಡುವವಳಾಗು.

**ಚಯನೋದ್ಭವದುಃಖಂ ಯದ್ದೇವಿ ತೇ ಹೃದಿ ವರ್ತತೇ ।**
**ತತ್ ಕ್ಷಮಸ್ವ ಜಗನ್ಮಾತಸ್ತುಲಸಿ ತ್ವಾಂ ನಮಾಮ್ಯಹಮ್ ॥** – ಪದ್ಮಪುರಾಣ

ಹಾಗೆ ಬಿಡಿಸುವುದರಿಂದ ನಿನ್ನ ಮನಸ್ಸಿಗೆ ಉಂಟಾಗುವ ನೋವನ್ನು ದಯವಿಟ್ಟು ಕ್ಷಮಿಸು. ಅಮ್ಮಾ! ನಿನು ಜಗನ್ಮಾತೆ, ಶ್ರೀಹರಿಗೆ ಪ್ರಿಯಳಾದವಳು, ನಿನ್ನನ್ನು ನಾನು ನಮಸ್ಕರಿಸುವೆನು.

**ಕೃತಾಂಜಲಿರಿಮಾನ್ ಮಂತ್ರಾನ್ ಪಠಿತ್ವಾ ವೈಷ್ಣವೋ ಜನಃ ।**
**ಕರತಾಲತ್ರಯಂ ದತ್ವಾ ಚಿನುಯಾತ್ ತುಲಸೀದಲಮ್ ॥** – ಪದ್ಮಪುರಾಣ

ವೈಷ್ಣವನಾದವನು ಕೈಜೋಡಿಸಿಕೊಂಡು ಈ ಮಂತ್ರಗಳನ್ನು ಪಠಿಸುತ್ತಾ ಮೂರು ಬಾರಿ ಚಪ್ಪಾಳೆಯನ್ನು ಬಾರಿಸಿ ತುಲಸಿ ದಳಗಳನ್ನು ಬಿಡಿಸಬೇಕು.

**ಶನೈಃ ಶನೈಸ್ತಥಾಽಽಕಾರ್ಯೈಶ್ಚೀಯತೇ ತುಲಸೀದಲಮ್ ।**
**ಯಥಾ ನ ಕಂಪತೇ ಶಾಖಾ ತುಲಸ್ಯಾ ದ್ವಿಜಸತ್ತಮ ॥** – ಪದ್ಮಪುರಾಣ

ತುಲಸಿಯ ರೆಂಬೆಗಳು ಅಲುಗಾಡದಂತೆ ಮೆಲ್ಲಮೆಲ್ಲನೆ ತುಲಸಿಯ ದಳಗಳನ್ನು ಬಿಡಿಸಬೇಕು.

**ಪತ್ರಾಣಾಂ ಚಯನೇ ವಿಪ್ರ ಭಗ್ನಶಾಖಾ ಯಥಾ ಭವೇತ್ ।**
**ತಥಾ ಹೃದಿ ವ್ಯಥಾ ವಿಷ್ಣೋರ್ದೀಯತೇ ತುಲಸೀಪತೇಃ ॥**

– ಪದ್ಮಪುರಾಣ, ಕ್ರಿಯಾಯೋಗಸಾರ

ತುಲಸಿಯ ದಳಗಳನ್ನು ಬಿಡಿಸುವಾಗ ತುಲಸಿಯ ಪತಿಯಾದ ಶ್ರೀಹರಿಯ ಮನಸ್ಸಿಗೆ ನೋವಾಗುವುದರಿಂದ ಆ ರೀತಿ ಆಗದಂತೆ ತುಲಸಿಯ ರೆಂಬೆಗಳು ಮುರಿಯದಂತೆ ತುಲಸಿಯ ದಳಗಳನ್ನು ಬಿಡಿಸಬೇಕು.

**ತುಲಸ್ಯಮೃತಜನ್ಮಾಽಸಿ ಸದಾ ತ್ವಂ ಕೇಶವಪ್ರಿಯೇ ।**
**ಕೇಶವಾರ್ಥಂ ಚಿನೋಮಿ ತ್ವಾಂ ವರದಾ ಭವ ಶೋಭನೇ ॥** – ಪದ್ಮಪುರಾಣ

ಅಮ್ಮಾ ! ತುಲಸಿ ! ನೀನು ಕೇಶವನಿಗೆ ಪ್ರಿಯಳಾದವಳು; ಅಮೃತದಿಂದ ಪ್ರಾದುರ್ಭವಿಸಿದವಳು. ಶ್ರೀಹರಿಯ ಪೂಜೆಗೆಂದು ನಿನ್ನನ್ನು ನಾನು ಬಿಡಿಸಿಕೊಳ್ಳುವೆನು. ಮಂಗಳಕರೆಯಾದ ನೀನು ನನಗೆ ವರ ನೀಡುವವಳಾಗು.

**ತ್ವದಂಗಸಂಭವೈರ್ನಿತ್ಯಂ ಪೂಜಯಾಮಿ ಯಥಾ ಹರಿಮ್ ।**
**ತಥಾ ಕುರು ಪವಿತ್ರಾಂಗಿ ಕಲೌ ಮಲವಿನಾಶಿನಿ ॥** – ಪದ್ಮಪುರಾಣ

ನಾನು, ನಿನ್ನ ಅಂಗಗಳಿಂದ ಉದಿಸಿರುವ ದಳಗಳಿಂದ ನಾನು ಶ್ರೀಹರಿಯನ್ನು ಪೂಜಿಸುತ್ತಾ ಹೋಗುವೆನು. ಪವಿತ್ರಾಂಗಿಯೂ, ಪಾಪಪರಿಹಾರಕಳೂ ಆದ ನೀನು ಅದು ಸರಿಯಾಗಿ ನಡೆಯುವಂತೆ ಅನುಗ್ರಹಿಸು.

**ಮಂತ್ರೇಣಾನೇನ ಯಃ ಕುರ್ಯಾದ್ವಿಚಿತ್ಯ ತುಲಸೀದಲಮ್ ।**
**ಪೂಜನಂ ವಾಸುದೇವಸ್ಯ ಲಕ್ಷಕೋಟಿಗುಣಂ ಭವೇತ್ ॥**

– ಪದ್ಮಪುರಾಣ (೫/೫೬/೧೧-೧೪) ತಥಾ ಸ್ಕಾಂದಪುರಾಣ

ಈ ಮಂತ್ರದಿಂದ ತುಲಸಿ ದಳಗಳನ್ನು ಬಿಡಿಸಿ ಶ್ರೀವಾಸುದೇವನನ್ನು ಪೂಜಿಸುವವರಿಗೆ ಲಕ್ಷ ಕೋಟಿಗಳಷ್ಟು ಪುಣ್ಯವು ಲಭಿಸುವುದು.

**ಶಾಲಗ್ರಾಮಶಿಲಾರ್ಥಂ ತು ಪ್ರತ್ಯಹಂ ತುಲಸೀಂ ಕ್ಷಿತೌ ।**
**ತುಲಸೀಂ ಯೇ ವಿಚಿನ್ವಂತಿ ಧನ್ಯಾಸ್ತೇ ಕರಪಲ್ಲವಾಃ ॥**

– ಪದ್ಮಪುರಾಣ (೫/೫೬/೮), ಸ್ಕಂದಪುರಾಣ

ಶಾಲಿಗ್ರಾಮ ಪೂಜೆಗೆಂದು ಪ್ರತಿನಿತ್ಯ ತುಲಸಿಯನ್ನು ತುಲಸಿವನದಲ್ಲಿ ಯಾರು ದಳಗಳನ್ನು ಬಿಡಿಸುವರೋ ಅಂತಹವರ ಕೈಗಳು ಧನ್ಯವೇ ಸರಿ.

**ಮೋಕ್ಷೈಕಹೇತೋ ಧರಣೀಧರಸ್ಯ ವಿಷ್ಣೋಃ ಸಮಸ್ತಸ್ಯ ಗುರೋಃ ಪ್ರಿಯೇತಿ ।**
**ಆರಾಧನಾರ್ಥಂ ವರಮಂಜರೀಕಂ ಲುನಾಮಿ ಪತ್ರಂ ತುಲಸಿ ಕ್ಷಮಸ್ವ ॥**

– ಪದ್ಮಪುರಾಣ

ಮೋಕ್ಷಕ್ಕೆ ಮುಖ್ಯಕಾರಣನಾದ ಸಕಲರಿಗೂ ಗುರುವು ಆದ ಮಹಾವಿಷ್ಣುವಿಗೆ ಪ್ರಿಯಳಾದ ಅಮ್ಮಾ! ತುಲಸಿಯೇ ಶ್ರೀಹರಿಯ ಆರಾಧನೆಗಾಗಿ ನಿನ್ನ ಪತ್ರವನ್ನು ಬಿಡಿಸುವೆನು ದಯವಿಟ್ಟು ಕ್ಷಮಿಸು.

**ಇತ್ಯುಕ್ತ್ವಾ ತುಲಸೀಂ ನತ್ವಾ ಚಿತ್ವಾ ದಕ್ಷಿಣಪಾಣಿನಾ ।**
**ಪತ್ರಾಣ್ಯೇಕೈಕಶೋ ನ್ಯಸ್ಯೇತ್ ಸತ್ಪಾತ್ರೇ ಮಂಜರೀರಪಿ ॥** – ಗರುಡಪುರಾಣ

ಹೀಗೆ ಹೇಳಿ ತುಲಸಿಯನ್ನು ನಮಸ್ಕರಿಸಿ ಬಲಗೈಯಿಂದ ತುಲಸಿಯನ್ನು ಬಿಡಿಸಬೇಕು. ಒಳ್ಳೆಯ ಪಾತ್ರೆಯಲ್ಲಿ ತುಲಸಿಯ ದಳಗಳನ್ನು, ಮಂಜರಿಗಳನ್ನು ಒಂದೊಂದಾಗಿ ಬಿಡಿಸಿ ಹಾಕಿಕೊಳ್ಳಬೇಕು.

**ಪ್ರಭಾವಂ ತವ ದೇವೇಶಿ ಗಾಯಂತಿ ಸುರಸತ್ತಮಾಃ ।**
**ಮುನಯಃ ಸಿದ್ಧಗಂಧರ್ವಾಃ ಪಾತಾಲೇ ನಾಗರಾಟ್ ಸ್ವಯಮ್ ॥**

– ಪದ್ಮಪುರಾಣ

ಅಮ್ಮಾ! ದೇವತೆಗಳ ಒಡತಿಯೇ! ಶ್ರೇಷ್ಠದೇವತೆಗಳು ಸಹ ನಿನ್ನ ಪ್ರಭಾವವನ್ನು ಹಾಡಿ ಹೊಗಳುವರು. ಮುನಿಗಳು, ಸಿದ್ಧರು, ಗಂಧರ್ವರು ಪಾತಾಳದಲ್ಲಿ ನಾಗರಾಜನಾದ ಆದಿಶೇಷ ಇವರೆಲ್ಲರೂ ಸಹ ನಿನ್ನನ್ನು ಸ್ತುತಿಸುವರು.

**ನ ತೇ ಪ್ರಭಾವಂ ಜಾನಂತಿ ದೇವತಾಃ ಕೇಶವಾದೃತೇ ।**
**ಗುಣಾನಾಂ ಪರಿಮಾಣಂ ತು ಕಲ್ಪಕೋಟಿಶತೈರಪಿ ॥** - ಪದ್ಮಪುರಾಣ

ಕೇಶವನ ಹೊರತು ಇತರ ದೇವತೆಗಳೂ ಸಹ ನಿನ್ನ ಮಹಿಮೆಯನ್ನು ತಿಳಿಯಲಾರರು. ಗುಣಗಳ ಪರಿಮಾಣವನ್ನು ನೂರಾರು ಕೋಟಿ ಕಲ್ಪಗಳ ಕಾಲ ಎಣಿಸಿದರೂ ಸಹ ಮುಗಿಸಲಾರರು.

**ಕೃಷ್ಣಾನಂದಾತ್ ಸಮುದ್ಭೂತಾ ಕ್ಷೀರೋದಮಥನೋದ್ಯಮೇ ।**
**ಉತ್ತಮಾಂಗೇ ಪುರಾ ಯೇನ ತುಲಸೀ ವಿಷ್ಣುನಾ ಧೃತಾ ॥** - ಪದ್ಮಪುರಾಣ

ಶ್ರೀಕೃಷ್ಣನ ಆನಂದಾಶ್ರುಗಳಿಂದ ನೀನು ಕ್ಷೀರಸಮುದ್ರದ ಮಥನ ಕಾಲದಲ್ಲಿ ಪ್ರಾದುರ್ಭವಿಸಿದವಳು. ಶ್ರೀಹರಿಯು ಪ್ರೀತಿಯಿಂದ ನಿನ್ನನ್ನು ತನ್ನ ತಲೆಯ ಮೇಲೆ ಇರಿಸಿಕೊಂಡಿರುವನು.

**ಪ್ರಾಪ್ಯೈತಾನಿ ತ್ವಯಾ(ತತೋ) ದೇವಿ ವಿಷ್ಣೋರಂಗಾನಿ ಸರ್ವಶಃ ।**
**ಪವಿತ್ರತಾ ತ್ವಯಾ ಪ್ರಾಪ್ತಾ ತುಲಸೀ ತ್ವಾಂ ನಮಾಮ್ಯಹಮ್ ॥** - ಪದ್ಮಪುರಾಣ

ಹೀಗೆ ನೀನು ವಿಷ್ಣುವಿನ ಅಂಗಗಳ ಸ್ಪರ್ಶವನ್ನು ಸರ್ವರೀತಿಯಲ್ಲೂ ಪಡೆದಿರುವದರಿಂದ ಅತ್ಯಂತ ಪಾವಿತ್ರ್ಯವನ್ನು ಹೊಂದಿರುವಿ. ನಿನ್ನನ್ನು ನಾನು ನಮಸ್ಕರಿಸುವೆನು.

**ತ್ವದಂಗಸಂಭವೈಃ ಪತ್ರೈಃ ಪೂಜಯಾಮಿ ಯಥಾ ಹರಿಮ್ ।**
**ತಥಾ ಕುರುಷ್ವ ಮೇಽವಿಘ್ನಂ ಯತೋ ಯಾಮಿ ಪರಾಂ ಗತಿಮ್ ॥**

- ಪದ್ಮಪುರಾಣ (೫/೫೬/೧೪-೧೬)

ಅಮ್ಮಾ! ತುಲಸಿ! ನಿನ್ನ ಅಂಗಗಳಲ್ಲಿ ಹುಟ್ಟಿರುವ ಪತ್ರಗಳಿಂದ ನಾನು ಶ್ರೀಹರಿಯನ್ನು ನಾನು ಪೂಜಿಸುವೆನು. ಅದು ನಿರ್ವಿಘ್ನವಾಗಿ ನಡೆಯುವಂತೆ ಅನುಗ್ರಹಿಸು. ಅದರಿಂದ ನಾನು ಪರಗತಿಯನ್ನು ಪಡೆಯುವೆನು.

**ದ್ವಾದಶ್ಯಾಂ ಜಾಗರೇ ರಾತ್ರೌ ಯಃ ಪಠೇತ್ ತುಲಸೀಸ್ತವಮ್ ।**
**ದ್ವಾತ್ರಿಂಶದಪರಾಧಾಂಶ್ಚ ಕ್ಷಮತೇ ತಸ್ಯ ಕೇಶವಃ ॥** - ಪದ್ಮಪುರಾಣ

ದ್ವಾದಶೀಯಂದು ಹಾಗೂ ಏಕಾದಶೀಯಂದು ಜಾಗರಣೆಯ ಕಾಲದಲ್ಲಿ ಯಾರು ಈ ತುಲಸಿ ಸ್ತವವನ್ನು ಪಠಿಸುವರೋ ಅವರ [೩೪]ದ್ವಾತ್ರಿಂಶದಪರಾಧಗಳನ್ನು ಶ್ರೀಹರಿಯು ಕ್ಷಮಿಸುವನು.

**ಯತ್ಪಾಪಂ ಯೌವನೇ ಬಾಲ್ಯೇ ಕೌಮಾರೇ ವಾರ್ಧಕೇ ಕೃತಮ್ ।**
**ತತ್ಸರ್ವಂ ವಿಲಯಂ ಯಾತಿ ತುಲಸೀಸ್ತವಪಾಠತಃ ॥** – ಪದ್ಮಪುರಾಣ

ಯೌವನದಲ್ಲಿ, ಬಾಲ್ಯದಲ್ಲಿ, ಕೌಮಾರದಲ್ಲಿ, ಮುಪ್ಪಿನಲ್ಲಿ ಮಾಡಲ್ಪಡುವ ಸಕಲ ಪಾಪಗಳೂ ಸಹ ತುಲಸಿ ಸ್ತವದ ಪಠನದಿಂದ ಸಂಪೂರ್ಣ ನಾಶಹೊಂದುವವು.

**ಪ್ರೀತಿಮಾಯಾತಿ ದೇವೇಶಸ್ತುಷ್ಟೋ ಲಕ್ಷ್ಮೀಂ ಪ್ರಯಚ್ಛತಿ ।**
**ಕುರುತೇ ಶತ್ರುನಾಶಂ ಚ ಸುಖಂ ವಿದ್ಯಾಂ ಪ್ರಯಚ್ಛತಿ ॥** – ಪದ್ಮಪುರಾಣ

ದೇವತೆಗಳ ಒಡೆಯನಾದ ಶ್ರೀಹರಿಯು ಇದರಿಂದ ಪ್ರೀತನಾಗುವನು. ಸಂಪತ್ತನ್ನು ನೀಡುವನು, ಶತ್ರುನಾಶವನ್ನೂ ಮಾಡುವನು. ಸುಖವನ್ನೂ ವಿದ್ಯೆಯನ್ನೂ ಕರುಣಿಸುವನು.

**ತುಲಸೀನಾಮಮಾತ್ರೇಣ ದೇವಾ ಯಚ್ಛಂತಿ ವಾಂಛಿತಮ್ ।**
**ಗರ್ಹ್ಯಾಣಾಮಪಿ ದೇವೇಶೋ ಮುಕ್ತಿಂ ಯಚ್ಛತಿ ದೇಹಿನಾಮ್ ॥**

– ಪದ್ಮಪುರಾಣ

ತುಲಸಿ ಎಂಬ ನಾಮದ ಉಚ್ಚಾರಣೆಯಿಂದಲೇ ಸಕಲ ದೇವತೆಗಳು ಇಷ್ಟಾರ್ಥವನ್ನು ಈಡೇರಿಸುವರು. ಪಾಪಿಗಳಾದರಿಗೂ ಸಹ ಅವುಗಳಿಂದ ಬಿಡುಗಡೆಯನ್ನು ದೇವೇಶನಾದ ಶ್ರೀಹರಿಯು ಕರುಣಿಸುವನು.

**ತುಲಸೀಸ್ತವಸಂತುಷ್ಟಃ ಸುಖಂ ವೃದ್ಧಿಂ ದದಾತಿ ಚ ।**
**ಉದ್ಗತಂ ಹೇಲಯಾ ವಿದ್ಧಿ ಪಾಪಂ ಯಮಪಥೇ ಸ್ಥಿತಮ್ ॥** – ಪದ್ಮಪುರಾಣ

ತುಲಸಿ ಸ್ತೋತ್ರದಿಂದ ಸಂತುಷ್ಟನಾಗುವ ಶ್ರೀಹರಿಯು ಸುಖವನ್ನು, ಸಮೃದ್ಧಿಯನ್ನು ನೀಡುವನು. ಕೇವಲ ಹೇಳನದಿಂದ ಸಹ ಇದನ್ನು ಪಠಿಸಿದರೂ ಯಮಲೋಕಕ್ಕೆ ಕಾರಣವಾಗುವ ಪಾಪವು ಬಿಟ್ಟುಹೋಗುವದು.

**ಯಸ್ಮಿನ್ ಗೃಹೇ ಚ ಲಿಖಿತೋ ವಿದ್ಯತೇ ತುಲಸೀಸ್ತವಃ ।**
**ನಾಶುಭಂ ವಿದ್ಯತೇ ತಸ್ಯ ಶುಭಮಾಪ್ನೋತಿ ನಿಶ್ಚಿತಮ್ ॥** – ಪದ್ಮಪುರಾಣ

---

[೩೪] ದೇವಪೂಜೆಯ ಕಾಲದಲ್ಲಿ ಘಟಿಸುವ ದ್ವಾತ್ರಿಂಶದಪರಾಧಗಳ ವಿವರ ವಾರಾಹ ಪುರಾಣದಲ್ಲಿ ಬಂದಿದೆ. ಸುಮಧ್ವವಿಜಯ ಭಾವಪ್ರಕಾಶಿಕೆಯಲ್ಲೂ ಅವುಗಳ ವಿವರ ಬಂದಿದೆ. ನಮ್ಮ ಪ್ರಕಾಶನದ ಕನ್ನಡ ಅನುವಾದ ಸಮೇತವಾದ "ಶ್ರೀಜಯತೀರ್ಥರ ಪದ್ಯಮಾಲಾ" ಕೃತಿಯಲ್ಲಿ ಈ ಬಗ್ಗೆ ಹೆಚ್ಚಿನ ವಿವರಗಳನ್ನು ಕೊಡಲಾಗಿದೆ.

ಯಾರ ಮನೆಯಲ್ಲಿ ಈ ತುಲಸಿ ಸ್ತೋತ್ರದ ಲಿಖಿತ ಪ್ರತಿ ಇರುವುದೋ ಅವರಿಗೆ ಅಮಂಗಳವು ಆಗುವುದೇ ಇಲ್ಲ. ನಿಶ್ಚಿತವಾಗಿಯೂ ಶುಭವೇ ಲಭಿಸುವುದು.

**ಸರ್ವಂ ಚ ಮಂಗಲಂ ತಸ್ಯ ನಾಸ್ತಿ ಕಿಂಚಿದಮಂಗಲಮ್ ।**
**ಸುಭಿಕ್ಷಂ ಸರ್ವದಾ ತಸ್ಯ ಧನಂ ಧಾನ್ಯಂ ಚ ಪುಷ್ಕಲಮ್ ॥** – ಪದ್ಮಪುರಾಣ

ಅವರಿಗೆ ಆಗುವುದೆಲ್ಲ ಬರೀ ಮಂಗಳವೇ. ಅಮಂಗಳವು ಸ್ವಲ್ಪವೂ ಆಗದು. ಅವರಿಗೆ ಸರ್ವದಾ ಸುಭಿಕ್ಷವೇ ಲಭಿಸುವುದು. ಧನ ಮತ್ತು ಧಾನ್ಯಗಳು ಪುಷ್ಕಲವಾಗಿ ದೊರೆಯುವವು.

**ನಿಶ್ಚಲಾ ಕೇಶವೇ ಭಕ್ತಿರ್ನ ವಿಯೋಗಶ್ಚ ವೈಷ್ಣವೈಃ ।**
**ಜೀವತಿ ವ್ಯಾಧಿನಿರ್ಮುಕ್ತೋ ನಾಧರ್ಮೇ ಜಾಯತೇ ಮತಿಃ ॥** – ಪದ್ಮಪುರಾಣ

ಕೇಶವನಲ್ಲಿ ನಿಶ್ಚಲವಾದ ಭಕ್ತಿಯು ಲಭಿಸುವುದು. ವೈಷ್ಣವರೊಂದಿಗೆ ವಿಯೋಗ ಸರ್ವಥಾ ಉಂಟಾಗದು. ರೋಗಗಳ ಪೀಡೆ ಇಲ್ಲದೇ ಬದುಕುವರು. ಅಧರ್ಮದಲ್ಲಿ ಅವನ ಬುದ್ಧಿ ಹೋಗದು.

**ದ್ವಾದಶ್ಯಾಂ ಜಾಗರೇ ರಾತ್ರೌ ಯಃ ಪಠೇತ್ ತುಲಸೀಸ್ತವಮ್ ।**
**ತೀರ್ಥಕೋಟಿಸಹಸ್ರೈಸ್ತು ಯತ್ಫಲಂ ಲಕ್ಷಕೋಟಿಭಿಃ ।**
**ತತ್ಫಲಂ ಸಮವಾಪ್ನೋತಿ ಪಠಿತ್ವಾ ತುಲಸೀಸ್ತವಮ್ ॥**
– ಪದ್ಮಪುರಾಣ (೫/೫೯/೩೪-೪೨)

ದ್ವಾದಶೀಯಂದು ಹಾಗೂ ಏಕಾದಶೀಯಂದು ಜಾಗರಣೆ ಕಾಲದಲ್ಲಿ ಯಾವನು ಈ ತುಲಸಿ ಸ್ತವವನ್ನು ಪಠಿಸುವನೋ ಅವನು ಸಾವಿರಾರು ಕೋಟಿ ತೀರ್ಥಗಳಲ್ಲಿ ಲಕ್ಷ ಕೋಟಿಗಳ ಕಾಲ ಸ್ನಾನ ಮಾಡಿದ ಫಲವನ್ನು ಹೊಂದುವನು.

**ಶಾಲಗ್ರಾಮಂ ಚ ತುಲಸೀಂ ಶಂಖಮೇಕತ್ರ ಏವ ಚ ।**
**ಯೋ ರಕ್ಷತಿ ಮಹಾಜ್ಞಾನೀ ಸ ಭವೇಚ್ಛ್ರೀಹರಿಪ್ರಿಯಃ ॥**
– ಬ್ರಹ್ಮವೈವರ್ತಪುರಾಣ (೨/೨೧/೬೭)

ಶಾಲಿಗ್ರಾಮ, ತುಲಸಿ ಹಾಗೂ ಶಂಖ ಈ ಮೂರನ್ನು ಸಹ ಸದಾ ಒಂದೆಡೆ ಇರಿಸಿ ಸಂರಕ್ಷಿಸುವವನು ಮಹಾಜ್ಞಾನಿಯಾಗುವನು. ಶ್ರೀಹರಿಗೆ ಪ್ರಿಯನು ಆಗುವನು.

**ಶ್ರಿಯಂ ದೇಹಿ ಯಶೋ ದೇಹಿ ಕೀರ್ತಿಮಾಯುಃ ಸುತಾಂ ಸುತಮ್ ।**
**ಬಲಂ ಪುಷ್ಟಿಂ ತಥಾ ಧರ್ಮಂ ತುಲಸಿ ತ್ವಾಂ ನಮಾಮ್ಯಹಮ್ ॥**

– ಬ್ರಹ್ಮವೈವರ್ತಪುರಾಣ

ಅಮ್ಮಾ! ತುಲಸಿ! ನನಗೆ ಸಂಪತ್ತನ್ನು ನೀಡು, ಕೀರ್ತಿಯನ್ನು ನೀಡು, ಆಯುಷ್ಯವನ್ನು ಪುತ್ರಿಯನ್ನು, ಪುತ್ರನನ್ನು, ಬಲವನ್ನು, ಪುಷ್ಟಿಯನ್ನು ಹಾಗೇ ಧರ್ಮವನ್ನು ನೀಡು. ನಿನ್ನನ್ನು ನಾನು ನಮಸ್ಕರಿಸುವೆನು.

ಪತ್ರಾಣ್ಯೇಕೈಕಶೋ ನ್ಯಸ್ಯೇತ್ ಸತ್ಪಾತ್ರೇ ಮಂಜರೀರಪಿ।
ಛೇದನೇ ಚೈವ ಕಾಲೇ ತು ರಾಮರಾಮೇತಿ ಸಂಸ್ಮರೇತ್ ॥
ಶಾಖಾಗ್ರಪತಿತಂ ಭೂಮೌ ಪತ್ರಂ ಪತ್ರಂ ಪುರಾತನಮ್ ।
ತೇನಾಪಿ ಪೂಜ್ಯೋ ಗೋವಿಂದೋ ಮಧುಕೈಟಭಮರ್ದನಃ ॥

– ಬ್ರಹ್ಮವೈವರ್ತಪುರಾಣ

ತುಲಸಿಯ ರೆಂಬೆಗಳಿಂದ ಕೆಳಕ್ಕೆ ಉದುರಿ ಬಿದ್ದ ಒಂದೊಂದು ಒಣಗಿದ ಎಲೆಯೂ ಸಹ ಮಧುಕೈಟಭ ಮರ್ದನನಾದ ಗೋವಿಂದನಾದ ಶ್ರೀಹರಿಯ ಪೂಜೆಗೆ ಯೋಗ್ಯವೆನ್ನಿಸುವುದು.

★★★

# ತುಲಸೀ ಮಾಹಾತ್ಮ್ಯಪಠಣದ ಫಲ

ತುಲಸಿಯು ಬಹುಬಗೆಯಲ್ಲಿ ವಿಶಿಷ್ಟವೆನ್ನಿಸಿದೆ. ಉಪಯುಕ್ತವೆನ್ನಿಸದ ತುಲಸಿಯ ಭಾಗವೇ ಇಲ್ಲ. ಅದರಂತೆ ಪವಿತ್ರವಲ್ಲದ ತುಲಸಿಯ ಭಾಗವೂ ಇಲ್ಲ. ಹೀಗೆ ಏಕಕಾಲಕ್ಕೆ ಪವಿತ್ರ ಹಾಗೂ ಉಪಯುಕ್ತ ಎನ್ನಿಸಿರುವುದು ತುಲಸಿಯ ಮಹಿಮೆ. ಅದರೊಂದಿಗೆ ಅದರ ಮಹಿಮೆಯ ಪರಿಜ್ಞಾನವೂ ಸಹ ಉತ್ತಮಫಲದಾಯಕ. ತುಲಸಿಯ ಮಹಿಮೆಯನ್ನು ಶ್ರವಣಮಾಡುವುದು ಇತರರಿಗೆ ತಿಳಿಸುವುದು, ಪಾರಾಯಣ ಮಾಡುವುದು ಸಹ ಅತ್ಯಂತ ಪುಣ್ಯಕರ. ತುಲಸೀಮಾಹಾತ್ಮ್ಯದ ಕೃತಿಯನ್ನು ಮನೆಯಲ್ಲಿ ಇರಿಸಿಕೊಳ್ಳುವುದು ಸಹ ತಾರಕ.

ಸದಾಽಭಿನಂದ್ಯಾ ವಂದ್ಯಾ ಚ ಸುರಾಸುರನರೋರಗೈಃ।
ತವ ಪತ್ರಮೃತೇ ಪೂಜಾ ನಾದ್ಯಾರಭ್ಯ ಭವೇನ್ಮಮ ॥

– ಬೃಹದ್ಧರ್ಮಪುರಾಣ (೧/೮/೧೯)

ದೇವತೆಗಳು, ಅಸುರರು, ನರರು, ಉರಗಗಳು ಮೊದಲಾಗಿ ತುಲಸಿಯನ್ನು ಸದಾ ಅಭಿವಂದಿಸಬೇಕು ಹಾಗೂ ಅಭಿನಂದಿಸಬೇಕು; ಅದರ ಎಲೆ ಇಲ್ಲದೆ ಶ್ರೀಹರಿಯ ಪೂಜೆಯು ಆರಂಭವಾಗುವಂತೆಯೇ ಇಲ್ಲ.

**ಏಕತಃ ಸರ್ವನೈವೇದ್ಯನಾನಾಪುಷ್ಪವಿಭೂಷಣಮ್ ।**
**ಏಕತಃ ಪತ್ರಮೇಕಂ ತೇ ದ್ವಾದಶಾಕ್ಷರಮಂತ್ರವತ್ ॥**

– ಬೃಹದ್ಧರ್ಮಪುರಾಣ (೧/೮/೨೦)

ಸಕಲ ನೈವೇದ್ಯಪದಾರ್ಥಗಳು, ಬಗೆಬಗೆಯ ಪುಷ್ಪಗಳು, ಆಭರಣಗಳು – ಇವೆಲ್ಲ ಒಂದೆಡೆಯಾದರೆ ದ್ವಾದಶಾಕ್ಷರ ಮಂತ್ರದಂತೆ ತುಲಸಿಯ ಒಂದೇ ಒಂದು ಎಲೆಯು ಮತ್ತೊಂದು ಕಡೆ. (ಎಂದರೆ ತುಲಸಿಯ ಒಂದೇ ಒಂದು ಎಲೆಗೂ ಸಹ ಇತರ ಸಕಲ ಪೂಜಾದ್ರವ್ಯಗಳು ಸಾಟಿಯಾಗವು ಎಂದರ್ಥ; ಮಂತ್ರಗಳಲ್ಲಿ ಓಂ ನಮೋ ಭಗವತೇ ವಾಸುದೇವಾಯ ಎಂಬ ದ್ವಾದಶಾಕ್ಷರಮಂತ್ರವು ಹೇಗೋ ಹಾಗೆ ಪೂಜಾಸಾಧನದ್ರವ್ಯಗಳಲ್ಲಿ ತುಲಸಿಯ ಮಹತ್ತ್ವ ಎಂದು ತಿಳಿಯಬೇಕು).

**ತ್ವಾಂ ಯಃ ಪ್ರದಕ್ಷಿಣೀಕೃತ್ಯ ಪ್ರಣಮೇದ್ದಂಡವತ್ ತರುಮ್ ।**
**ಸಸಪ್ತದ್ವೀಪಾ ಪೃಥಿವೀ ಕೃತಾ ತೇನ ಪ್ರದಕ್ಷಿಣಾ ॥**

– ಬೃಹದ್ಧರ್ಮಪುರಾಣ (೧/೮/೨೧)

ತುಲಸಿಯನ್ನು ಪ್ರದಕ್ಷಿಣೆಮಾಡಿ ಅದಕ್ಕೆ ದಂಡವತ್ ಪ್ರಣಾಮವನ್ನು ಸಲ್ಲಿಸಬೇಕು. ಅದು ಸಪ್ತದ್ವೀಪಸಮೇತವಾದ ಪೃಥ್ವಿಯ ಪ್ರದಕ್ಷಿಣೆಯ ಪುಣ್ಯವನ್ನು ನೀಡುವುದು.

**ಶ್ರಾದ್ಧೇ ಚ ತರ್ಪಣೇ ಚೈವ ದಾನೇ ನೈವೇದ್ಯದಾಪನೇ ।**
**ತ್ವತ್ಪತ್ರೇಣ ವಿನಾ ನ ಸ್ಯಾತ್ ತತ್ತತ್ಕರ್ಮಫಲೋತ್ತರಮ್ ॥**

– ಬೃಹದ್ಧರ್ಮಪುರಾಣ (೧/೮/೨೨)

ಶ್ರಾದ್ಧ ತರ್ಪಣ, ದಾನ, ನೈವೇದ್ಯ ಸಮರ್ಪಣ ಮೊದಲಾದ ಯಾವುದೇ ಕರ್ಮವು ಸಹ ತುಲಸಿಯಿಲ್ಲದೆ ನಡೆಯುವಂತಿಲ್ಲ. ತುಲಸಿಯು ಆ ದ್ರವ್ಯಗಳ ಫಲವನ್ನು ಬಹಳವಾಗಿ ಹೆಚ್ಚಿಸುವುದು.

**ಪೂಜಿತೇ ಮಯಿ ಪತ್ರೈಸ್ತು ತುಷ್ಟಾಃ ಸ್ಯುಃ ಸರ್ವದೇವತಾಃ ।**
**ಕಾರ್ತಿಕೇ ಮಾಸಿ ತೇ ಪತ್ರಮೇಕಂ ಯಚ್ಛತಿ ಯೋ ಜನಃ ॥**
**ಸ ಗೋಸಹಸ್ರದಾನಸ್ಯ ಫಲಮಾಪ್ನೋತಿ ಮಾನವಃ ॥**

– ಬೃಹದ್ಧರ್ಮಪುರಾಣ (೧/೮/೨೩)

ತುಲಸಿಯ ಎಲೆಯಿಂದ ಶ್ರೀಹರಿಯನ್ನು ಪೂಜಿಸಿದಾಗ ಸಕಲ ದೇವತೆಗಳೂ ಸಂತುಷ್ಟರಾಗುವರು. ಕಾರ್ತೀಕಮಾಸದಲ್ಲಿ ಒಂದು ತುಲಸೀಪತ್ರವನ್ನು ಸಮರ್ಪಿಸುವ ಮಾನವನು ಸಹ ಸಾವಿರ ಗೋದಾನಗಳ ಫಲವನ್ನು ಪಡೆಯುವನು.

**ಮಾಘೇ ಮಾಸಿ ಚ ತೇ ಪತ್ರಮಾಲಾಂ ಯಚ್ಛತಿ ಯೋ ಜನಃ।**
**ತಸ್ಮೈ ಅಹಂ ಪ್ರಯಚ್ಛಾಮಿ ವಾಜಿಮೇಧಕ್ರತೋಃ ಫಲಮ್ ॥**

- ಬೃಹದ್ಧರ್ಮಪುರಾಣ (೧/೮/೨೪)

ಮಾಘಮಾಸದಲ್ಲಿ ಶ್ರೀಹರಿಗೆ ತುಲಸಿ ಎಲೆಗಳ ಮಾಲೆಯನ್ನು ಯಾವನು ಸಮರ್ಪಿಸುವನೋ ಅವನಿಗೆ ಶ್ರೀಹರಿಯು ಅಶ್ವಮೇಧಯಾಗದ ಫಲವನ್ನು ನೀಡುವನು.

**ವೈಶಾಖೇ ಮಾಸಿ ತೇ ಪತ್ರೈರ್ಯೋ ಮೇ ಶಯ್ಯಾಂ ಪ್ರಯಚ್ಛತಿ।**
**ತಸ್ಮೈ ಅಹಂ ಪ್ರಯಚ್ಛಾಮಿ ಸ್ವಮೇವ ಕಿಮಿತೋಽಧಿಕಮ್ ।**

- ಬೃಹದ್ಧರ್ಮಪುರಾಣ (೧/೮/೨೫)

ವೈಶಾಖಮಾಸದಲ್ಲಿ ತುಲಸಿಪತ್ರಗಳಿಂದ ಯಾವನು ಶ್ರೀಹರಿಗೆ ಶಯನವನ್ನು ನಿರ್ಮಿಸುವನೋ ಅವನಿಗೆ ಅವನು ತನ್ನನ್ನೇ ಕೊಡುವನು. ಇದಕ್ಕಿಂತ ಹೆಚ್ಚಿನದೇನಿದೆ!

**ವೈಶಾಖೇ ಮಾಸಿ ತೇ ಪತ್ರಜಲೇನ ಯೋಽಭಿಷಿಂಚತಿ।**
**ತಸ್ಮೈ ಅಹಂ ಪ್ರಯಚ್ಛಾಮಿ ಸದಾಽಮೃತನಿಧಿಸ್ಥಿತಿಮ್ ॥**

- ಬೃಹದ್ಧರ್ಮಪುರಾಣ (೧/೮/೨೬)

ವೈಶಾಖಮಾಸದಲ್ಲಿ ತುಲಸಿಪತ್ರದ ಜಲದಿಂದ ಶ್ರೀಹರಿಗೆ ಅಭಿಷೇಕಮಾಡುವನೋ ಅವನಿಗೆ ಅವನು ಸದಾ ಅಮೃತನಿಧಿಯಲ್ಲಿ ನೆಲೆಯನ್ನು ಕಲ್ಪಿಸುವನು.

**ಆಷಾಢೇ ಮಾಸಿ ಯೋ ಮಹ್ಯಂ ತ್ವತ್ಪತ್ರರಸವಾಸಿತಮ್ ।**
**ಜಲಂ ದದಾತಿ ತಸ್ಮೈ ಚ ದದಾಮಿ ನ ಪುನರುದ್ಭವಮ್ ॥**

**ತ್ವತ್ಪತ್ರಂ ಯತ್ರ ತತ್ರಾಪಿ ಪತೇದ್ಯತ್ರ ಮಹೀತಲೇ।**
**ತದಹಂ ಶಿರಸಾ ಗ್ರಾಹ್ಯಂ ಕರಿಷ್ಯಾಮಿ ಶಿವಾಜ್ಞಯಾ ॥**

- ಬೃಹದ್ಧರ್ಮಪುರಾಣ (೧/೮/೨೭, ೨೮)

ಆಷಾಢಮಾಸದಲ್ಲಿ ಯಾವನು ತುಲಸಿಯ ಪತ್ರದಿಂದ ಸುವಾಸಿತವಾದ ಜಲವನ್ನು ನನಗೆ ಸಮರ್ಪಿಸುವನೋ, ಅವನಿಗೆ ನಾನು ಮರಳಿ ಹುಟ್ಟು ಬರದಂತೆ ಮಾಡುವೆನು. ತುಲಸಿಯ ಪತ್ರವು ಯಾವ ಸ್ಥಳದಲ್ಲಿ ಬೀಳುವುದೋ ಆ ಸ್ಥಳವನ್ನು ನಾನು ಶಿರಸಾ ಆದರಿಸುವೆನು.

**ತ್ವತ್ಪತ್ರಜಲಸಿಕ್ತಾನ್ನಂ ಯೋ ಭುಂಕ್ತೇ ಮಾನವಃ ಕ್ವಚಿತ್ ।**
**ತದೇವಾಮೃತಮಿತ್ಯುಕ್ತಂ ಭುಕ್ತಂ ಭಾಗ್ಯವತಾ ಶುಭೇ ॥**

- ಬೃಹದ್ಧರ್ಮಪುರಾಣ (೧/೮/೨೯)

ತುಲಸಿಪತ್ರದಿಂದ ಒಡಗೂಡಿದ ಅನ್ನವನ್ನು ಯಾವ ಮಾನವನು ಒಮ್ಮೆಯಾದರೂ ಭುಂಜಿಸುವನೋ ಅದನ್ನು ಅಮೃತ ಎನ್ನುವರು. ತಿಂದ ಅವನು ಭಾಗ್ಯವಂತನೆನ್ನಿಸುವನು.

**ತ್ವತ್ಪತ್ರರಸಭೋಜೀ ಯೋ ಗಂಗಾಜಲಸಮನ್ವಿತಮ್ ।**
**ಸೋऽಹಮಿತ್ಯೇವ ವಿಜ್ಞೇಯಂ ಸತ್ಯಂ ಸತ್ಯಂ ಶಪೇ ಶಪೇ ॥**

– ಬೃಹದ್ಧರ್ಮಪುರಾಣ (೧/೮/೩೦)

ಗಂಗಾಜಲದಿಂದ ಕೂಡಿದ ತುಲಸಿಪತ್ರದ ರಸವನ್ನು ಯಾವನು ಭುಂಜಿಸುವನೋ ಅವನು ಶ್ರೀಹರಿಯಂತೆಯೇ ಮಾನ್ಯ ಎಂದು ತಿಳಿಯಬೇಕು. ಇದು ಸತ್ಯ ಸತ್ಯ ಎಂದು ಶಪಥ ಮಾಡುವೆನು.

**ತ್ವತ್ಕಾಷ್ಠಮಾಲಾಂ ತ್ವತ್ಕಾಷ್ಠಘೃಷ್ಟಪಂಕಂ ಚ ಯೋऽದಧತ್ ।**
**ಅಹಂ ತಸ್ಯಾನುಗಃ ಶುದ್ಧೇ ಭವಾಮಿ ಸುತವತ್ ಪಿತುಃ ॥**

– ಬೃಹದ್ಧರ್ಮಪುರಾಣ (೧/೮/೩೨)

ತುಲಸಿಯ ಕಾಷ್ಠದ ಮಾಲೆಯನ್ನು ಆ ಕಾಷ್ಠದಿಂದ ತೇಯ್ದ ಗಂಧವನ್ನು ಯಾವನು ಶ್ರೀಹರಿಗೆ ಸಮರ್ಪಿಸುವನೋ ಅಂತಹವನಿಗೆ ಮಗನಿಗೆ ತಂದೆ ಹೇಗೋ ಹಾಗೆ ಶ್ರೀಹರಿಯು ವಶನಾಗುವನು.

**ಭುಕ್ತ್ವೇಹ ವಿಪುಲಾನ್ ಭೋಗಾನಂತೇ ವಿಷ್ಣುಪದಂ ಯಯೌ ।**
**ಮಾಹಾತ್ಮ್ಯಂ ತುಲಸೀದೇವ್ಯಾಃ ಸುಶುದ್ಧಂ ಯೋ ಜಪೇನ್ನರಃ ॥**

– ಸೂತ್ರಸಂಹಿತಾ (೮/೫೦)

ಯಾವ ಮಾನವನು ಪರಿಶುದ್ಧವಾದ ತುಲಸೀದೇವಿಯ ಮಾಹಾತ್ಮ್ಯವನ್ನು ಪಠಿಸುವನೋ ಅವನು ಇಲ್ಲಿ ವಿಪುಲವಾದ ಭೋಗಗಳನ್ನು ಭುಂಜಿಸಿ ಬಳಿಕ ಕೊನೆಯಲ್ಲಿ ವಿಷ್ಣುಪದವೆನ್ನಿಸುವ ವೈಕುಂಠಕ್ಕೆ ತೆರಳುವನು.

**ವಿಷುವಾಯನಕಾಲೇಷು ಪುಣ್ಯೇ ವಾ ಸಮಯಾಂತರೇ ।**
**ಅಮಾಯಾಮುಪರಾಗೇ ಚ ಶ್ರಾದ್ಧಕಾಲೇ ವಿಶೇಷತಃ ॥**

– ಸೂತ್ರಸಂಹಿತಾ (೮/೫೧)

ವಿಷುವಾ, ಉತ್ತರಾಯಣ, ದಕ್ಷಿಣಾಯನ, ಮೊದಲಾದ ಪುಣ್ಯಕಾಲಗಳಲ್ಲಿ ಅಥವಾ ಬೇರೊಂದು ಸಮಯದಲ್ಲಿ ಅಮಾವಾಸ್ಯೆಯಂದು ಗ್ರಹಣವಿದ್ದಾಗಲೂ ಹಾಗೂ ಶ್ರಾದ್ಧಕಾಲದಲ್ಲೂ ವಿಶೇಷವಾಗಿ ಇದನ್ನು ಪಠಿಸಬೇಕು.

ಜಯಂತ್ಯಾಂ ಶಿವರಾತ್ರೌ ಚ ದ್ವಾದಶ್ಯಾಂ ಹರಿವಾಸರೇ ।
ಮಹಾನವಮ್ಯಾಂ ಶ್ರೀರಾಮನವಮ್ಯಾಮಪಿ ಸರ್ವತಃ ॥

ಅನ್ಯೇಷು ವ್ರತಕಾಲೇಷು ಶೈವಶಾಕ್ರಾದಿಕೇಷು ಚ ।
ತತ್ಕೋಟಿಗುಣಿತಂ ದೇವ್ಯಾಃ ಪ್ರಸಾದಾದುಪಜಾಯತೇ ॥

– ಸೂತ್ರಸಂಹಿತಾ (೮/೫೨)

ಶ್ರೀಕೃಷ್ಣಜಯಂತೀ, ಶಿವರಾತ್ರಿ, ದ್ವಾದಶೀ, ಏಕಾದಶಿ, ಮಹಾನವಮಿ, ಶ್ರೀರಾಮನವಮಿ, ಮೊದಲಾದ ಪರ್ವಕಾಲಗಳಲ್ಲಿ, ಇತರ ವ್ರತಕಾಲಗಳಲ್ಲಿ, ಶಿವ ಇಂದ್ರ ಮೊದಲಾದ ದೇವತೆಗಳನ್ನು ಕುರಿತ ವ್ರತಗಳಲ್ಲಿ ಈ ತುಲಸೀಮಾಹಾತ್ಮ್ಯವನ್ನು ಎಲ್ಲ ರೀತಿಯಲ್ಲೂ ಪಠಿಸುವರೋ ಅವುಗಳ ಫಲವು ಕೋಟಿಪಟ್ಟು ಹೆಚ್ಚಾಗಿ ಲಭಿಸುವುದು.

ಪುತ್ರದಂ ಚಾಪ್ಯಪುತ್ರಾಣಾಮದಾರಾಣಾಂ ಚ ದಾರದಮ್ ।
ವಿದ್ಯಾಪ್ರದಮವಿದ್ಯಾನಾಮಧನಾನಾಂ ಧನಪ್ರದಮ್ ।

ಕ್ಷತ್ರಿಯಾಣಾಂ ಜಯಕರಂ ವಿಶಾಂ ವಾಣಿಜ್ಯವರ್ಧನಮ್ ॥
ದ್ವಿಜಾನಾಂ ಚ ವಿಶೇಷೇಣ ಜ್ಞಾನಸಿದ್ಧಿಪ್ರದಾಯಕಮ್ ॥

– ಸೂತ್ರಸಂಹಿತಾ (೮/೫೩,೫೪)

ಈ ತುಲಸೀಮಾಹಾತ್ಮ್ಯವು ಪುತ್ರರಿಲ್ಲದವರಿಗೆ ಪುತ್ರರನ್ನು ನೀಡುವುದು, ಪತ್ನಿ ಇಲ್ಲದವರಿಗೆ ಪತ್ನಿಯನ್ನು ಕೊಡುವುದು, ವಿದ್ಯಾಹೀನರಿಗೆ ವಿದ್ಯೆ ನೀಡುವುದು, ದರಿದ್ರರಿಗೆ ಧನವನ್ನು ಕೊಡುವುದು, ಕ್ಷತ್ರಿಯರಿಗೆ ಜಯಕರವಾದುದು, ವೈಶ್ಯರ ವ್ಯಾಪಾರವನ್ನು ಹೆಚ್ಚಿಸುವುದು, ಬ್ರಾಹ್ಮಣರಿಗೆ ವಿಶೇಷವಾಗಿ ಜ್ಞಾನಸಿದ್ಧಿಯನ್ನು ಕೊಡುವುದು.

ಏತತ್ ಸ್ತೋತ್ರಂ ಪಠೇದ್ದೇವ್ಯಾಃ ತುಲಸ್ಯಾಃ ಸನ್ನಿಧಾನತಃ ।
ಆಯುರಾರೋಗ್ಯಮೈಶ್ವರ್ಯಂ ಲಬ್ಧ್ವಾಽಂತೇ ತತ್ಪದಂ ವ್ರಜೇತ್ ॥

– ಸೂತ್ರಸಂಹಿತಾ (೮/೫೫)

ಈ ಸ್ತೋತ್ರವನ್ನು ತುಲಸಿಯ ಸನ್ನಿಧಿಯಲ್ಲಿ ಪಠಿಸಬೇಕು. ಇದರಿಂದ ಆಯುಷ್ಯ, ಆರೋಗ್ಯ, ಐಶ್ವರ್ಯಗಳನ್ನು ಹೊಂದಿ ಕೊನೆಗೆ ವಿಷ್ಣುಲೋಕವೇ ಲಭಿಸುವುದು.

ಪ್ರಾತರುತ್ಥಾಯ ಯೋ ಮರ್ತ್ಯೋ ಮುಹುರ್ಮುಹುರುದಾರಧೀಃ ।
ತುಲಸೀಂ ಕೀರ್ತಯೇದ್ಭಕ್ತ್ಯಾ ತಸ್ಯ ಪುಣ್ಯಂ ವಿವರ್ಧತೇ ॥

–ಸ್ಕಂದಪುರಾಣ, ಪ್ರಭಾಸಖಂಡ (೮೧/೧)

ಬೆಳಿಗ್ಗೆ ಎದ್ದು ಯಾವ ಮಾನವನು ತುಲಸಿಯನ್ನು ಉದಾರಬುದ್ಧಿಯಿಂದ ಭಕ್ತಿಯಿಂದ ಮತ್ತೆ ಮತ್ತೆ ಕೊಂಡಾಡುವನೋ ಅವನ ಪುಣ್ಯವು ಬಹಳವಾಗಿ ಹೆಚ್ಚುವುದು.

**ಪುರಾ ಗೀತಂ ಪುರಾಣೇಷು ಪುಂಡರೀಕೇಣ ಧೀಮತಾ ।**
**ಸ್ತೋತ್ರಂ ತುಲಸ್ಯಾಸ್ತು ಮಹತ್ ತನ್ನಿಬೋಧ ಮಹಾಮತೇ ॥**

– ಸ್ಕಂದಪುರಾಣ, ಪ್ರಭಾಸಖಂಡ (೮೧/೨)

ಈ ತುಲಸೀ ಮಾಹಾತ್ಮ್ಯವು ಹಿಂದೆ ಜ್ಞಾನಿಯಾದ ಪುಂಡರೀಕನಿಂದ ಪುರಾಣಗಳಲ್ಲಿ ಹೇಳಲ್ಪಟ್ಟಿದೆ.

**ನಮಸ್ತುಲಸಿ ಕಲ್ಯಾಣಿ ನಮೋ ವಿಷ್ಣುಜನಪ್ರಿಯೇ ।**
**ನಮೋ ಮೋಕ್ಷಪ್ರದೇ ದೇವಿ ನಮಃ ಸಂಪತ್ಪ್ರದಾಯಕೇ ॥**

– ಸ್ಕಂದಪುರಾಣ, ಪ್ರಭಾಸಖಂಡ (೮೧/೩)

ಅಮ್ಮಾ! ಕಲ್ಯಾಣಿ! ವೈಷ್ಣವ ಜನರಿಗೆ ಪ್ರಿಯಳಾದವಳೇ, ನಿನಗೆ ನಮಸ್ಕಾರ. ಮೋಕ್ಷ ನೀಡುವವಳೇ ನಿನಗೆ ನಮಸ್ಕಾರ. ಸಂಪತ್ಪ್ರದಾಯಕಳೇ ನಿನಗೆ ನಮಸ್ಕಾರ.

**ತುಲಸೀ ಪಾತು ಮಾಂ ನಿತ್ಯಂ ಸರ್ವಾಪದ್ಭ್ಯೋಽಪಿ ಸರ್ವದಾ ।**
**ಕೀರ್ತಿತಾಽಪಿ ಸ್ಮೃತಾ ವಾಽಪಿ ಯಾ ಪಾವಯತಿ ಮಾನವಮ್॥**

– ಸ್ಕಂದಪುರಾಣ

ಸಂಕೀರ್ತನೆ ಮಾಡಿದರೂ, ಸ್ಮರಣೆ ಮಾಡಿದರೂ ಮಾನವನನ್ನು ಪಾವನಗೊಳಿಸುವ ತುಲಸಿಯು ಸಕಲ ಆಪತ್ತುಗಳಿಂದಲೂ ಸರ್ವದಾ ನನ್ನನ್ನು ನಿತ್ಯದಲ್ಲೂ ಕಾಪಾಡಲಿ.

**ನಮಾಮಿ ಶಿರಸಾ ದೇವೀಂ ತುಲಸೀಂ ವಿಲಸತ್ತನುಮ್ ।**
**ಯಾಂ ದೃಷ್ಟ್ವಾ ಪಾಪಿನೋಽಪ್ಯನ್ಯೇ ಮುಚ್ಯಂತೇ ಸರ್ವಕಿಲ್ಬಿಷಾತ್ ॥**

– ಸ್ಕಂದಪುರಾಣ

ಯಾವಳನ್ನು ದರ್ಶನ ಮಾಡುತ್ತಲೇ ಪಾಪಿಗಳೂ ಸಹ ಸಕಲ ಪಾಪಗಳಿಂದ ಬಿಡುಗಡೆ ಹೊಂದಿವರೋ ಅಂತಹ ಹೊಳೆಹೊಳೆಯುವ ದೇಹದ ತುಲಸಿ ದೇವಿಯನ್ನು ಶಿರಸಾ ನಮಸ್ಕರಿಸುವೆನು.

**ತುಲಸ್ಯಾ ರಕ್ಷಿತಂ ಸರ್ವಂ ಜಗದೇತಚ್ಚರಾಚರಮ್ ।**
**ಯಯಾ ಜಹತಿ ಪಾಪಾನಿ ದೃಷ್ಟಯಾ ಚಾಪಿ ಯೋ ನರಃ ॥**

– ಸ್ಕಂದಪುರಾಣ

ಈ ಸಕಲ ಚರಾಚರಾತ್ಮಕವಾದ ಜಗತ್ತು ತುಲಸಿಯಿಂದ ರಕ್ಷಿತವಾಗಿದೆ. ತುಲಸಿನ್ನು ದರ್ಶನ ಮಾಡುವುದರಿಂದಲೇ ಮಾನವನು ಸಕಲ ಪಾಪಗಳನ್ನು ಕಳೆದುಕೊಳ್ಳುವನು.

**ನಮಸ್ತುಲಸ್ಯೈ ಸುತರಾಂ ಯಸ್ಮೈ ಬದ್ಧಾಂಜಲಿಃ ಕಲೌ ।**
**ಕಲಯಂತಿ ಸುಖಂ ಸರ್ವೇ ಸ್ತ್ರಿಯೋ ವೈಶ್ಯಾಸ್ತಥೇತರೇ ॥**

– ಸ್ಕಂದಪುರಾಣ

ಯಾರಿಗೆ ಕೈಜೋಡಿಸುವುದರಿಂದ ಕಲಿಯುಗದಲ್ಲಿ ಸ್ತ್ರೀಯರು, ವೈಶ್ಯರು ಹಾಗೆಯೇ ಇತರ ಎಲ್ಲರೂ ಸುಖವನ್ನು ಪಡೆಯುವರೋ ಅಂತಹ ತುಲಸಿಗೆ ವಿಶೇಷವಾಗಿ ನಮಸ್ಕರಿಸುವೆನು.

**ತುಲಸ್ಯಾ ನಾಪರಂ ಕಿಂಚಿದ್ದೈವತಂ ಜಗತೀತಲೇ ।**
**ಯಸ್ಯಾಃ ಪವಿತ್ರಿತಂ ಲೋಕೇ ವಿದುಃ ಸಂಗೇನ ವೈಷ್ಣವಾಃ ॥**

– ಸ್ಕಂದಪುರಾಣ

ಸಕಲ ವೈಷ್ಣವರು ತುಲಸಿಯ ಸಂಪರ್ಕ ಪಡೆದಿದ್ದನ್ನು ಪವಿತ್ರ ಎಂಬುದಾಗಿ ತಿಳಿಯುವರೋ, ಭೂಮಂಡಲದಲ್ಲಿ ತುಲಸಿಗಿಂತ ಮಿಗಿಲಾದ ಮತ್ತೊಬ್ಬ ದೇವತೆಯಿಲ್ಲ.

**ತುಲಸ್ಯಾಃ ಪಲ್ಲವಂ ವಿಷ್ಣೋಃ ಶಿರಸ್ಯಾರೋಪಿತಂ ಕಲೌ ।**
**ಆರೋಪಯಂತಿ ಸರ್ವಾಣಿ ಶ್ರೇಯಾಂಸಿ ನರಮಪ್ಯಲಮ್ ॥**

– ಸ್ಕಂದಪುರಾಣ

ಶ್ರೀಹರಿಯು ಪ್ರೀತಿಯಿಂದ ಶಿರಸ್ಸಿನ ಮೇಲೆ ಇರಿಸಿಕೊಂಡತಹ ತುಲಸಿಯ ಚಿಗುರನ್ನು ಸಕಲರೂ ಶಿರಸಾ ಧರಿಸುವರೋ ಅವರು ಸಕಲ ಶ್ರೇಯಸ್ಸನ್ನು ಸಹ ಸಂಪೂರ್ಣವಾಗಿ ಪಡೆಯುವರು.

**ತುಲಸ್ಯಾಂ ಸಕಲಾ ದೇವಾ ವಸಂತಿ ಸತತಂ ಯಶಃ ।**
**ಅತಸ್ತಾಮರ್ಚಯನ್ ಲೋಕೋ ಸರ್ವದೇವಾನ್ ಸಮರ್ಚತಿ ॥**

– ಸ್ಕಂದಪುರಾಣ

ತುಲಸಿಯಲ್ಲಿ ಸಕಲ ದೇವತೆಗಳೂ ಸಹ ನೆಲೆಸಿರುವರು. ಕೀರ್ತಿಯು ಸಹ ತುಲಸಿಯಲ್ಲೇ ನೆಲೆಸಿರುವುದು. ಆದ್ದರಿಂದ ತುಲಸಿಯನ್ನು ಪೂಜಿಸಿದರೆ ಸಮಸ್ತ ದೇವತೆಗಳನ್ನು ಪೂಜಿಸಿದಂತಾಗುವುದು.

**ನಮಸ್ತುಲಸಿ ಸರ್ವಜ್ಞೇ ಪುರುಷೋತ್ತಮವಲ್ಲಭೇ ।**
**ಪಾಹಿ ಮಾಂ ಸರ್ವಪಾಪೇಭ್ಯಃ ಸರ್ವಸಂಪತ್ಪ್ರದಾಯಕೇ ॥** – ಸ್ಕಂದಪುರಾಣ

ಅಮ್ಮಾ ! ತುಲಸಿ ! ನೀನು ಸರ್ವಜ್ಞಳು. ಪುರುಷೋತ್ತಮನಾದ ಶ್ರೀಹರಿಗೆ ಅತ್ಯಂತ ಪ್ರಿಯಳು. ಸರ್ವಸಂಪತ್ಪ್ರದಾಯಕಳಾದ ನೀನು ನನ್ನನ್ನು ಸಕಲ ಪಾಪಗಳಿಂದ ಪಾರು ಮಾಡು.

**ಇತಿ ಸ್ತೋತ್ರಂ ಪುರಾ ಗೀತಂ ಪುಂಡರೀಕೇಣ ಧೀಮತಾ ।**
**ವಿಷ್ಣುಮರ್ಚಯತಾ ನಿತ್ಯಂ ಶೋಭನೈಸ್ತುಲಸೀದಲೈಃ ॥** – ಸ್ಕಂದಪುರಾಣ

ಈ ಸ್ತೋತ್ರವು ಹಿಂದೆ ಜ್ಞಾನಿಯಾದ ಪುಂಡರೀಕನು ನಿತ್ಯ ಮಂಗಳಕರವಾದ ತುಲಸಿ ದಳಗಳಿಂದ ಶ್ರೀಹರಿಯನ್ನು ಪೂಜಿಸುತ್ತಾ ಹಾಡಿದನು.

**ಇಮಮಾರ್ಷಂ ಸ್ತವಂ ನಿತ್ಯಂ ಪುರಾಣಮೃಷಿಣಾ ಕೃತಮ್ ।**
**ಯಃ ಪಠೇತ್ ಸತತಂ ಭಕ್ತ್ಯಾ ಸ ತು ವಿಷ್ಣುಪ್ರಿಯೋ ಭವೇತ್ ॥**

– ಸ್ಕಂದಪುರಾಣ

ಋಷಿಯಿಂದ ರಚಿತವಾದ ಈ ಪ್ರಾಚೀನವಾದ ತುಲಸಿ ಸ್ತವವನ್ನು ನಿತ್ಯದಲ್ಲೂ ಯಾವನು ಭಕ್ತಿಯಿಂದ ಪಠಿಸುವನೋ ಅವನು ಮಹಾವಿಷ್ಣುವಿಗೆ ಪ್ರಿಯನಾಗುವನು.

**ಇಮಂ ಪಠನ್ ಸ್ತವಂ ದಿವ್ಯಂ ತುಲಸೀದಲಮುದ್ಧರನ್ ।**
**ಅರ್ಚಯಿತ್ವಾ ಹರಿಂ ಭಕ್ತ್ಯಾ ಪ್ರಾಪ್ನುಯಾತ್ ಪರಮಂ ಪದಮ್ ॥**

– ಸ್ಕಂದಪುರಾಣ

ಈ ದಿವ್ಯವಾದ ತುಲಸಿ ಸ್ತವವನ್ನು ಪಠಿಸುತ್ತಾ ತುಲಸಿ ದಳಗಳನ್ನು ಬಿಡಿಸಿ ಭಕ್ತಿಯಿಂದ ಶ್ರೀಹರಿಯನ್ನು ಪೂಜಿಸುವವನು ಪರಮಪದವಾದ ಮೋಕ್ಷವನ್ನು ಹೊಂದುವನು.

**ತುಲಸೀ ಶ್ರೀಃ ಮಹಾಲಕ್ಷ್ಮೀಃ ಲಕ್ಷ್ಮೀ ವಿದ್ಯಾ ಯಶಸ್ವಿನೀ ।**
**ಧರ್ಮಾಧರ್ಮಮಯೀ ದೇವೀ ದೇವದೇವಮನಃಪ್ರಿಯಾ ॥**

– ಸ್ಕಂದಪುರಾಣ

ತುಲಸೀ, ಶ್ರೀ, ಮಹಾಲಕ್ಷ್ಮೀ, ಲಕ್ಷ್ಮೀ, ವಿದ್ಯಾ, ಯಶಸ್ವಿನೀ, ಧರ್ಮಾಮಯೀ ಅಧರ್ಮಮಯೀ, ದೇವೀ, ದೇವದೇವಮನಃಪ್ರಿಯೇ

**ಲಕ್ಷ್ಮೀಪ್ರಿಯಸಖೀ ಸುಭ್ರೂಃ ಭೂರ್ಭೂಮಿರಚಲಾಽಮಲಾ ।**
**ಷೋಡಶೈತಾನಿ ನಾಮಾನಿ ತುಲಸ್ಯಾಃ ಕೀರ್ತಯೇನ್ನರಃ ।**
**ಲಭಂತೇ ಸುತರಾಂ ಭಕ್ತಿಂ ಅಂತೇ ವಿಷ್ಣುಪದಂ ವ್ರಜೇತ್ ॥** – ಸ್ಕಂದಪುರಾಣ

ಲಕ್ಷ್ಮೀಪ್ರಿಯಸಖೀ, ಸುಭ್ರು, ಭೂ, ಭೂಮಿ, ಅಚಲಾ, ಅಮಲಾ- ಈ ತುಲಸಿಯ ಹದಿನಾರು ನಾಮಗಳನ್ನು ಮಾನವನು ನಿತ್ಯದಲ್ಲೂ ಪಠಿಸಬೇಕು. ಇದರಿಂದ ವಿಶೇಷವಾದ ಭಕ್ತಿಯು ಹುಟ್ಟುವುದು. ಕೊನೆಗೆ ವಿಷ್ಣುಸ್ಥಾನವಾದ ವೈಕುಂಠವು ಲಭಿಸುವುದು.

**ತುಲಸೀಕಾಷ್ಠರಚಿತಾಂ ಮಹಾಮಾಲಾಂ ಚ ಧಾರಯನ್ ।**
**ನರಃ ಪ್ರೇತ್ಯ ಲಭೇದ್ಧಾಮ ದಿವ್ಯಂ ಕೌಸ್ತುಭನಾಯಕಮ್ ॥** – ಸ್ಕಂದಪುರಾಣ

ತುಲಸೀ ಕಾಷ್ಠದಿಂದ ಮಾಡಿದ ಶ್ರೇಷ್ಠವಾದ ಮಾಲೆಯನ್ನು ಧರಿಸುವ ಮಾನವನು ಕೌಸ್ತುಭ ಧಾರಿಯಾದ ಶ್ರೀಹರಿಯ ದಿವ್ಯಲೋಕವನ್ನು ಪಡೆಯುವನು.

**ತುಲಸೀ ಭೂರ್ಮಹಾದೇವೀ ಪದ್ಮಿನೀ ಶ್ರೀಹರಿಪ್ರಿಯಾ ।**
**ತುಲಸ್ಯಾಕ್ಷಸ್ರಗೇತೇನ ಪದ್ಮಬೀಜಾಕ್ಷಮಾಲಯಾ ।**
**ಸಮ್ಮಿಶ್ರಂ ಧಾರಯೇನ್ನಿತ್ಯಂ ಲಕ್ಷ್ಮೀಂ ಭೂಮಿಂ ಚ ವಿಂದತಿ ॥** – ಸ್ಕಂದಪುರಾಣ

ತುಲಸೀ, ಭೂ, ಮಹಾದೇವಿ, ಪದ್ಮಿನಿ, ಶ್ರೀಹರಿಪ್ರಿಯಾ ಎಂದು ಸ್ಮರಿಸುತ್ತಾ ತುಲಸಿ ಮಾಲೆಯನ್ನು, ಕಮಲಾಕ್ಷ ಮಾಲೆಯನ್ನು ನಿತ್ಯದಲ್ಲೂ ಧರಿಸುವವನು ಸಂಪತ್ತನ್ನು ಭೂಮಿಯನ್ನು ಪಡೆಯುವನು.

**ತುಲಸೀಸ್ಥಾನಮಾಶ್ರಿತ್ಯ ಮಣಿಮಾಲಾಸಮನ್ವಿತಾ ।**
**ಜಪನ್ನಷ್ಟಾಕ್ಷರಂ ಮಂತ್ರಂ ಸರ್ವಪಾಪೈಃ ಪ್ರಮುಚ್ಯತೇ ॥** – ಸ್ಕಂದಪುರಾಣ

ತುಲಸಿಯ ಸನ್ನಿಧಿಯಲ್ಲಿ ಕುಳಿತು ತುಲಸಿ ಮಣಿಗಳ ಮಾಲೆ ಧರಿಸಿಕೊಂಡು ನಾರಾಯಣ ಅಷ್ಟಾಕ್ಷರ ಮಂತ್ರವನ್ನು ಜಪಿಸುವವನು ಸಕಲ ಪಾಪಗಳಿಂದ ಬಿಡುಗಡೆ ಹೊಂದುವನು.

**ವಾರಾಹಂ ಚ ರಮಾಂ ಭೂಮಿಂ ಗೌರೀಂ ದುರ್ಗಾಂ ಸರಸ್ವತೀಮ್ ।**
**ಗಾಯತ್ರೀಂ ಚಾಪ್ಯಘೋರಂ ಚ ಶೈವಂ ಶಾಕ್ತಂ ಚ ವೈಷ್ಣವಮ್ ॥**

**ತಥಾ ಸರ್ವಾಣಿ ಮಂತ್ರಾಣಿ ಯೋ ಜಪೇತ್ ಪ್ರಯತಃ ಶುಚಿಃ ।**
**ಕಲ್ಪಕೋಟಿಜಪಾವಾಪ್ಯಂ ಫಲಂ ಮಾಸೇನ ವಿಂದತಿ ॥**

– ಸ್ಕಂದಪುರಾಣ, ಪ್ರಭಾಸಖಂಡ (೮೧/೨೨)

★★★

## ತುಲಸೀ ಹಾಗೂ ಧಾತ್ರೀ

ತುಲಸಿಮಾಲೆಯೊಂದಿಗೆ ಧಾತ್ರೀಮಾಲೆಯನ್ನು ಸಹ ಧರಿಸುವುದು ಮತ್ತೊಂದು ವಿಶೇಷ. ತುಲಸಿಯಂತೆ ಧಾತ್ರಿಯು ಸಹ ಬಗೆಬಗೆಯ ಹಿರಿಮೆಯನ್ನು ಹೊಂದಿರುವ ಅಪೂರ್ವ ವೃಕ್ಷ. ಕಾರ್ತೀಕಮಾಸದಲ್ಲಿ ತುಲಸೀ ಹಾಗೂ ಧಾತ್ರೀಯನ್ನು ಒಟ್ಟಾಗಿ ಇರಿಸಿ ಪೂಜೆ ಮಾಡುವುದು ವಿಶೇಷ ಪುಣ್ಯಕ್ಕೆ ಕಾರಣ. ತುಲಸಿಯಲ್ಲಿ ಮಹಾಲಕ್ಷ್ಮಿಯ ಸನ್ನಿಧಾನವಾದರೆ

ಧಾತ್ರಿಯಲ್ಲಿ ಮಹಾವಿಷ್ಣುವಿನ ಸನ್ನಿಧಾನ. ಅವುಗಳನ್ನು ಜೊತೆಯಾಗಿ ಧರಿಸುವುದು ಇನ್ನೂ ಹೆಚ್ಚು ಪುಣ್ಯಕರ.

**ನ ತ್ಯಾಜ್ಯಾ ತುಲಸೀಮಾಲಾ ಧಾತ್ರೀಮಾಲಾ ವಿಶೇಷತಃ।**
**ತಥಾ ಪದ್ಮಾಕ್ಷಮಾಲಾಽಪಿ ಧರ್ಮಕಾಮಾರ್ಥಮೀಪ್ಸುಭಿಃ॥**

- ಸ್ಕಂದಪುರಾಣ (೨/೪/೧೨/೩೧)

ತುಲಸೀಮಾಲೆಯಂತೆ ಧಾತ್ರಿಮಾಲೆಯನ್ನು ಪದ್ಮಾಕ್ಷಮಾಲೆಯನ್ನು ಸಹ ಧರ್ಮ, ಕಾಮ ಹಾಗೂ ಅರ್ಥ ಎಂಬ ಪುರುಷಾರ್ಥಗಳನ್ನು ಬಯಸುವವರು ವಿಶೇಷವಾಗಿ ಧರಿಸಬೇಕು.

**ಕಾರ್ತಿಕೇ ಮಾಸಿ ವೈ ವಿಪ್ರೋ ಧಾತ್ರೀಮಾಲಾಂ ತು ಯೋ ವಹೇತ್।**
**ತಥೈವ ತುಲಸೀಮಾಲಾಂ ತಸ್ಯ ಪುಣ್ಯಮನಂತಕಮ್॥**

- ಸ್ಕಂದಪುರಾಣ (೨/೪/೧೨/೬೬)

ಕಾರ್ತೀಕಮಾಸದಲ್ಲಿ ವಿಪ್ರನು ಧಾತ್ರಿಮಾಲೆಯನ್ನು ಅದರಂತೆ ತುಲಸಿಮಾಲೆಯನ್ನು ಜೊತೆಯಾಗಿ ಧರಿಸಬೇಕು; ಆಗ ಲಭಿಸುವ ಪುಣ್ಯ ಅನಂತವಾದುದು.

**ಮಾಲಾಯುಗ್ಮಂ ವಹೇದ್ಯಸ್ತು ಧಾತ್ರೀತುಲಸಿಸಂಭವಮ್।**
**ಯೋ ನರಃ ಕಂಠದೇಶೇ ತು ಕಲ್ಪಕೋಟಿಂ ದಿವಂ ವಸೇತ್॥**

- ಸ್ಕಂದಪುರಾಣ (೨/೪/೧೨/೮೧)

ಧಾತ್ರೀ ಹಾಗೂ ತುಲಸಿಮಾಲೆಗಳನ್ನು ಜೊತೆಯಾಗಿ ಕಂಠಪ್ರದೇಶದಲ್ಲಿ ಧರಿಸುವ ಮಾನವನು ಕೋಟಿ ಕಲ್ಪಗಳ ಕಾಲ ಸ್ವರ್ಗದಲ್ಲಿ ನೆಲೆಸುವನು.

**ಧಾತ್ರೀಫಲಕೃತಾ ಮಾಲಾ ತುಲಸೀಕಾಷ್ಠಸಂಭವಾ।**
**ದೃಶ್ಯತೇ ಯಸ್ಯ ದೇಹೇ ತು ಸ ವೈ ಭಾಗವತೋ ನರಃ॥**

- ಪದ್ಮಪುರಾಣ (೩/೨೨/೧೧), ಸ್ಕಂದಪುರಾಣ

ಧಾತ್ರಿಯಿಂದ ಮಾಡಿದ ಮಾಲೆ ಹಾಗೂ ತುಲಸಿಯಿಂದ ಮಾಡಿದ ಮಾಲೆಗಳು ಯಾವನ ದೇಹದಲ್ಲಿ ಕಂಡುಬರುವವೋ ಆ ಮಾನವನು ಭಾಗವತನೇ ಸರಿ.

**ನ ಜಹ್ಯಾತ್ ತುಲಸೀಮಾಲಾಂ ಧಾತ್ರೀಮಾಲಾಂ ವಿಶೇಷತಃ।**
**ಮಹಾಪಾತಕಸಂಹರ್ತ್ರೀಂ ಧರ್ಮಕಾಮಾರ್ಥದಾಯಿನೀಮ್॥**

- ಪದ್ಮಪುರಾಣ (೩/೨೨/೧೫)

ಮಹಾಪಾತಕಗಳನ್ನು ಪರಿಹರಿಸುವ, ಧರ್ಮ, ಅರ್ಥ, ಕಾಮಗಳನ್ನು ನೀಡುವ ತುಲಸೀ ಮಾಲೆಯನ್ನಾಗಲಿ ಹಾಗೂ ಧಾತ್ರಿಮಾಲೆಯನ್ನಾಗಲಿ ಧರಿಸದೇ ಇರಬಾರದು.

**ಕಾರ್ತಿಕೇ ಮಾಸಿ ವಿಪ್ರೇಂದ್ರ ಧಾತ್ರೀ ಚ ತುಲಸೀ ಸದಾ ।**
**ಸರ್ವದೇವಪ್ರಿಯಾ ಜ್ಞೇಯಾ ವಿಷ್ಣೋಶ್ಚೈವ ವಿಶೇಷತಃ ॥**

– ಶಿವಪುರಾಣ (೨/೫/೨೬/೫೩)

ಕಾರ್ತೀಕಮಾಸದಲ್ಲಿ ತುಲಸೀ ಹಾಗೂ ಧಾತ್ರೀಯು ಇವೆರಡೂ ಸಕಲ ದೇವತೆಗಳಿಗೂ ಹಾಗೂ ವಿಶೇಷವಾಗಿ ವಿಷ್ಣುವಿಗೂ ಪ್ರಿಯವಾದವು.

**ಯಥಾ ಪ್ರಿಯಂ ಸುತುಲಸೀಕಾನನಂ ಸರ್ವದಾ ಹರೇಃ ।**
**ತಥಾ ಧಾತ್ರೀವನಂ ಮಾಸೇ ಕಾರ್ತಿಕೇ ಶ್ರೀಹರಿಪ್ರಿಯಮ್ ॥**

– ಸ್ಕಂದಪುರಾಣ (೨/೪/೧೨/೨೫)

ತುಲಸೀವನವು ಹೇಗೆ ಶ್ರೀಹರಿಗೆ ಸರ್ವದಾ ಪ್ರಿಯವಾಗಿರುವುದೋ ಅದೇ ರೀತಿಯಲ್ಲಿ ಕಾರ್ತೀಕಮಾಸದಲ್ಲಿ ಧಾತ್ರೀವನವು ಶ್ರೀಹರಿಗೆ ಪ್ರಿಯವಾಗಿದೆ.

**ತುಲಸ್ಯಾಶ್ಚೈವ ಧಾತ್ರ್ಯಾಶ್ಚ ಫಲೈಃ ಪತ್ರೈರ್ಹರಿಂ ಯಜೇತ್ ।**

– ಸ್ಕಂದಪುರಾಣ (೨/೪/೧೨/೮೫)

ತುಲಸಿಯ ಪತ್ರಗಳಿಂದಲೂ ಹಾಗೂ ಧಾತ್ರಿಯಫಲಗಳಿಂದಲೂ ಶ್ರೀಹರಿಯನ್ನು ಆರಾಧಿಸಬೇಕು.

★★★

# ತುಲಸಿಯ ಸ್ತೋತ್ರ

ತುಲಸಿಯ ಸ್ತೋತ್ರವು ಸಹ ಅತ್ಯಂತ ಮಹತ್ತ್ವಪೂರ್ಣವಾದುದು. ಪುತ್ರಪ್ರಾಪ್ತಿ, ರೋಗನಿವೃತ್ತಿ ಮೊದಲಾದ ಬಗೆಬಗೆಯ ಫಲಗಳು ತುಲಸಿಯ ಸ್ತೋತ್ರವನ್ನು ಸ್ಮರಿಸುತ್ತಲೇ ಲಭಿಸುವವು ಎನ್ನುವುದು ಅದರ ವಿಶಿಷ್ಟವಾದ ಹಿರಿಮೆ. ವೃಕ್ಷಗಳ ಸ್ತೋತ್ರ ಸಾಮಾನ್ಯವಾಗಿ ಶಾಸ್ತ್ರಗಳಲ್ಲಿ ವಿಹಿತವೇ ಆಗಿದೆ. ಆದರೆ, ವಿಶೇಷವಾಗಿ ಕಡ್ಡಾಯವೆಂಬಂತೆ ವಿಹಿತವಾಗಿರುವ ಸ್ತೋತ್ರ ಎಂದರೆ ತುಲಸಿಯ ಸ್ತೋತ್ರವೇ. ಅಶ್ವತ್ಥವೃಕ್ಷದ ಸ್ತೋತ್ರವೂ ಪ್ರಸಿದ್ಧ ಆದರೆ ಅದು ತುಲಸೀ ಸ್ತೋತ್ರದಂತೆ ನಿತ್ಯದ ಸ್ತೋತ್ರವಾಗಿ ವಿಹಿತವಾಗಿಲ್ಲ. ಈ ಅರ್ಥದಲ್ಲೂ ತುಲಸಿಯ ಮಹಿಮೆ ಅತ್ಯಂತ ಗಮನಾರ್ಹವೆನ್ನಿಸುವಂತಹದ್ದು. ಸ್ತೋತ್ರವನ್ನು ಅನ್ನ ಎಂಬುದಾಗಿ ಬೃಹದಾರಣ್ಯಕೋಪನಿಷತ್ತು ಕರೆದಿದೆ. ಇದರಿಂದ ತುಲಸಿಯ ಸ್ತೋತ್ರವೂ ಸಹ ಒಂದು ರೀತಿಯಲ್ಲಿ ತುಲಸಿಗೆ ನೈವೇದ್ಯ ಸಮರ್ಪಣೆಯಂತೆಯೇ ಮಹತ್ತ್ವಪೂರ್ಣ ಎನ್ನಿಸುವುದು.

**ತುಲಸಿ ಶ್ರೀಸಖಿ ಶುಭೇ ಪಾಪಹಾರಿಣಿ ಪುಣ್ಯದೇ ।**
**ನಮಸ್ತೇ ನಾರದನುತೇ ನಾರಾಯಣಮನಃಪ್ರಿಯೇ ॥**

– ಪದ್ಮಪುರಾಣ, ದೇವದತ್ತೋಪಾಖ್ಯಾನ (೪/೭)

ತುಲಸೀ! ಶ್ರೀಸಖೀ! ಶುಭೇ! ಪಾಪಹಾರಿಣೀ! ಪುಣ್ಯದೇ! ನಾರದನುತೇ! ನಾರಾಯಣಮನಃಪ್ರಿಯೇ! ನಿನಗೆ ನಮಸ್ಕಾರ.

**ದೇವೈಸ್ತ್ವಂ ನಿರ್ಮಿತಾ ಪೂರ್ವಮರ್ಚಿತಾಽಸಿ ಮುನೀಶ್ವರೈಃ ।**
**ನಮೋ ನಮಸ್ತೇ ತುಲಸಿ ಪಾಪಂ ಹರ ಹರಿಪ್ರಿಯೇ ॥**

– ಪದ್ಮಪುರಾಣ, ಉತ್ತರಖಂಡ (೬/೯೫/೩೦)

ಅಮ್ಮಾ ! ತುಲಸಿ! ನೀನು ಹರಿಗೆ ಪ್ರಿಯಳಾದವಳು. ದೇವತೆಗಳ ಪ್ರಾರ್ಥನೆಯಂತೆ ನೀನು ಹಿಂದೆ ಪ್ರಾದುರ್ಭವಿಸಿದಿ. ಮುನಿಶ್ರೇಷ್ಠರಿಂದ ಪೂಜಿತಳಾಗಿರುವಿ. ನಿನಗೆ ನಮಸ್ಕಾರ! ನಮಸ್ಕಾರ ! ನನ್ನ ಪಾಪವನ್ನು ಪರಿಹರಿಸು.

**ಅಪುತ್ರೋ ಲಭತೇ ಪುತ್ರಂ ಪ್ರಿಯಾಹೀನೋ ಲಭೇತ್ ಪ್ರಿಯಾಮ್ ।**
**ಬಂಧುಹೀನೋ ಲಭೇದ್ ಬಂಧುಂ ಸ್ತೋತ್ರಸ್ಮರಣಮಾತ್ರತಃ ॥**
**ರೋಗೀ ಪ್ರಮುಚ್ಯತೇ ರೋಗಾದ್ ಬದ್ಧೋ ಮುಚ್ಯೇತ ಬಂಧನಾತ್ ।**
**ಭಯಾನ್ ಮುಚ್ಯೇತ ಭೀತಸ್ತು ಪಾಪಾನ್ಮುಚ್ಯೇತ ಪಾತಕೀ ॥**

– ಬ್ರಹ್ಮವೈವರ್ತಪುರಾಣ (೨/೨೨/೩೭, ೩೮)

ಪುತ್ರರಿಲ್ಲದವರು ಪುತ್ರರನ್ನು ಪಡೆಯುವರು; ಪತ್ನಿ ಇಲ್ಲದವನು ಪತ್ನಿಯನ್ನು ಬಂಧುಹೀನನಾದವನು ಬಂಧುವನ್ನು ಈ ಸ್ತೋತ್ರದ ಸ್ಮರಣೆಮಾತ್ರದಿಂದಲೇ ಪಡೆಯುವನು. ರೋಗಿಯಾದವನು ರೋಗದಿಂದ ಬಿಡುಗಡೆಹೊಂದುವನು; ಬಂಧನಕ್ಕೊಳಗಾದವನು ಬಂಧಮುಕ್ತನಾಗುವನು. ಭಯದಿಂದ ಕೂಡಿದವನು ಭಯರಹಿತನಾಗುವನು; ಪಾತಕಿಯು ಪಾಪದಿಂದ ಬಿಡುಗಡೆಹೊಂದುವನು.

**ಪ್ರಸೀದ ದೇವಿ ದೇವೇಶಿ ಪ್ರಸೀದ ಹರಿವಲ್ಲಭೇ ।**
**ಕ್ಷೀರೋದಮಥನೋದ್ಭೂತೇ ತುಲಸಿ ತ್ವಾಂ ನಮಾಮ್ಯಹಮ್ ॥**

–ಪದ್ಮಪುರಾಣ (೫/೫೬/೧೬)

**ತುಲಸೀ ಶ್ರೀಮತಿ ಶ್ರೇಷ್ಠೇ ವೃಂದೇ ವೃಂದಾವನೇ ಪ್ರಿಯೇ ।**
**ಸ್ಥಿರೀಭವ ಮಮ ಪ್ರೀತ್ಯೈ ಯಾವದಾಚಂದ್ರತಾರಕಮ್ ॥**

– ಬೃಹದ್ಧರ್ಮಪುರಾಣ (೧/೮/೧೮)

ತುಲಸೀ! ನೀನು ಶ್ರೀಯಿಂದ ಕೂಡಿದವಳು, ಶ್ರೇಷ್ಠಳಾದವಳು, ವೃಂದಾವನದಲ್ಲಿ ನೆಲೆಸಿದವಳು, ಪ್ರಿಯಳಾದವಳು. ನೀನು ಚಂದ್ರ ಹಾಗೂ ನಕ್ಷತ್ರಗಳಿರುವವರೆಗೂ ವೃಂದಾವನದಲ್ಲಿ ನನ್ನ ಪ್ರೀತಿಗೆಂದು ಸ್ಥಿರವಾಗಿ ನೆಲೆಸು.

***

## ತುಲಸೀದರ್ಶನದ ಫಲ

ನೋಟದಿಂದಲೇ ಸಿದ್ಧಿನೀಡುವ ಹಿರಿಮೆ ತುಲಸಿಯದು. ಬೆಂಕಿಯು ನೋಡಿದ ಮಾತ್ರಕ್ಕೆ ಸುಡದು; ನೀರು ದರ್ಶನಮಾತ್ರದಿಂದ ಬಾಯಾರಿಕೆಯನ್ನು ಪರಿಹರಿಸದು; ಅನ್ನ ನೋಡಿದ ಮಾತ್ರಕ್ಕೆ ಹೊಟ್ಟೆತುಂಬಿಸದು. ಆದರೆ ತುಲಸಿ ಹಾಗಲ್ಲ; ದರ್ಶನ ಮಾತ್ರದಿಂದಲೇ ಅನಿಷ್ಟನಿವೃತ್ತಿಯಿಂದ ಇಷ್ಟಪ್ರಾಪ್ತಿಯವರೆಗೆ ಬಗೆಬಗೆಯ ಫಲಗಳನ್ನು ನೀಡುವ ಹಿರಿಮೆ ತುಲಸಿಯದು. ದರ್ಶನ ಮಾತ್ರದಿಂದ ಸಿದ್ಧಿ ನೀಡುವ ಹಿರಿಮೆ ಭಗವಂತನಾದ ಶ್ರೀಹರಿಯದು. ಭಗವತ್ಸನ್ನಿಧಾನದಿಂದ ಕೂಡಿದ ಭಾಗವತರ ದರ್ಶನವೂ ಸಹ ಮಾನ್ಯವೇ ಆಗಿದೆ. ಆದರೆ, ತುಲಸಿಯ ದರ್ಶನ ಸಕಲ ಪಾಪಹರ ಎಂಬುದಾಗಿ ವಿಶೇಷ ಪ್ರಸಿದ್ಧಿಯನ್ನು ಪಡೆದಿದೆ: ''ಯಾ ದೃಷ್ಟಾ ನಿಖಿಲಾಘಸಂಘಶಮನೀ''.

ತಥಾ ಭವತು ಕಲ್ಯಾಣಿ ಪ್ರಸಾದಾತ್ ಸರ್ವದೇಹಿನಾಮ್ ।
ದರ್ಶನಾತ್ ತವ ದೇವೇಶಿ ಮುಕ್ತಿಮಂತೇ ದದಾಮ್ಯಹಮ್ ॥
ಸಾ ಕಥಂ ತುಲಸೀ ಲೋಕೈಃ ಪೂಜ್ಯತೇ ವಂದ್ಯತೇ ನ ಹಿ ।
ದರ್ಶನಾದೇವ ಯಸ್ಯಾಸ್ತು ದಾನಂ ಕೋಟಿಗವಾಂ ಭವೇತ್ ॥
–ಪದ್ಮಪುರಾಣ (ಸೃಷ್ಟಿಖಂಡ ೫೯/೫೬/೬)

ಮಂಗಳೆಯೇ! ನಿನ್ನ ದರ್ಶನಮಾತ್ರದಿಂದ ಸಕಲ ದೇಹಗಳಿಗೂ ನಾನು ಕೊನೆಯಲ್ಲಿ ಮುಕ್ತಿಯನ್ನು ನೀಡುವೆನು. ದರ್ಶನಮಾತ್ರದಿಂದಲೇ ಕೋಟಿ ಗೋದಾನ ಮಾಡಿದಪುಣ್ಯವನ್ನು ನೀಡುವ ಈ ತುಲಸಿಯನ್ನು ಜನರು ಎಂತು ತಾನೆ ಪೂಜಿಸರು ! ಎಂತು ತಾನೆ ವಂದಿಸರು !

***

## ತುಲಸೀನಾಮಾಷ್ಟಕಸ್ತೋತ್ರ

ವೃಂದಾಂ ವೃಂದಾವನೀಂ ವಿಶ್ವಪಾವನೀಂ ವಿಶ್ವಪೂಜಿತಾಮ್ ।
ಪುಷ್ಪಸಾರಾಂ ನಂದಿನೀಂ ಚ ತುಲಸೀಂ ಕೃಷ್ಣಜೀವನೀಮ್ ॥
ಏತನ್ನಾಮಾಷ್ಟಕಂ ಚೈತತ್ಸ್ತೋತ್ರಂ ನಾಮಾರ್ಥಸಂಯುತಮ್ ।
ಯಃ ಪಠೇತ್ತಾಂ ಚ ಸಂಪೂಜ್ಯ ಸೋಽಶ್ವಮೇಧಫಲಂ ಲಭೇತ್ ॥
– ಬ್ರಹ್ಮವೈವರ್ತಪುರಾಣ (೨/೨೨/೩೨, ೩೩)

ವೃಂದಾ, ವೃಂದಾವನೀ, ವಿಶ್ವಪಾವನೀ, ವಿಶ್ವಪೂಜಿತಾ, ಪುಷ್ಪಸಾರ, ನಂದಿನಿ, ತುಲಸೀ ಹಾಗೂ ಕೃಷ್ಣಜೀವನೀ – ಇವು ತುಲಸಿಯ ಎಂಟು ಹೆಸರುಗಳು. ಈ ನಾಮಾಷ್ಟಕ ಸ್ತೋತ್ರವನ್ನು ಅರ್ಥಸಮೇತವಾಗಿ ಯಾವನು ಪಠಿಸಿ ಪೂಜಿಸುವನೋ ಅವನು ಅಶ್ವಮೇಧಫಲವನ್ನು ಪಡೆಯುವನು.

★★★

## ತುಲಸಿಯು ಸರ್ವಥಾ ಅಲಭ್ಯವೆನ್ನಿಸಿದಾಗ ಧಾತ್ರಿಯ ಸೇವನೆ ವಿಹಿತ

ತುಲಸಿಯು ಭಗವತ್ಪೂಜೆಗೆ ಅತ್ಯಂತ ಅಗತ್ಯ; ಅದರ ದಳ, ಮಂಜರಿ, ಎಲೆ, ಕಾಷ್ಠ ಮೃತ್ತಿಕೆಗಳ ರೂಪದಿಂದಾದರೂ ತುಲಸಿಯನ್ನು ಸಂಪಾದಿಸಬೇಕು. ಈ ಎಲ್ಲ ವಿಧದಿಂದಲೂ ತುಲಸಿಯು ಅಲಭ್ಯವೆನ್ನಿಸಿದರೆ ನೆಲ್ಲಿಯ ಗಿಡದ ಬುಡದಲ್ಲಿ ಶ್ರೀಹರಿಯ ಪೂಜೆಯನ್ನು ಮಾಡಬೇಕು.

**ತುಲಸ್ಯಭಾವೇ ಕರ್ತವ್ಯಾ ಪೂಜಾ ಧಾತ್ರೀತಲೇ ಶುಭಾ ॥**

– ಸ್ಕಂದಪುರಾಣ (೨/೪/೧೨/೬೮)

ತುಲಸಿ ಇಲ್ಲವಾದಾಗ ಶುಭಕರವಾದ ಹರಿಪೂಜೆಯನ್ನು ಧಾತ್ರಿಯ ಕೆಳಗೆ ಮಾಡಬೇಕು.

**ತುಲಸ್ಯಾಶ್ಚೈವ ಧಾತ್ರ್ಯಾಶ್ಚ ಫಲೈಃ ಪತ್ರೈರ್ಹರಿಂ ಯಜೇತ್ ।**

– ಸ್ಕಂದಪುರಾಣ (೨/೪/೧೨/೮೫)

ತುಲಸಿಯ ಪತ್ರಗಳಿಂದ ಹಾಗೂ ಧಾತ್ರಿಯ ಫಲಗಳಿಂದ ಶ್ರೀಹರಿಯನ್ನು ಆರಾಧಿಸಬೇಕು.

★★★

## ಸ್ತ್ರೀಶೂದ್ರಾದಿಗಳು ತುಲಸಿಯ ಬೆಲೆಯನ್ನು ನೀಡಿ ಪೂಜಿಸಬಹುದು

ಸರ್ವಶ್ರೇಷ್ಠವಾದ ತುಲಸಿಯನ್ನು ಎಲ್ಲರೂ ಬೆಳೆಸಬಹುದು. ಸ್ತ್ರೀಯರಿಗೂ, ಶೂದ್ರರಿಗೂ ಸಹ ತುಲಸಿಗೆ ನೀರೆರೆಯುವ, ಬಗೆಬಗೆಯಲ್ಲಿ ಪೂಜೆ ಸಲ್ಲಿಸುವ ಅರ್ಹತೆ ಉಂಟು. ಆದರೆ ಅವರು ತುಲಸಿಯನ್ನು ತಮ್ಮ ಕೈಯಿಂದಲೇ ಬಿಡಿಸಿ, ದೇವರನ್ನು

ಪೂಜಿಸುವಂತಿಲ್ಲ. ದರ್ಶನ, ಸ್ಪರ್ಶನ, ವಂದನ, ಸ್ತೋತ್ರ ಮೊದಲಾದ ಸಕಲ ರೀತಿಯಲ್ಲೂ ಸಹ ಅವರು ತುಲಸಿಯನ್ನು ಪೂಜಿಸಲೇಬೇಕು. ಆದರೆ ತುಲಸಿಯಿಂದ ಅರ್ಚಿಸುವ ಪುಣ್ಯವನ್ನು ಪಡೆಯಲು ಮಾತ್ರ ಅದಕ್ಕೆ ಅಗತ್ಯವಾದ ಮೌಲ್ಯವನ್ನು ತುಲಸಿಯಿಂದ ಪೂಜಿಸಬಲ್ಲ ವಿಪ್ರಶ್ರೇಷ್ಠರಿಗೆ ನೀಡಿ, ಅವರ ಮೂಲಕ ತುಲಸಿಯನ್ನು ಶ್ರೀಹರಿಯನ್ನು ಅರ್ಚಿಸಿದ ಪುಣ್ಯವನ್ನು ಪಡೆದುಕೊಳ್ಳಬೇಕು ಎಂಬುದು ವಿಶೇಷ. ತುಲಸಿಯ ಬೆಲೆ ಎಂದರೆ ತುಲಸಿಯನ್ನು ಕೊಂಡುತರುವುದು ಎಂದಲ್ಲ ಅಥವಾ ಮಾರಾಟಕ್ಕೆಂದು ತುಲಸಿಯನ್ನು ಸಂಗ್ರಹಿಸುವುದೂ ಅಲ್ಲ, ಸಾಮಾನ್ಯವಾಗಿ ಅದಕ್ಕೆ ತಗಲಬಹುದಾದ ಲೋಕದ ದೃಷ್ಟಿಯ ಬೆಲೆಯನ್ನು ಮಾತ್ರ ಎಂದು ತಿಳಿಯಬೇಕು. ಸಾಲಿಗ್ರಾಮದ ಕ್ರಯ ವಿಕ್ರಯಗಳು ಹೇಗೆ ನಿಷಿದ್ಧವೋ ಹಾಗೆ ತುಲಸಿಯ ಕ್ರಯವಿಕ್ರಯಗಳು ಸಹ ನಿಷಿದ್ಧವೇ ಆಗಿವೆ ಎಂಬ ವಿಶೇಷವನ್ನು ತಿಳಿಯಬೇಕು.

**ಮೌಲ್ಯಾದಾನೀಯ ಪುಷ್ಪಾದ್ಯಂ ಸ್ತ್ರೀಶೂದ್ರಾದ್ಯೈರ್ದ್ವಿಜೋತ್ತಮ ।**
**ಬ್ರಾಹ್ಮಣೈಃ ಕಾರಯೇತ್ ಪೂಜಾಂ ಯಸ್ಮಾತ್ ಪುಷ್ಪಂ ಹರೇಃ ಪ್ರಿಯಮ್ ॥**

– ಪದ್ಮಪುರಾಣ

ಬೆಲೆತೆತ್ತು ಪುಷ್ಪಮೊದಲಾದವುಗಳನ್ನು ಸ್ತ್ರೀಯರು ಶೂದ್ರರು ಮೊದಲಾದವರು ಬ್ರಾಹ್ಮಣರ ಮೂಲಕವಾಗಿ ಪೂಜೆಯನ್ನು ಮಾಡಿಸಬೇಕು. ಈ ರೀತಿಯ ಪುಷ್ಪಪೂಜೆ ಶ್ರೀಹರಿಗೆ ಪ್ರಿಯವಾದುದು.

**ಸ್ತ್ರಿಯೋ ಮೌಲ್ಯೇನ ವಾ ವಿಷ್ಣುಂ ಪೂಜಯೇತ್ ತುಲಸೀದಲೈಃ ।**
**ತಾಃ ಸರ್ವಪಾತಕೈರ್ಮುಕ್ತಾ ಯಾಂತಿ ವಿಷ್ಣೋಃ ಪರಂ ಪದಮ್ ॥**

– ಪದ್ಮಪುರಾಣ, ಉತ್ತರಖಂಡ (೬); ಸ್ಕಂದಪುರಾಣ (೨/೪/೨೩/೧೫)

ಸ್ತ್ರೀಯರು ತುಲಸಿಗೆ ಸಲ್ಲುವ ಮೌಲ್ಯವನ್ನು ನೀಡಿ, ತುಲಸೀದಳಗಳಿಂದ ಶ್ರೀಹರಿಯನ್ನು ವಿಪ್ರರಮೂಲಕ ಪೂಜಿಸಬೇಕು. ಅದರಿಂದ ಅವರು ಸರ್ವಪಾತಕಗಳಿಂದ ಮುಕ್ತರಾಗಿ ವಿಷ್ಣುವಿನ ಪರಮಪದವನ್ನು ತಲುಪುವರು.

★★★

# ಮಾರ್ಜನದ ರೀತಿ

ತುಲಸಿಗೆ ವಿಹಿತವಾಗಿರುವ ಮಾರ್ಜನಕ್ಕೂ ವಿಧಿವಿಧಾನಗಳು ವಿಹಿತವಾಗಿರುವುದು ವಿಶೇಷ. ವಿಧಿಗೆ ಅನುಗುಣವಾಗಿ ಮಾಡುವಂತಹ ಮಾರ್ಜನವು ಮಾತ್ರವೇ ನಿಜ ಅರ್ಥದಲ್ಲಿ ಪುಣ್ಯಕರವೆನ್ನಿಸುವುದು.

**ಸ್ನಾತ್ವಾ ಪ್ರಮಾರ್ಜಯೇದ್ಯಸ್ತು ತತ್ಕ್ಷೇತ್ರಂ ಪಾಪನಾಶನಮ್ ।**
**ಸೋಽಪಿ ಪಾಪವಿನಿರ್ಮುಕ್ತಃ ಸ್ವರ್ಗಲೋಕಮವಾಪ್ನುಯಾತ್ ॥**- ಬೃಹದ್ಧರ್ಮ

ಸ್ನಾನವನ್ನು ಪೂರೈಸಿದ ಬಳಿಕವೇ ತುಲಸಿಗೆ ನೀರೆರೆಯುವುದು ಮೊದಲಾದ ಕಾರ್ಯಗಳನ್ನು ಮಾಡುವುದು ಪಾಪನಾಶಕವಾದ ಕಾರ್ಯ. ಅಂತಹವನು ಪಾಪದಿಂದ ಬಿಡುಗಡೆ ಪಡೆದು, ಸ್ವರ್ಗಲೋಕವನ್ನು ಹೊಂದುವನು.

**ಮಾತಸ್ತುಲಸಿ ಕಲ್ಯಾಣ ಸ್ಥಲಂ ತೇ ಸುಮನೋಹರಮ್ ।**
**ಕ್ರೀಡಂತ್ಯಾಗತ್ಯ ವಿಬುಧಾ ಮಾರ್ಜಯೇ ತತ್ಪ್ರಸೀದ ಮೇ ॥** - ಬೃಹದ್ಧರ್ಮ

ಅಮ್ಮಾ ತುಲಸಿ! ನೀನು ಮಂಗಳಕರಳು; ನಿನ್ನ ಬಳಿಯ ಮನೋಹರವಾದ ಸ್ಥಳಕ್ಕೆ ಆಗಮಿಸಿ ದೇವತೆಗಳು ವಿಹರಿಸುವರು. ನಾನು ಇದನ್ನು ಮಾರ್ಜನಮಾಡುವೆನು. ನನಗೆ ಪ್ರಸನ್ನಳಾಗು.

**ಮಂತ್ರೇಣಾನೇನ ತುಲಸೀಸ್ಥಾನಂ ಹಸ್ತಚತುಷ್ಟಯಮ್ ।**
**ಸಮ್ಮಾರ್ಜಯೇಚ್ಚತುರ್ದಿಕ್ಷು ಸಗೋಮಯಜಲೈರ್ಮುದಾ ॥** - ಬೃಹದ್ಧರ್ಮ

ಈ ಮಂತ್ರದಿಂದ ತುಲಸಿಯ ಸುತ್ತಲಿನ ನಾಲ್ಕು ಮೊಳದಷ್ಟು ಜಾಗವನ್ನು ನಾಲ್ಕು ದಿಕ್ಕುಗಳಲ್ಲೂ ಶುದ್ಧ ಜಲದಿಂದ ಸಾರಿಸಬೇಕು.

**ಪರೇಣಾಲಂಕೃತಂ ಪುಣ್ಯಂ ತುಲಸೀಕಾನನಂ ನರಃ ।**
**ದೃಷ್ಟ್ವಾ ತು ಮೋದತೇ ವಿಷ್ಣೋಃ ಸಾರೂಪ್ಯಂ ಪ್ರಾಪ್ಯತೇ ನರಃ ॥**

- ಪದ್ಮಪುರಾಣ, ಕ್ರಿಯಾಯೋಗಸಾರ

ಇತರರು ಅಲಂಕರಿಸಿ ತುಲಸಿಯ ವನವನ್ನು ಭಕ್ತಿಯಿಂದ ನೋಡುವ ನರನೂ ಸಹ ಆನಂದಕ್ಕೆ ಪಾತ್ರನಾಗುವನು. ವಿಷ್ಣುವಿನ ಸಾರೂಪ್ಯವನ್ನು ಪಡೆಯುವನು.

**ಪಾಪಾನಿ ಯಾನಿ ರವಿಸೂನುಪಟಸ್ಥಿತಾನಿ**
**ಗೋಬ್ರಹ್ಮಬಾಲಪಿತೃಮಾತೃವಧಾದಿಕಾನಿ ।**
**ನಶ್ಯಂತಿ ತಾನಿ ತುಲಸೀವನದರ್ಶನೇನ**
**ಗೋಕೋಟಿದಾನಸದೃಶಂ ಫಲಮಾಪ್ನುವಂತಿ ॥**

- ಪದ್ಮಪುರಾಣ, ಕ್ರಿಯಾಯೋಗಸಾರ

ಸೂರ್ಯಪುತ್ರನಾದ ಯಮನ ಪಟ್ಟಿಯಲ್ಲಿ ಇರುವಂತಹ ಗೋಹತ್ಯೆ, ಬ್ರಹ್ಮಹತ್ಯೆ, ಬಾಲಹತ್ಯೆ, ಪಿತೃಹತ್ಯೆ, ಮಾತೃಹತ್ಯೆ ಮೊದಲಾದ ಸಕಲ ಪಾಪಗಳೂ ಸಹ ತುಲಸಿ ಕಾನನವನ್ನು ದರ್ಶನ ಮಾಡುತ್ತಲೇ ನಾಶಹೊಂದುವವು; ಕೋಟಿ ಗೋದಾನಗಳನ್ನು ಮಾಡಿದಂತಹ ಫಲವು ಸಹ ಲಭಿಸುವುದು.

★★★

## ತುಲಸಿಯ ಅರ್ಘ್ಯಮಂತ್ರ

**ಶ್ರಿಯಃಪ್ರಿಯೇ ಶ್ರಿಯಾವಾಸೇ ನಿತ್ಯಂ ಸತ್ಕೃತಶೋಭಿತೇ ।**
**ಭಕ್ತ್ಯಾ ದತ್ತಂ ಮಯಾ ದೇವಿ ಗ್ರಹಾಣಾಽರ್ಘ್ಯಂ ನಮೋಽಸ್ತು ತೇ ॥**

– ಪದ್ಮಪುರಾಣ

ಮಹಾಲಕ್ಷ್ಮಿಗೆ ಪ್ರಿಯಳೇ, ಮಹಾಲಕ್ಷ್ಮಿಗೆ ನೆಲೆಯಾದವಳೇ, ನಿತ್ಯದಲ್ಲೂ ಸತ್ಕೃತಳಾಗಿ ಶೋಭಿಸುವವಳೇ, ದೇವಿ! ನಾವು ಭಕ್ತಿಯಿಂದ ನೀಡಿದ ಅರ್ಘ್ಯವನ್ನು ಸ್ವೀಕರಿಸು; ನಿನಗೆ ನಮಸ್ಕಾರವು.

★★★

## ಮಧ್ಯಾಹ್ನ ತುಲಸೀಚಯನ ಮಾಡಬಾರದು

ತುಲಸಿಯನ್ನು ಬಿಡಿಸಲು ನಿಷಿದ್ಧ ತಿಥಿ, ಮೊದಲಾದವುಗಳ ವಿವರ ಈಗಾಗಲೇ ಬಂದಿದೆ. ವಿಹಿತ ದಿನಗಳಲ್ಲೂ ಸಹ ತುಲಸಿಯನ್ನು ಮಧ್ಯಾಹ್ನದ ಮುನ್ನವೇ ಬಿಡಿಸಬೇಕು. ಮಧ್ಯಾಹ್ನದ ಬಳಿಕ ತುಲಸಿಯನ್ನು ಬಿಡಿಸುವುದು ಅತ್ಯಂತ ನಿಷಿದ್ಧ. ಎಂತಹ ಆಪತ್ಕಾಲದಲ್ಲೂ ಮಧ್ಯಾಹ್ನದ ಬಳಿಕ ತುಲಸಿಯನ್ನು ಸರ್ವಥಾ ಬಿಡಿಸಕೂಡದು.

**ಮಧ್ಯಾಹ್ನಾತ್ ಪರತಸ್ತಸ್ಯ ಹರೇಃ ಪೂಜಾರತಾಸ್ತಥಾ ।**
**ಛಿಂದಂತಿ ತುಲಸೀಂ ಮೂಢಾ ಅಧೋ ಗಚ್ಛಂತಿ ಮಾನವಾಃ ॥** – ಪದ್ಮಪುರಾಣ

ಮಧ್ಯಾಹ್ನದ ಬಳಿಕ ದೇವಪೂಜೆಗೆ ತೊಡಗುವ ಅಭ್ಯಾಸದ ಜನರು ಹಾಗೆಯೇ ಮಧ್ಯಾಹ್ನದ ಬಳಿಕ ತುಲಸಿಯನ್ನು ಬಿಡಿಸುವ ಮೂರ್ಖರೂ ಅಧೋಗತಿಗೆ ತೆರಳುವರು.

**ಮಧ್ಯಾಹ್ನಾದುತ್ತರಂ ಯಸ್ತು ಹರಿಪೂಜಾಪರಃ ಸ್ಥಿತಃ ।**
**ತುಲಸೀಚ್ಛೇದನಾನ್ಮೂರ್ಖೋ ಅಧೋಗತಿಮವಾಪ್ನುಯಾತ್ ॥**– ಪದ್ಮಪುರಾಣ

ಮಧ್ಯಾಹ್ನದ ಬಳಿಕ ಶ್ರೀಹರಿಯನ್ನು ಪೂಜಿಸುವ ಅಭ್ಯಾಸದವನು ಹಾಗೂ ತುಲಸಿಯನ್ನು ಬಿಡಿಸುವ ಮೂರ್ಖನೂ ಅಧೋಗತಿಯನ್ನು ತಪ್ಪದೆ ಹೊಂದುವನು.

★★★

## ಇಂತಹ ತುಲಸಿಯನ್ನು ದೇವರಿಗೆ ಸಮರ್ಪಿಸಕೂಡದು

ತುಲಸಿಯನ್ನು ಬಿಡಿಸುವ ಕಾಲದ ನಿಯಮದಂತೆ, ಬಿಡಿಸಿದ ದಳಗಳನ್ನು ತರಲು ಸಹ ನಿಯಮಗಳು ವಿಹಿತವಾಗಿವೆ. ಅವುಗಳನ್ನು ಅರಿತು ಪಾಲಿಸಿದಾಗಲೇ, ತುಲಸಿಯ ಆರಾಧನೆಯ ಪೂರ್ಣಪ್ರಯೋಜನವನ್ನು ಪಡೆಯಲು ಸಾಧ್ಯ. ವಿಧಿಯನ್ನು ಉಲ್ಲಂಘಿಸಿ

ಮಾಡುವ ಯಾವುದೇ ಕಾರ್ಯವು ಸಹ ಒಳಿತಿಗಿಂತ ಕೆಡುಕಿಗೇ ಸಾಧನವಾಗುವುದು ಎಂಬ ಎಚ್ಚರಿಕೆಯನ್ನು ಸಾಧಕನಾದವನು ತಿಳಿದಿರಬೇಕು.

**ಆಹೃತಾನ್ಯತ್ರ ಚೋಪ್ತಾನಿ ಚೌರ್ಯಾಲ್ಲಬ್ಧಾನಿ ನಾರ್ಪಯೇತ್ ।**
**ಶೂದ್ರಾಹೃತಾನಿ ಭೂಮೌ ಚ ಗಲಿತಾನಿ ತಥೈವ ಚ ॥** – ಪದ್ಮಪುರಾಣ

ಕದ್ದು ತಂದು ಬೆಳೆಸಿದ ತುಲಸಿ, ಕದ್ದು ತಂದ ತುಲಸಿ, ಶೂದ್ರರ ಕೈಯಿಂದ ತರುವ ತುಲಸಿ, ಭೂಮಿಯ ಮೇಲೆ ಉದುರಿಬಿದ್ದ ತುಲಸಿ ಪೂಜೆಗೆ ನಿಷಿದ್ಧ.

**ಏರಂಡಾರ್ಕಜಪತ್ರೇಶು ಆಹೃತಾನಿ ಕರೇಣ ಚ ।**
**ಪಟಾಹೃತಾನಿ ಯಾನಿ ಸ್ಯುರ್ವರ್ಜಯೇತ್ ತಾನಿ ಯತ್ನತಃ ॥** – ಪದ್ಮಪುರಾಣ

ಹರಳು, ಎಕ್ಕ ಮೊದಲಾದ ಎಲೆಗಳಲ್ಲಿ ತಂದ ತುಲಸಿ, ಕೈಯಲ್ಲಿ ಹಿಡಿದು ತಂದ ತುಲಸಿ, ವಸ್ತ್ರದಲ್ಲಿ ಕಟ್ಟಿ ತರುವ ತುಲಸಿ ಪೂಜೆಗೆ ಸರ್ವಥಾ ವಿಹಿತವೆನ್ನಿಸದು.

**ಶೂದ್ರಾಹೃತಾನಾಂ ತುಲಸೀಪುಷ್ಪಾಣಾಂ ಚ ಸಮರ್ಪಣಮ್ ।**
**ಅನ್ಯಾವಶಿಷ್ಟನಿರ್ಮುಕ್ತಪುಷ್ಪಾಣಾಂ ಚ ಸಮರ್ಪಣಮ್ ॥** – ಪದ್ಮಪುರಾಣ

ಶೂದ್ರರು ತರುವ ತುಲಸಿ, ಹೂವುಗಳ ಸಮರ್ಪಣೆ ವಿಹಿತವಲ್ಲ. ಅದರಂತೆ ಇತರರು ಪೂಜಿಸಿ, ಉಳಿದ ಪುಷ್ಪಗಳಿಂದ ಪೂಜಿಸುವುದು ಸಹ ತರವಲ್ಲ.

**ನಿರ್ಗಂಧಕುಸುಮಾರ್ಚಾ ಚ ತುಲಸೀರಹಿತಾರ್ಚನಮ್ ।**
**ಅಪ್ರಕ್ಷಾಲ್ಯ ಚ ಪುಷ್ಪಾಣಿ ಪ್ರಕ್ಷಾಲ್ಯ ತುಲಸೀಂ ತಥಾ ॥** – ಪದ್ಮಪುರಾಣ

ನಿರ್ಗಂಧ ಕುಸುಮಗಳ ಪೂಜೆ ವಿಹಿತವಲ್ಲ. ತುಲಸಿ ಇಲ್ಲದ ಪೂಜೆಯೂ ನಿಷಿದ್ಧ. ಹೂವುಗಳನ್ನು ತೊಳೆಯದೆ ಪೂಜಿಸುವುದು ಸರಿಯಲ್ಲ; ತೊಳೆದು ತುಲಸಿಯನ್ನು ಪೂಜಿಸುವುದು ಸಹ ಯುಕ್ತವಲ್ಲ.

**ತುಲಸೀಗ್ರಹಣಂ ಕೃತ್ವಾ ಯತ್ರ ಯತ್ರ ವ್ರಜಂತಿ ಚ ।**
**ತತ್ರ ತತ್ರ ಹರಿರ್ಯಾತಿ ಗೌರ್ಯಥಾ ಸುತವಲ್ಲಭಾ ॥** – ಸ್ಕಂದಪುರಾಣ

ತುಲಸಿಯನ್ನು ಬಿಡಿಸಿ ಸಾಗುವವನು ಎಲ್ಲೆಲ್ಲಿ ತೆರಳುವನೋ ಅಲ್ಲಲ್ಲಿಗೆ ಅವನೊಡನೆ ಶ್ರೀಹರಿಯು ತಾನೂ ತೆರಳುವನು; ಕರುವಿನ ಮೇಲಿನ ಪ್ರೀತಿಯಿಂದ ಗೋವು ಹೇಗೋ ಹಾಗೆ

★★★

## ತುಲಸೀಸಹಿತವಾಗಿಯೇ ಸಮರ್ಪಣೆ

**ದದ್ಯಾತ್ ಶ್ರೀಹರಯೇ ನಿತ್ಯಂ ಯದ್ಯತ್ ಪ್ರಿಯಮಥಾತ್ಮನಃ ।**
**ಪ್ರಕ್ಷಿಪ್ಯ ತುಲಸೀಂ ಪ್ರೋಕ್ಷ್ಯ ಸಪ್ತಕೃತ್ವೋಽಭಿಮಂತ್ರಯೇತ್ ॥** – ಸ್ಕಂದಪುರಾಣ

ಶ್ರೀಹರಿಗೆ ಪ್ರಿಯವಾದದ್ದನ್ನು ಹಾಗೆ ತನಗೆ ಇಷ್ಟವಾದದ್ದನ್ನು ನಿತ್ಯವೂ ತುಲಸಿ ಸಮೇತವಾಗಿಯೇ ಶ್ರೀಹರಿಗೆ ಏಳು ಬಾರಿ ಅಭಿಮಂತ್ರಣಮಾಡಿ ಸಮರ್ಪಿಸಬೇಕು.

***

## ಏಕಾದಶಿಯಂದು ತುಲಸೀ

ತುಲಸಿಯ ಭಕ್ಷಣೆ ಪ್ರತಿನಿತ್ಯದಲ್ಲೂ ವಿಹಿತ. ತೀರ್ಥಸ್ವೀಕಾರಕಾಲದಲ್ಲಿ ಮೂರು, ಪಂಚಪ್ರಾಣಾಹುತಿಯಲ್ಲಿ ಮೂರು, ಭೋಜನಾನಂತರ ಒಂದು ಮೊದಲಾಗಿ ತುಲಸಿಯನ್ನು ಸ್ವೀಕರಿಸಬೇಕು. ಧಾರಣೆಗೂ ಸೇರಿದಂತೆ ಒಟ್ಟು ಪ್ರತಿನಿತ್ಯ ಹದಿನೆಂಟು ತುಲಸೀದಳಗಳು ಗ್ರಾಹ್ಯ ಎಂದು ಶಾಸ್ತ್ರಗಳು ಸಾರಿವೆ. ಆದರೆ ಏಕಾದಶಿಯಂದು ಮಾತ್ರ ತುಲಸಿಯನ್ನು ಯಾವರೀತಿಯಲ್ಲೂ ಸ್ವೀಕರಿಸಕೂಡದು. ಅಭಿಷೇಕಜಲದಲ್ಲೂ ಸಹ ಸ್ವಾದೂದಕವನ್ನು ಸಿದ್ಧಪಡಿಸಿಕೊಳ್ಳಕೂಡದು. ಇತರ ದಿವಸಗಳಲ್ಲಿ ತುಲಸಿಯ ಗ್ರಹಣ ಎಷ್ಟು ಪುಣ್ಯಕರವೋ ಏಕಾದಶಿಯಂದು ಅದರ ಗ್ರಹಣ ಮಾತ್ರ ಅಷ್ಟೇ ಪಾಪಕರ ಎಂಬುದು ವಿಶೇಷಾಂಶ.

**ತುಲಸೀಮಿಶ್ರಿತಂ ತೋಯಮೇಕಾದಶ್ಯಾಂ ಕದಾಚನ ।**
**ನ ಗ್ರಾಹ್ಯಂ ವಿಷ್ಣುಭಕ್ತೈಸ್ತು ವ್ರತಂ ನಶ್ಯೇಚ್ಚ ಪಾರ್ವತಿ ॥** – ಸ್ಕಂದಪುರಾಣ

ವಿಷ್ಣುಭಕ್ತರಾದವರು ತುಲಸಿಮಿಶ್ರಿತವಾದ ನೀರನ್ನು ಏಕಾದಶಿಯಂದು ಎಂದೂ ಸ್ವೀಕರಿಸಕೂಡದು; ಹಾಗೆ ಮಾಡಿದಲ್ಲಿ ವ್ರತವು ವ್ಯರ್ಥವಾಗುವುದು.

**ಏಕಾದಶ್ಯಾಂ ತಿಥೌ ಪುಣ್ಯೇ ತುಲಸೀಂ ಭಕ್ಷಯಂತಿ ಯೇ ।**
**ತೇ ಯಾಂತಿ ನರಕಂ ಘೋರಂ ಮದ್ದ್ರೋಹೇಣ ನರಾಧಮಾಃ ॥**

– ಸ್ಕಂದಪುರಾಣ

ಪುಣ್ಯಕರವಾದ ಏಕಾದಶಿತಿಥಿಯಂದು ಯಾರು ತುಲಸಿಯನ್ನು ಭಕ್ಷಿಸುವರೋ ಅಂತಹ ನರಾಧಮರು ನನ್ನ ದ್ರೋಹಿಗಳೆನ್ನಿಸಿ ಘೋರ ನರಕಕ್ಕೆ ತೆರಳುವರು.

**ವಿಷ್ಣುಪಾದೋದಕಂ ದಿವ್ಯಂ ತ್ರಿಃ ಪಿಬೇತ್ ಸತತಂ ಬುಧಃ ।**
**ಏಕಾದಶ್ಯಾಮೇಕವಾರಂ ತೀರ್ಥಂ ತು ತುಲಸೀಂ ವಿನಾ ॥** – ಸ್ಕಂದಪುರಾಣ

ಪ್ರತಿನಿತ್ಯದಲ್ಲೂ ವಿಷ್ಣುಪಾದೋದಕವನ್ನು ತುಲಸಿಮಿಶ್ರಿತವಾಗಿ ಮೂರು ಸಲ ಪಾನಮಾಡಬೇಕು. ಏಕಾದಶಿಯಂದು ತುಲಸಿಯಿಲ್ಲದ ತೀರ್ಥವನ್ನು ಒಂದು ಬಾರಿ ಮಾತ್ರ ಸ್ವೀಕರಿಸಬೇಕು.

***

# ತುಲಸಿಯನ್ನು ಬಿಡಿಸುವ ವಿಧಾನ

ತುಲಸಿಯ ಮಹಿಮೆ ಪೂಜೆಯಿಂದ ಪ್ರಾರಂಭಿಸಿ, ಔಷಧಿ ಮೊದಲಾದ ಅನೇಕ ರೀತಿಯಲ್ಲಿ ಪುರಾಣಗಳಲ್ಲಿ ನಿರೂಪಿತವಾಗಿದೆ. ಪೂಜೆಗಾಗಿಯಂತು ತುಲಸಿ ಕಡ್ಡಾಯ. ಆದರೆ ಇತರ ಅನೇಕರು ಮುಖ್ಯವಾಗಿ ಆಯುರ್ವೇದದ ಔಷಧಿ ತಯಾರಕರು ಹಾಗೂ ತುಲಸಿಯನ್ನು ಮನೆಯಲ್ಲಿಯೇ ಔಷಧಿಯಂತೆ ಬಳಸುವವರು ಅಪಾರಸಂಖ್ಯೆಯಲ್ಲಿ ಸಿಕ್ಕುವರು. ವಿಹಿತವಾದ ದಿನಗಳಂದು ಬಿಡಿಸಿದ ತುಲಸಿಯು ಮಾತ್ರವೇ ನಿರೀಕ್ಷಿತವಾದ ಫಲವನ್ನು ನೀಡುವುದು. ನಿಷಿದ್ಧ ತಿಥಿ, ವಾರ ಮೊದಲಾದವುಗಳಂದು ಬಿಡಿಸಿದ ತುಲಸಿಯು ಸತ್ಫಲವನ್ನು ನೀಡುವುದಿಲ್ಲ, ಬದಲಿಗೆ ಅನರ್ಥವನ್ನೇ ಉಂಟು ಮಾಡುವುದು. ಆಪತ್ಕಾಲದಲ್ಲಿ ಪೂಜೆಗೋಸ್ಕರ ತುಲಸಿಯನ್ನು ಬಿಡಿಸಲು ಅವಕಾಶವಿದೆ. ಆದರೆ ದ್ವಾದಶಿಯಂದು ಮಾತ್ರ ಸರ್ವಥಾ [ಶಿ.೫]ತುಲಸಿಯನ್ನು ಬಿಡಿಸಲೇಕೂಡದು. ಔಷಧಿ ಮೊದಲಾದ ಇತರ ಕಾರ್ಯಗಳಿಗೆ ಉಪಯೋಗಿಸುವವರು ಸಹ ಶ್ರೀಹರಿಗೆ ಸಮರ್ಪಿಸಿದ ನಿರ್ಮಾಲ್ಯತುಲಸಿಯನ್ನೇ ಉಪಯೋಗಿಸಬೇಕು. ಶ್ರೀಹರಿಗೆ ಸಮರ್ಪಿಸದ ತುಲಸಿಯು ಯಾವುದೇ ರೀತಿಯಲ್ಲೂ ಸಹ ವಿಹಿತವಾಗಿಲ್ಲ. ಔಷಧಿ ಮೊದಲಾದ ಇತರ ಕಾರ್ಯಗಳಲ್ಲಿ ತುಲಸಿಯನ್ನು ಬಿಡಿಸುವವರು ದ್ವಾದಶಿಯಂದು ಮಾತ್ರವಲ್ಲದೆ, ಇತರ ದಿನಗಳಲ್ಲೂ ಸಹ ತುಲಸಿಯನ್ನು ಸರ್ವಥಾ ಬಿಡಿಸಕೂಡದು. ನಿಷಿದ್ಧದಿನಗಳಲ್ಲಿ ಬಿಡಿಸಿದ ತುಲಸಿಯನ್ನು ಶ್ರೀಹರಿಗೆ ಸಮರ್ಪಿಸಿದ ಬಳಿಕವೂ ಸಹ ಔಷಧಿ ಮೊದಲಾದ ಇತರ ಕಾರ್ಯಗಳಿಗೆ ಬಳಸುವಂತಿಲ್ಲ ಎಂಬುದು ಇದರ ಅರ್ಥ. ಇಂದಿನ ದಿನಗಳಲ್ಲಿ ಆಯುರ್ವೇದವು ಅಷ್ಟಾಗಿ ಪರಿಣಾಮಕಾರಿಯಾಗಿಲ್ಲ ಎಂಬುದು ಅನೇಕರ ಅನುಭವ. ಅದಕ್ಕೆ ವಿಹಿತರೀತಿಯಲ್ಲಿ ತುಲಸಿಯನ್ನು ಬಿಡಿಸದೆ, ಔಷಧಿಗಳಲ್ಲಿ ಬಿಡಿಸುವುದು ಒಂದು ಕಾರಣ ಎಂದು ಇದರಿಂದ ತಿಳಿಯುವುದು.

**ನಖಸ್ಪರ್ಶೇನ ರಹಿತಂ ಚಿನುಯಾತ್ ಶುಚಿನಾ ಸ್ವಯಮ್ ॥**

ಸ್ನಾನಮಾಡಿ ಶುಚಿಯಾಗಿ ನಖಗಳ ಸ್ಪರ್ಶವಾಗದಂತೆ ತುಲಸಿಯನ್ನು ಬಿಡಿಸಬೇಕು.

**ಇತ್ಯಾಹೃತ್ಯ ತತಃ ಸ್ನಾತ್ವಾ ಪೂಜಯೇತ್ ಪುರುಷೋತ್ತಮಮ್ ।**
**ಅಸ್ನಾತ್ವಾ ಪೂಜಯೇದ್ಯಸ್ತು ತಸ್ಯ ಪೂಜಾ ವೃಥಾ ಭವೇತ್ ॥**

– ನರಸಿಂಹಪುರಾಣ

---

ಶಿ.೫ ಚಿತ್ತಶುದ್ಧನು ಆಗಿ ಮುಂಝಾನೆಯೊಳು ತುಲಸಿ-
ಸ್ತೋತ್ರವನೆ ಮಾಡುತ್ತ ದಿವ್ಯವಾಗಿಹ ತ್ರಿದಳ
ಪ್ರತ್ಯೇಕ ಪಾತ್ರೆಯಲ್ಲಿ ತೆಗೆದು ಶೋಧಿಸಿ ತುಂಬಿ ವಿತ್ತಾದಿಯಲಿ ತಾರದೆ।
ಮತ್ತೆ ವಸ್ತ್ರದಿ ಹಸ್ತ ಶಿಲೆಯರ್ಕ ಏರಂಡ-
ಪತ್ರದಲಿ ತಾರದಲೆ ಭೂಮಿಯೊಳಗಿಡದೆ ಪೂ-
ರ್ವೋತ್ತರಭಿಮುಖವಾಗಿ ಭಕ್ತಿಯಿಂ ತರಬೇಕು ಹೊತ್ತು ಮೀರಿಸಲಾಗದೊ ॥ – ಶ್ರೀವಿಜಯದಾಸರು

ತುಲಸಿಯನ್ನು ಬಿಡಿಸಿದ ಬಳಿಕ ಪುನಃ ಸ್ನಾನಮಾಡಿ ಶ್ರೀಹರಿಯನ್ನು ಪೂಜಿಸಬೇಕು; ಹಾಗೆ ಸ್ನಾನಮಾಡದೆ, ಪೂಜೆಮಾಡಿದಲ್ಲಿ ಆ ಪೂಜೆ ವ್ಯರ್ಥವೆನ್ನಿಸುವುದು.

ಭಾನುವಾರೇ ಭೃಗೌ ಭೌಮೇ ವ್ಯತೀಪಾತೇ ಯುಗಾದಿಷು ।
ನಾಹರೇತ್ ತುಲಸೀಪತ್ರಂ ಮಧ್ಯಾಹ್ನೋಪರಿ ವೈಧೃತೌ ॥
ಸಂಕ್ರಾಂತೌ ಪಕ್ಷಯೋರಂತೇ ದ್ವಾದಶ್ಯಾಂ ನಿಶಿ ಸಂಧ್ಯಯೋಃ ।
ತುಲಸೀಂ ಯೇ ವಿಚಿನ್ವಂತಿ ತೇ ವೈ ಬ್ರಹ್ಮಹಣಃ ಸ್ಮೃತಾಃ ॥

- (ಸ್ಮೃತಿ)

ಭಾನುವಾರ, ಮಂಗಳವಾರ, ಶುಕ್ರವಾರ, ವ್ಯತೀಪಾತ, ವೈಧೃತಿ, ಯುಗಾದಿಗಳು, ಸಂಕ್ರಾಂತಿ, ಪೂರ್ಣಿಮಾ, ಅಮಾವಾಸ್ಯಾ, ದ್ವಾದಶೀ, ಮಧ್ಯಾಹ್ನದ ಅನಂತರದ ಕಾಲ, ರಾತ್ರಿಕಾಲ, ಸಂಧ್ಯಾಕಾಲಗಳು, ಪರ್ವಕಾಲಗಳು – ಇವೆಲ್ಲ ತುಲಸ್ಯಾಹರಣಕ್ಕೆ ನಿಷಿದ್ಧವಾಗಿವೆ; ಈ ದಿನಗಳಲ್ಲಿ ತುಲಸಿಯನ್ನು ಬಿಡಿಸುವವರು ಬ್ರಹ್ಮಹತ್ಯಾಪಾಪಕ್ಕೆ ಗುರಿಯಾಗುವರು.

ದ್ವಾದಶಿಯಂದು ಹೊರತು ತುಲಸಿಯನ್ನು ಬಿಡಿಸುವುದು ಸರ್ವಥಾ ನಿಷಿದ್ಧ.

ನಿಷಿದ್ಧತಿಥಿವಾರೇಷು ತುಲಸ್ಯಾಹರಣಂ ಮುನೇ ।
ವೈಷ್ಣವಾನಾಂ ನ ದೋಷಾಯ ವಿಷ್ಣೋಃ ಪ್ರೀತಿಕರತ್ವತಃ ॥

- ವಿಷ್ಣುರಹಸ್ಯ

ವೈಷ್ಣವರು ಶ್ರೀಹರಿಯ ಪೂಜೆಗೆಂದು ನಿಷಿದ್ಧ ತಿಥಿ, ವಾರಗಳಲ್ಲಿ ತುಲಸಿಯನ್ನು ಬಿಡಿಸುವುದು ದೋಷಕ್ಕೆ ಕಾರಣವಾಗುವುದಿಲ್ಲ; ಶ್ರೀವಿಷ್ಣುಪ್ರೀತಿಗಾಗಿ ಬಿಡಿಸುವುದರಿಂದ ಅದಕ್ಕೆ ವಿನಾಯಿತಿ.

ಸಂಕ್ರಾಂತ್ಯಾದಿನಿಷೇಧಸ್ತು ಪರೇಷಾಂ ಪರಿಕೀರ್ತಿತಃ ।
ಕ್ವಚಿನ್ನ ತುಲಸೀಂ ಛಿಂದ್ಯಾತ್ ದ್ವಾದಶ್ಯಾಮೇವ ವೈಷ್ಣವಃ ॥

- ಗರುಡಪುರಾಣ

ಸಂಕ್ರಾಂತಿ ಮೊದಲಾದ ದಿನಗಳಂದು ತುಲಸಿಯನ್ನು ಬಿಡಿಸಕೂಡದು ಎಂಬ ವಿಧಿ ಅವೈಷ್ಣವರಿಗೆ ಅನ್ವಯಿಸುವುದು; ಆದರೆ ವೈಷ್ಣವರು ಸಹ ದ್ವಾದಶಿಯಂದು ಮಾತ್ರ ಎಂತಹ ಪ್ರಸಂಗಗಳಲ್ಲೂ ತುಲಸಿಯನ್ನು ಬಿಡಿಸಲೇಕೂಡದು.

# [೩೬]ತುಲಸಿಯು ಸರ್ವಥಾ ಅಲಭ್ಯವಾದಾಗ ಪೂಜಾವಿಧಿ

**ಸ್ಮೃತಾ ಶ್ರುತಾ ಚ ತುಲಸೀ ಶ್ರಾವಿತಾ ವಾ ನ ಸಂಶಯಃ।**
**ಮಹಾಪಾತಕಯುಕ್ತಾಂಶ್ಚ ಪುನಾತಿ ಕಿಮು ಭಕ್ಷಿತಾ ॥**

– ಸ್ಕಂದಪುರಾಣ (೮೨/೭೬)

**ಪತ್ರಾಲಾಭೇ ತು ಶಾಖಾಭಿಃ ಶಾಖಾಲಾಭೇ ಶಿಫಾಲವೈಃ।**
**ಶಿಫಾಭಾವೇ ಮೃದಾ ತತ್ರ ಭಕ್ತಿಮಾನ್ ಅರ್ಚಯೀತ ಮಾಮ್ ॥**

– ಮಹಾಭಾರತ.

ಆಪತ್ಕಾಲದಲ್ಲಿ ತುಲಸೀದಳಗಳು ದೊರೆಯದೆ ಹೋದಲ್ಲಿ, ಅದರ ಎಲೆ, ಶಿಫಾ, ಕಾಷ್ಠ ಮೃತ್ತಿಕಾ ಮೊದಲಾದವುಗಳಿಂದಾದರೂ ಭಗವಂತನನ್ನು ಅರ್ಚಿಸಬೇಕು; ನಿರ್ಮಾಲ್ಯ ತುಲಸಿಯನ್ನು ತೊಳೆದು ಮತ್ತೆ ಅದನ್ನು ಪೂಜೆಗೆ ಉಪಯೋಗಿಸಬಹುದು; ಸರ್ವಥಾ ತುಲಸಿಯು ಅಲಭ್ಯವಾದರೆ 'ತುಲಸಿ'ಯ ಸ್ಮರಣೆಯನ್ನಾದರೂ ಮಾಡಬೇಕು.

**ತುಲಸೀಮಂಜರೀ ಗ್ರಾಹ್ಯಾ ತದಭಾವೇ ತು ಪಲ್ಲವಃ।**
**ತದಭಾವೇ ತು ಪತ್ರಂ ಸ್ಯಾತ್ ತದಭಾವೇ ತು ಕಾಷ್ಠಿಕಾ ॥**

**ತದಭಾವೇ ತು ಮೂಲಂ ಸ್ಯಾತ್ ತದಭಾವೇ ತು ಮೃತ್ತಿಕಾ।**
**ಮೃತ್ತಿಕಾಯಾ ಅಭಾವೇ ತು 'ತುಲಸೀ' ಶಬ್ದ ಉಚ್ಯತೇ ॥**

– ಪುರಾಣವಚನ

ತುಲಸಿದಳಗಳು ಅಲಭ್ಯವಾದಾಗ ತುಲಸಿಯ ಮಂಜರಿಯು ವಿಹಿತ. ಅದೂ ಇಲ್ಲಾದಾದಾಗ ಎಸಳು, ಎಸಳು ಲಭಿಸದಾದಾಗ ಎಲೆ, ಅದೂ ದೊರೆಯದಿದ್ದಲ್ಲಿ ತುಲಸೀಕಾಷ್ಠ ಅದು ಲಭಿಸದಿದ್ದಾಗ ತುಲಸೀಬೇರು, ಅದೂ ದೊರೆಯದಿದ್ದಾಗ ತುಲಸಿಯ ಮೃತ್ತಿಕೆ, ಮೃತ್ತಿಕೆಯೂ ದೊರೆಯದಿದ್ದಲ್ಲಿ ತುಲಸೀ ಎಂಬ ಹೆಸರನ್ನಾದರೂ (ತುಲಸೀಂ ಸಮರ್ಪಯಾಮಿ ಎಂಬುದಾಗಿ ಎಂದು ಅರ್ಥ) ಉಚ್ಚರಿಸಿ ಪೂಜಿಸಬೇಕು.

---

೩೬ ದಳವಿದ್ದರೇ ಒಳಿತು ಇಲ್ಲದಿದ್ದರೆ ಕಾಷ್ಠ
ಎಲೆ ಮೃತ್ತಿಕೆಗಳಿಂದ ಪೂಜೆಮಾಡಲಿಬಹುದು
ತುಲಸಿ ನಿರ್ಮಾಲ್ಯವಾದರೂ ತ್ರಿವಾರದಲಿ ತೊಳೆತೊಳೆದು ಏರಿಸಲಿಬಹುದು।
ತುಲಸಿ ಒಣಗಿದ್ದರೂ ಲೇಶ ದೋಷಗಳಿಲ್ಲ।
ತುಲಸಿ ವಿರಹಿತವಾದ ಪೂಜೆಯದು ಸಲ್ಲದು।
ತುಲಸಿ ತುಲಸಿ ಎಂದು ಸ್ಮರಣೆಯಾದರು ಮಾಡಿ ಜಲಜಾಕ್ಷನರ್ಚಿಸಿರೈಯ್ಯ। – ಶ್ರೀ ವಿಜಯದಾಸರು

**ಶುಷ್ಕಂ ಪರ್ಯುಷಿತಂ ವಾऽಪಿ ನ ನಿರ್ಮಾಲ್ಯಂ ತ್ರಿವಾಸರೈಃ ।**
**ಪ್ರಕ್ಷಾಲಯಿತ್ವಾ ತುಲಸೀಂ ಪೂಜಯೇಚ್ಚ ಸದಾ ಹರಿಮ್ ॥**
**ನಿರ್ಮಾಲ್ಯಮಪಿ ವೈ ಗ್ರಾಹ್ಯಂ ತುಲಸೀಹೇಮಪುಷ್ಪಕಮ್ ।**
**ಶುದ್ಧೋದಕೇನ ಸಂಪ್ರೋಕ್ಷ್ಯ ವಿಷ್ಣವೇ ಚ ಸಮರ್ಪಯೇತ್ ॥** - ಸ್ಮೃತಿ

ತುಲಸಿಯು ಹಳೆಯದಾಗಿದ್ದರೂ ದೋಷವಿಲ್ಲ. ಮೂರು ದಿನದವರೆಗೆ ಅದು ನಿರ್ಮಾಲ್ಯವೆನ್ನಿಸದು. ಅಂತಹ ತುಲಸಿಯನ್ನು ತೊಳೆದು ಶ್ರೀಹರಿಯನ್ನು ಪೂಜಿಸಬಹುದು. ತುಲಸಿ ಹಾಗೂ ಸುವರ್ಣಪುಷ್ಪವನ್ನು ನಿರ್ಮಾಲ್ಯವಾಗಿದ್ದರೂ ಸಹ ತೊರೆಯಬೇಕಿಲ್ಲ. ಶುದ್ಧೋದಕದಿಂದ ಅವುಗಳನ್ನು ಪ್ರೋಕ್ಷಿಸಿ ಶ್ರೀಹರಿಗೆ ಸಮರ್ಪಿಸಬೇಕು.

★★★

## ತುಲಸಿಯನ್ನು ತೊಳೆಯುವುದು ನಿಷಿದ್ಧ

ಶ್ರೀಹರಿಗೆ ತುಲಸಿಯು ಅತ್ಯಂತ ಪ್ರಿಯವಾದ ಪವಿತ್ರ ವಸ್ತು. ಆದ್ದರಿಂದ ಅದನ್ನು ತೊಳೆಯದೆ ಹಾಗೇ ಸಮರ್ಪಿಸಬೇಕು. ತುಲಸಿಯನ್ನು ತೊಳೆದಲ್ಲಿ ಬ್ರಹ್ಮಹತ್ಯೆಗೆ ಸಮನಾದ ಪಾಪ ಒದಗಿ ನರಕಪ್ರಾಪ್ತಿಯಾಗುವುದು

**ಮಮ ಪ್ರಿಯಾಂ ತು ತುಲಸೀಂ ಪ್ರಕ್ಷಾಲ್ಯ ತು ಕರೋತಿ ಯಃ ।**
**ಸ ಪಾಪೀ ಬ್ರಹ್ಮಘಾತೀ ಸ್ಯಾನ್ನಿರಯಂ ಸೋऽಧಿಗಚ್ಛತಿ ॥**
- ಸ್ಕಂದಪುರಾಣ (೮೨/೭೮)

ನನಗೆ ಪ್ರಿಯವಾದ ತುಲಸಿಯನ್ನು ಅಶುದ್ಧವೆಂಬ ಭಾವನೆಯಿಂದ ಯಾವನು ತೊಳೆದು ಪೂಜೆಗೆ ಉಪಯೋಗಿಸುವವನೋ ಅವನು ಬ್ರಹ್ಮಘಾತಕಿ ಎನ್ನಿಸುವನು; ನರಕಕ್ಕೂ ತೆರಳುವನು.

**ಮಾನುಷಂ ದುರ್ಲಭಂ ಪ್ರಾಪ್ಯ ನ ಸೇವಂತೇ ತ್ವಿಮಾಂ ಹಿ ಯೇ ।**
**ತೇಷಾಂ ತು ತರುಗುಲ್ಮಾನಾಮಂತರಂ ನ ವಿಲೋಕಯೇ ॥**
- ಸ್ಕಂದಪುರಾಣ (೮೨/೮೧)

ದುರ್ಲಭವಾದ ಮಾನವ ಶರೀರವನ್ನು ಹೊಂದಿ ಯಾರು ತುಲಸಿಯನ್ನು ಸೇವಿಸು- ವುದಿಲ್ಲವೋ ಅವರಿಗೂ, ಮರಗಿಡಗಳಿಗೂ ಯಾವುದೇ ವ್ಯತ್ಯಾಸವೂ ನನಗೆ ತೋರುವುದಿಲ್ಲ.

**ತುಲಸೀಂ ಯಃ ಸಮಾಲೋಕ್ಯ ನಾರ್ಚಯಂತಿ ನ ವಂದತೇ ।**
**ತಮೇವ ಪಾಪಕರ್ಮಾಣಂ ಪ್ರೇತನಾಥ ನಿಪೀಡಯ ॥**
- ಸ್ಕಂದಪುರಾಣ (೮೨/೮೨)

ತುಲಸಿಯನ್ನು ನೋಡಿ ಯಾವನು ಪೂಜಿಸುವುದಿಲ್ಲವೋ, ಸ್ತುತಿಸಿ ನಮಸ್ಕರಿಸುವುದಿಲ್ಲವೋ ಅಂತಹ ಪಾಪಿಯನ್ನು ಎಲೈ ಯಮನೇ ನೀನು ಬಹಳವಾಗಿ ಪೀಡಿಸು.

**ತುಲಸ್ಯಾಂ ಸ್ತೂಯಮಾನಾಯಾಂ ಯೋऽವಜ್ಞಾಂ ಕುರುತೇ ನರಃ।**
**ಪಾಪಾತ್ಮಾ ಸ ಭವೇತ್ ತಂ ವೈ ವೈವಸ್ವತ ನಿಪೀಡಯ ॥**

– ಸ್ಕಂದಪುರಾಣ (೮೨/೮೩)

ಎಲೈ ಯಮನೇ ತುಲಸಿಯಸ್ತೋತ್ರ ನಡೆದಿದ್ದಾಗ ಅದಕ್ಕೆ ಅಗೌರವವನ್ನು ತೋರುವನೋ ಅವನು ಪಾಪಿ ಎನ್ನಿಸುವನು. ಅಂತಹವನನ್ನು ನೀನು ಪೀಡಿಸು.

**ಯೇ ಯೇ ಕುರ್ವಂತಿ ತುಲಸೀಮೃತ್ತಿಕಾಲಂಘನಂ ಪದಾ।**
**ದುಷ್ಕರ್ಮನಿರತಾ ನಿತ್ಯಂ ತಾನ್ ನಿಪೀಡಯ ಪಾಪಿನಃ ॥**

– ಸ್ಕಂದಪುರಾಣ (೮೨/೮೪)

ಯಾರು ಯಾತು ತುಲಸಿಯ ಮೃತ್ತಿಕೆಯನ್ನು ಕಾಲಿನಿಂದ ದಾಟುವರೋ ಅಂತಹ ದುಷ್ಕಾರ್ಯದಲ್ಲಿ ತೊಡಗಿದ ಪಾಪಿಗಳನ್ನು ಸದಾ ಪೀಡಿಸಿರಿ.

**ಶೀಘ್ರಂ ಪಿತೃಪತೇ ಗಚ್ಛ ಮನ್ನಿಯೋಗಂ ತಥಾ ಕುರು।**
**ಇತ್ಯುಕ್ತ್ವಾ ವಿಸಸರ್ಜೈನಂ ದೇವೋ ರುಕ್ಮಿಪತಿಃ ಸ್ವಯಮ್ ॥**

– ಸ್ಕಂದಪುರಾಣ (೮೨/೮೫)

***

## ಸಂಧ್ಯಾವಂದನಾದಿಗಳಲ್ಲಿ ತುಲಸಿಯ ಮಹತ್ತ್ವ

**ಸಂಧ್ಯಾಯೈ ವಂದನೇ ಚಾಪಿ ತರ್ಪಣಾದಿಕಕರ್ಮಸು।**
**ದರ್ಭಾಭಾವೇ ತಿಲಾಭಾವೇ ತುಲಸ್ಯೇವ ಫಲಪ್ರದಾ ॥** – ಪದ್ಮಪುರಾಣ

ಸಂಧ್ಯಾವಂದನೆಯ ಕಾಲದಲ್ಲಿ, ತರ್ಪಣಾದಿ ಕಾಲದಲ್ಲಿ ದರ್ಭೆಗಳು, ತಿಲಗಳು ಇಲ್ಲವಾದಾಗ ತುಲಸಿಯೇ ಫಲಪ್ರದವೆನ್ನಿಸುವುದು.

***

## ತುಲಸೀ ಬಿಡಿಸುವ ವಿಧಿವಿಧಾನಗಳು

**ತುಲಸೀಂ ಯೇ ವಿಚಿನ್ವಂತಿ ಧನ್ಯಾಸ್ತೇ ಕರಪಲ್ಲವಾಃ।**

– ಪದ್ಮಪುರಾಣ, ಸೃಷ್ಟಿಖಂಡ (೫/೫೯/೮)

ತುಲಸಿಯನ್ನು ಬಿಡಿಸುವವರು ಧನ್ಯರು; ಅವರ ಕೈಗಳು ಸಹ ಸಾರ್ಥಕ.

**ಯನ್ನಾತಿಕಂಪತೇ ಶಾಖಾ ನ ಭಂಗಂ ಯಾತಿ ವಾ ತಥಾ ।**
**ಚಿನುಯಾತ್ ತುಲಸೀಪತ್ರಾಣ್ಯೇವಂ ವಿಷ್ಣುಪ್ರಿಯೋ ಭವೇತ್ ॥**

– ಬೃಹದ್ಧರ್ಮಪುರಾಣ (೧/೮/೪೬)

ತುಲಸಿಯರೆಂಬೆಗಳು ಅಲುಗಾಡದಂತೆ, ಮುರಿಯದಂತೆ ಎಚ್ಚರಿಕೆಯಿಂದ ತುಲಸಿ-ಯನ್ನು ಬಿಡಿಸಬೇಕು ಅದರಿಂದ ಶ್ರೀಹರಿಯು ಪ್ರೀತನಾಗುವನು.

★★★

## ತುಲಸೀಯನ್ನು ಬಿಡಿಸಲು ನಿಷಿದ್ಧ ಕಾಲ

**ನೋ ಛಿಂದ್ಯಾತ್ ತುಲಸೀಂ ವಿಪ್ರಾ ದ್ವಾದಶ್ಯಾಂ ವೈಷ್ಣವಃ ಕ್ವಚಿತ್ ।**

– ವಿಷ್ಣುಧರ್ಮೋತ್ತರಪುರಾಣ

**ದ್ವಾದಶ್ಯಾಂ ತುಲಸೀಪತ್ರಂ ಧಾತ್ರೀಪತ್ರಂ ತು ಕಾರ್ತಿಕೇ ।**
**ಲುನಾತಿ ಸ ನರೋ ಗಚ್ಛೇನ್ನಿರಯಾನತಿಗರ್ಹಿತಾನ್ ॥**

– ಸ್ಕಂದಪುರಾಣ (೨/೪/೨೩/೨೨)

ದ್ವಾದಶಿಯಂದು ತುಲಸಿದಳವನ್ನು ಬಿಡಿಸಕೂಡದು. ಕಾರ್ತಿಕಮಾಸದಲ್ಲಿ ಧಾತ್ರೀಪತ್ರ-ವನ್ನು ಬಿಡಿಸಕೂಡದು. ಒಂದು ವೇಳೆ ಹಾಗೆ ಬಿಡಿಸಿದಲ್ಲಿ ಅಂತಹ ಮಾನವನು ನರಕಕ್ಕೆ ಹೋಗುವನು.

**ಧಾತ್ರೀಪತ್ರಂ ಕಾರ್ತಿಕೇ ಚ ದ್ವಾದಶ್ಯಾಂ ತುಲಸೀದಲಮ್ ।**
**ಚಿನೋತಿ ಯೋ ನರೋ ಗಚ್ಛೇನ್ನಿರಯಂ ಯಾತನಾಮಯಮ್ ॥**

– ಪದ್ಮಪುರಾಣ (೩/೨೨/೨೩)

ಕಾರ್ತೀಕಮಾಸದಲ್ಲಿ ಧಾತ್ರೀಪತ್ರವನ್ನು ದ್ವಾದಶಿಯಂದು ತುಲಸಿಯನ್ನು ಯಾವ ಮಾನವರು ಬಿಡಿಸುವನೋ ಅವನು ಯಾತನೆಯುಳ್ಳ ನರಕಕ್ಕೆ ತೆರಳುವನು.

**ನಾಶುಚಿಃ ಸಂಸ್ಪೃಶೇದೇತಾಂ ನೋಪಾನಚ್ಚರಣೋಽಪಿ ವಾ ।**
**ಪಶ್ಚಿಮಾಸ್ಯೋ ನ ಚಿನುಯಾತ್ ಪಕ್ಷಾಂತದಾದಶೀಷ್ವಪಿ ॥** – ಬೃಹದ್ಧರ್ಮ

ತುಲಸಿಯನ್ನು ಮೈಲಿಗೆಯಿಂದ ಮುಟ್ಟಕೂಡದು. ಪಾದರಕ್ಷೆಯನ್ನು ಹಾಕಿಕೊಂಡು ಸ್ಪರ್ಶಿಸಕೂಡದು. ಹಿಮ್ಮುಖದಿಂದ ತುಲಸಿಯನ್ನು ಬಿಡಿಸಕೂಡದು. ಎರಡು ಪಕ್ಷದಲ್ಲಿನ ದ್ವಾದಶಿಯಂದೂ ಬಿಡಿಸಕೂಡದು.

**ವೈಧೃತೌ ಚ ವ್ಯತೀಪಾತೇ ಭೌಮಭಾರ್ಗವಭಾನುಷು ।**
**ಪರ್ವದ್ವಯೇ ಚ ಸಂಕ್ರಾಂತೌ ದ್ವಾದಶ್ಯಾಂ ಸೂತಕದ್ವಯೇ ।**
**ತುಲಸೀಂ ಯೇ ವಿಚಿನ್ವಂತಿ ತೇ ಛಿಂದಂತಿ ಹರೇಃ ಶಿರಃ ॥** – ವಿಷ್ಣುಧರ್ಮೋತ್ತರ

ವೈಧೃತಿ, ವ್ಯತೀಪಾತ ಯೋಗಗಳಿರುವ ದಿನಗಳಂದು ಹಾಗೂ ಮಂಗಳವಾರ, ಭಾನುವಾರ ಹಾಗೂ ಶುಕ್ರವಾರಗಳಂದು ಹುಣ್ಣಿಮೆ ಅಮಾವಾಸ್ಯೆಗಳಂದು, ಸಂಕ್ರಾಂತಿ

ಗಳಂದು ಜನನಾಶೌಚ, ಮರಣಾಶೌಚದ ದಿನಗಳಂದು ಯಾರು ತುಲಸಿಯನ್ನು ಬಿಡಿಸುವರೋ ಅವರು ಶ್ರೀಹರಿಯ ತಲೆಯನ್ನು ಛೇದಿಸಿದ ಪಾಪಕ್ಕೆ ಗುರಿಯಾಗುವರು.

**ನೈವ ಛಿಂದ್ಯಾತ್ ರವೌ ದೂರ್ವಾಂ ತುಲಸೀಂ ನಿಶಿ ಸಂಧ್ಯಯೋಃ ।**
**ರವಿವಾರಂ ವಿನಾ ದೂರ್ವಾಂ ತುಲಸೀಂ ದ್ವಾದಶೀಂ ವಿನಾ ।**
**ಜೀವಿತಸ್ಯಾವಿನಾಶಾಯ ಪ್ರವಿಚಿನ್ವೀತ ಧರ್ಮವಿತ್ ॥** - ವಿಷ್ಣುಧರ್ಮೋತ್ತರ

ರವಿವಾರದಂದು ಗರಿಕೆಯನ್ನು ಬಿಡಿಸಕೂಡದು. ತುಲಸಿಯನ್ನು ರಾತ್ರಿಯಲ್ಲಿ, ಸಂಧ್ಯಾಕಾಲಗಳಲ್ಲಿ ಬಿಡಿಸಕೂಡದು. ದೀರ್ಘಕಾಲ ಬಯಸುವವನು ದ್ವಾದಶಿಯಂದು ಸರ್ವಥಾ ಬಿಡಿಸಲೇ ಕೂಡದು.

**ಸಂಕ್ರಾಂತ್ಯಾದಿನಿಷೇಧಸ್ತು ಪರೇಷಾಂ ಪರಿಕೀರ್ತಿತಃ ।**
**ಕಶ್ಚಿನ್ನ ತುಲಸೀಂ ಛಿಂದ್ಯಾತ್ ದ್ವಾದಶ್ಯಾಮೇವ ವೈಷ್ಣವಃ ॥** - ವಿಷ್ಣುರಹಸ್ಯ

ಸಂಕ್ರಾಂತಿ ಮೊದಲಾದ ದಿನಗಳಂದು ತುಲಸಿಯನ್ನು ಬಿಡಿಸಕೂಡದು ಎಂಬುದು ದೈತ್ಯರಿಗೆ ಅನ್ವಯಿಸುವ ಮಾತು; ವೈಷ್ಣವನು ದ್ವಾದಶಿಯಂದು ಮಾತ್ರ ತುಲಸಿಯನ್ನು ಬಿಡಿಸಲೇ ಕೂಡದು.

**ನಿಷಿದ್ಧತಿಥಿವಾರೇಷು ತುಲಸ್ಯಾಹರಣಂ ಮುನೇ ।**
**ವೈಷ್ಣವಾನಾಂ ನ ದೋಷಾಯ ವಿಷ್ಣೋಃ ಪ್ರೀತಿಕರತ್ವತಃ ॥** - ವಿಷ್ಣುರಹಸ್ಯ

ನಿಷಿದ್ಧ ತಿಥಿ ವಾರಗಳಂದು ತುಲಸಿಯನ್ನು ಬಿಡಿಸುವುದು ವೈಷ್ಣವರಿಗೆ ದೋಷ ವೆನ್ನಿಸದು.

**ದೇವಾರ್ಥಂ ತುಲಸೀಚ್ಛೇದೋ ಹೋಮಾರ್ಥಂ ಸಮಿಧಸ್ತಥಾ ।**
**ಇಂದುಕ್ಷಯೇ ನ ದುಷ್ಯೇತ ಗವಾರ್ಥೇ ತು ತೃಣಸ್ಯ ಚ ॥** - ರುದ್ರಯಾಮಲ

ದೇವಪೂಜೆಗಾಗಿ ತುಲಸಿಯನ್ನೂ ಬಿಡಿಸುವುದು ಹೋಮಕ್ಕಾಗಿ, ಕೃಷ್ಣಪಕ್ಷದಲ್ಲೂ ದೋಷವೆನ್ನಿಸದು. ಅದರಂತೆ ಗೋಗಳ ಸಂರಕ್ಷಣೆಗಾಗಿ ಹುಲ್ಲನ್ನು ಕತ್ತರಿಸುವುದು ಸಹ ದೋಷವಲ್ಲ.

**ಭಾನುವಾರಂ ವಿನಾ ದೂರ್ವಾಂ ತುಲಸೀಂ ದ್ವಾದಶೀಂ ವಿನಾ ।**
**ಜೀವಿತಸ್ಯಾವಿನಾಶಾಯ ನ ವಿಚಿನ್ವೀತ ಧರ್ಮವಿತ್ ॥** - ಗರುಡಪುರಾಣ

ಭಾನುವಾರದ ಹೊರತು ಉಳಿದ ದಿನಗಳಂದು ಗರಿಕೆಯನ್ನು ಬಿಡಿಸಬಹುದು. ದ್ವಾದಶಿಯ ಹೊರತು ಇತರ ದಿನಗಳಲ್ಲಿ ತುಲಸಿಯನ್ನು ಬಿಡಿಸಬಹುದು. ಆದ್ದರಿಂದ ಬದುಕು ಸಾರ್ಥವಾಗಲೆಂದು ಧರ್ಮಬಲ್ಲವನು ತುಲಸಿಯನ್ನು ಸರ್ವಥಾ ತೊರೆಯಕೂಡದು.

**ಅಸ್ನಾತ್ವಾ ತುಲಸೀಂ ಛಿತ್ವಾ ದೇವತಾಪಿತೃಕರ್ಮಣಿ ।**
**ತತ್ಸರ್ವಂ ನಿಷ್ಫಲಂ ಯಾತಿ ಪಂಚಗವ್ಯೇನ ಶುದ್ಧ್ಯತಿ ॥** - ಪದ್ಮಪುರಾಣ

ಸ್ನಾನಮಾಡದೆ ದೇವಕಾರ್ಯ, ಪಿತೃಕಾರ್ಯಗಳಿಗಾಗಿ ತುಲಸಿಯನ್ನು ಬಿಡಿಸುವುದು ಕಾರ್ಯಘಾತ ಎನ್ನಿಸುವುದು; ಆ ಪಾಪದ ಪರಿಹಾರಕ್ಕಾಗಿ ಪಂಚಗವ್ಯವನ್ನು ಸೇವಿಸಬೇಕು.

**ಅಸ್ನಾತ್ವಾ ತುಲಸೀಂ ಛಿತ್ವಾ ಯಃ ಪೂಜಾಂ ಕುರುತೇ ನರಃ ।**
**ಸೋऽಪರಾಧೀ ಭವೇತ್ ಸತ್ಯಂ ತತ್ ಸರ್ವಂ ನಿಷ್ಫಲಂ ಭವೇತ್ ॥**

– ವಾಯುಪುರಾಣ

ಯಾವ ಮಾನವನು ಸ್ನಾನಮಾಡದೆ ತುಲಸಿಯನ್ನು ಬಿಡಿಸಿ ಶ್ರೀಹರಿಯ ಪೂಜೆಯನ್ನು ಮಾಡುವನೋ ಅವನು ಅಪರಾಧಿ ಎನ್ನಿಸುವನು. ಅವನು ಮಾಡಿದ ಸಕಲವೂ ವ್ಯರ್ಥವಾಗುವುದು.

**ನಾಶುಚಿಃ ಸಂಸ್ಪೃಶೇದೇತಾಂ ನೋಪಾನಚ್ಚರಣೋऽಪಿ ಚ ।**
**ಪಶ್ಚಿಮಾಸ್ಯೋ ನ ಚಿನುಯಾತ್ ಪಕ್ಷಾಂತದ್ವಾದಶೀಷ್ವಪಿ ॥**
**ಸ್ಪೃಶೇನ್ನೈವ ಚ ಸಂಕ್ರಾಂತ್ಯಾಂ ನ ರಾತ್ರೌ ಸಾಯಮೇವ ಚ ।**

– ಬೃಹದ್ಧರ್ಮಪುರಾಣ (೧/೮/೪೭-೪೮)

ಅಶುಚಿಯಿಂದ ತುಲಸಿಯನ್ನು ಮುಟ್ಟಕೂಡದು. ಪಾದರಕ್ಷೆಗಳನ್ನು ಧರಿಸಿ ತುಲಸಿಯನ್ನು ಸ್ಪರ್ಶಿಸಕೂಡದು. ಹಿಮ್ಮುಖವಾಗಿಯೂ ತುಲಸಿಯನ್ನು ಬಿಡಿಸಕೂಡದು; ಹುಣ್ಣಿಮೆ, ಅಮಾವಾಸ್ಯೆಗಳಂದು, ಸಂಕ್ರಾಂತಿಯಂದು, ರಾತ್ರಿಯಲ್ಲಿ ಸಾಯಂಕಾಲದಲ್ಲಿ ತುಲಸಿಯನ್ನು ಮುಟ್ಟಕೂಡದು.

**ಪೂರ್ಣಿಮಾಯಾಮಮಾಯಾಂ ಚ ದ್ವಾದಶ್ಯಾಂ ರವಿಸಂಕ್ರಮೇ ।**
**ತೈಲಾಭ್ಯಂಗೇ ಚಾಸ್ನಾತೇ ಚ ಮಧ್ಯಾಹ್ನೇ ನಿಶಿ ಸಂಧ್ಯಯೋಃ ॥**
**ಅಶೌಚೇऽಶುಚಿಕಾಲೇ ವಾ ರಾತ್ರಿವಾಸೋऽನ್ವಿತೇ ನರಾಃ ।**
**ತುಲಸೀಂ ಯೇ ಚ ಛಿಂದಂತಿ ತೇ ಛಿಂದಂತಿ ಹರೇಃ ಶಿರಃ ॥**

– ಬ್ರಹ್ಮವೈವರ್ತಪುರಾಣ (೨/೨೧/೫೧-೫೩)

ಹುಣ್ಣಿಮೆಯಂದು, ಅಮಾವಾಸ್ಯೆಯಂದು, ದ್ವಾದಶಿಯಂದು, ಸಂಕ್ರಮಣದಿನದಂದು ಅಭ್ಯಂಜನ ದಿನದಂದು, ಸ್ನಾನಕ್ಕೆ ಮುಂಚಿನ ಕಾಲದಲ್ಲಿ ಮಧ್ಯಾಹ್ನಕಾಲದಲ್ಲಿ ರಾತ್ರಿ ಕಾಲದಲ್ಲಿ ಹಾಗೂ ಸಂಧ್ಯಾಕಾಲದಲ್ಲಿ, ಸೂತಕದ ಕಾಲದಲ್ಲಿ, ಮೈಲಿಗೆಯ ಸಮಯದಲ್ಲಿ, ಕಪ್ಪು ಬಟ್ಟೆಯನ್ನು ಧರಿಸಿ ಯಾವ ಮಾನವರು ತುಲಸಿಯನ್ನು ಬಿಡಿಸುವರೋ ಅವರು ಶ್ರೀಹರಿಯ ಶಿರಸ್ಸನ್ನು ಛೇದನಮಾಡಿದ ಪಾಪಕ್ಕೆ ಗುರಿಯಾಗುವರು.

**ತುಲಸೀಪತ್ರವಿಚ್ಛೇದಂ ಶಾಲಗ್ರಾಮೇ ಕರೋತಿ ಯಃ ।**
**ತಸ್ಯ ಜನ್ಮಾಂತರಂ ಭದ್ರೇ ಸ್ತ್ರೀವಿಚ್ಛೇದೋ ಭವಿಷ್ಯತಿ ।**
**ತುಲಸೀಪತ್ರವಿಚ್ಛೇದಂ ಶಂಖಂ ಹಿತ್ವಾ ಕರೋತಿ ಯಃ ।**
**ಭಾರ್ಯಾಹೀನೋ ಭವೇತ್ ಸೋऽಪಿ ರೋಗೀ ಸ್ಯಾತ್ ಸಪ್ತಜನ್ಮಸು ॥**

-ಶಿವಪುರಾಣ (೨/೫/೪೧/೫೩-೫೪), - ಬ್ರಹ್ಮವೈವರ್ತಪುರಾಣ (೨/೨೧/೬೫-೬೬)

ಸಾಲಿಗ್ರಾಮದ ಮೇಲೆ ತುಲಸಿಯ ಪತ್ರವನ್ನು ಛೇದಿಸಿ ಅರ್ಪಿಸುವವರು ಜನ್ಮಾಂತರಗಳಲ್ಲಿ ಭಕ್ತಿವಿಯೋಗವನ್ನು ಹೊಂದುವರು; ತುಲಸೀಪತ್ರವನ್ನು ಛೇದಿಸುವವನು ಹೆಂಡತಿಯನ್ನು ಕಳೆದುಕೊಳ್ಳುವನು, ಏಳು ಜನ್ಮಗಳಲ್ಲೂ ರೋಗಿಯಾಗಿ ಹುಟ್ಟುವನು.

# ನಿಷಿದ್ಧದಿವಸಗಳಲ್ಲಿ ಕೆಳಗೆ ಉದುರಿದ ತುಲಸಿದಲಗಳಿಂದ ಪೂಜೆಯು ವಿಹಿತ

ನಿಷಿದ್ಧೇ ದಿವಸೇ ಪ್ರಾಪ್ತೇ ಗೃಹ್ಣೀಯಾತ್ ಗಲಿತಂ ದಲಮ್ ।
ತೇನೈವ ಪೂಜಾಂ ಕುರ್ವೀತ ನ ಪೂಜಾ ತುಲಸೀಂ ವಿನಾ ॥ – ಸ್ಕಂದಪುರಾಣ

ಸರ್ವಥಾ ತುಲಸಿಯು ಲಭಿಸದಂತಹ ದಿನಗಳಲ್ಲಿ ಉದುರಿದ ತುಲಸಿಯ ದಳವನ್ನು ತೆರೆದುಕೊಂಡು ಅದರಿಂದ ಶ್ರೀಹರಿಯನ್ನು ಪೂಜಿಸಬೇಕು; ತುಲಸಿಯಿಲ್ಲದೆ ಸರ್ವಥಾ ಪೂಜೆ ಮಾಡುವಂತಿಲ್ಲ.

★★★

# ತುಲಸಿಯಿಲ್ಲದ ಪುಷ್ಪಾರ್ಚನೆಯು ನಿಷಿದ್ಧ

ಅನ್ಯೇಷಾಂ ಪುಷ್ಪರಾಶೀಣಾಂ ಸಹಸ್ರಂ ವಿಫಲಂ ಭವೇತ್ ।
ಅವಚೀಯ ಸ್ವಯಂ ಕುರ್ಯಾತ್ ಲಕ್ಷಪುಷ್ಪಾದಿಕಂ ಬುಧಃ ॥
ಸ ಏವ ಪೂರ್ಣಂ ಲಭತೇ ಫಲಂ ತುಲಸಿ ಪೂಜನಾತ್ ॥ – ಸ್ಕಂದಪುರಾಣ

ತುಲಸಿಯಿಲ್ಲದೆ ಇತರ ರಾಶಿರಾಶಿ ಪುಷ್ಪಗಳಿಂದ ಮಾಡಿದ ಸಹಸ್ರ ಪುಷ್ಪಾರ್ಚನೆಯು ವ್ಯರ್ಥವೆನ್ನಿಸುವುದು. ಸ್ವತಃ ಬಿಡಿಸಿತಂದ ಲಕ್ಷಪುಷ್ಪಗಳಿಂದ ಜ್ಞಾನಿಯಾದವನು ಪೂಜೆ ಮಾಡಬೇಕು. ಅವನಿಗೆ ಮಾತ್ರವೇ ತುಲಸಿಯಿಂದ ಪೂಜಿಸಿದ ಪೂರ್ಣಫಲವು ಲಭಿಸುವುದು.

★★★

# ಹದಿನೆಂಟು ದಳ ತುಲಸಿ ಪ್ರತಿನಿತ್ಯ ಗ್ರಾಹ್ಯ

ಚತುಃ ಕರ್ಣೇ ಮುಖೇ ಚೈಕಂ ನಾಭಾವೇಕಂ ತಥೋದರೇ ।
ಶಿರಸ್ಯೇಕಂ ತಥಾ ಪ್ರೋಕ್ತಂ ತೀರ್ಥೇ ತ್ರೀಣಿ ತಥ ಕ್ರಮಾತ್ ॥
ಅನ್ನೋಪರಿ ತಥಾ ಪಂಚ ಭೋಜನಾಂತೇ ದಲದ್ವಯಮ್ ।
ಏವಂ ಶ್ರೀತುಲಸೀ ಧಾರ್ಯಾ ಅಷ್ಟಾದಶ ಮನೀಷಿಭಿಃ ॥

– ಪದ್ಮಪುರಾಣ

ಮುಖದಲ್ಲಿ ನಾಲ್ಕು ದಳ, ನಾಭಿಯಲ್ಲಿ ಒಂದು ದಳ, ಉದರಲ್ಲಿ ಒಂದು ದಳ, ತಲೆಯ ಮೇಲೆ ಒಂದು ದಳ, ತೀರ್ಥದಲ್ಲಿ ಕ್ರಮವಾಗಿ ಮೂರು ದಳಗಳು, ಅನ್ನದ ಮೇಲೆ ಐದು ದಳಗಳು, ಭೋಜನ ಪೂರೈಸಿದ ಮೇಲೆ ಎರಡು ದಳಗಳು ಹೀಗೆ ಒಟ್ಟು ಹದಿನೆಂಟು ದಳಗಳನ್ನು ಜ್ಞಾನಿಗಳು ಧರಿಸಬೇಕು.

★★★

## ತುಲಸಿ ಇಲ್ಲದ ಪೂಜೆ ನಿಷಿದ್ಧ

**ತುಲಸೀರಹಿತಾಂ ಪೂಜಾಂ ನ ಗೃಹ್ಣಾತಿ ಹರಿಃ ಸದಾ ।**
**ಕಾಷ್ಠಂ ವಾ ಸ್ಪರ್ಶಯೇತ್ ತತ್ರ ನೋ ಚೇತ್ ತನ್ನಾಮ ವಾ ಭವೇತ್ ॥**
**ನ ತುಲಸ್ಯಾ ಗಣಾಧೀಶಮೇಕವಿಂಶತಿಕಂ ವಿನಾ ॥** – ತೃಚಭಾಸ್ಕರೇ

ತುಲಸಿಯಿಲ್ಲದ ಪೂಜೆಯನ್ನು ಶ್ರೀಹರಿಯು ಸರ್ವಥಾ ಸ್ವೀಕರಿಸನು. ತುಲಸಿಕಾಷ್ಠವನ್ನಾದರೂ ಸಮರ್ಪಿಸಬೇಕು. ಇಲ್ಲವಾದಲ್ಲಿ ಅದರ ಹೆಸರನ್ನಾದರೂ ಉಚ್ಚರಿಸಬೇಕು. ತುಲಸಿಯಿಂದ ಗಣೇಶನನ್ನು ಪೂಜಿಸಕೂಡದು.

★★★

## ತುಲಸಿಯನ್ನು ತೊಳೆಯಕೂಡದು

**ಮಮ ಪ್ರಿಯಾಂ ತು ತುಲಸೀಂ ಪ್ರಕ್ಷಾಲ್ಯ ತು ಕರೋತಿ ಯಃ ।**
**ಸ ಪಾಪೀ ಬ್ರಹ್ಮಘಾತೀ ಸ್ಯಾನ್ನಿರಯಂ ಸೋಽಧಿಗಚ್ಛತಿ ॥** – ಪದ್ಮಪುರಾಣ

ನನಗೆ ಪ್ರಿಯಳಾದ ತುಲಸಿಯನ್ನು ಯಾವನು ತೊಳೆದು ಪೂಜಿಸುವನೋ ಅವನು ಬ್ರಹ್ಮಘಾತಕಿ ಎನ್ನಿಸುವನು, ನರಕಕ್ಕೂ ಹೋಗುವನು.

**ತುಲಸೀದಲಜಾಂ ಮಾಲಾಮೇಕಾದಶ್ಯಾಂ ವಿಶೇಷತಃ ।**
**ಮುಚ್ಯತೇ ಸರ್ವಪಾಪೇಭ್ಯೋ ಯದ್ಯಪಿ ಬ್ರಹ್ಮಹಾ ಭವೇತ್ ।..** – ಪದ್ಮಪುರಾಣ

ತುಲಸೀದಳಗಳಿಂದ ಮಾಡಿದ ಮಾಲೆಯನ್ನು ವಿಶೇಷವಾಗಿ ಏಕಾದಶಿಯಂದು ಯಾವನು ಧರಿಸುವನೋ ಅವನು ಬ್ರಹ್ಮಘಾತಕಿಯಾಗಿ ಸಕಲ ಪಾಪಗಳಿಂದ ಬಿಡುಗಡೆ ಹೊಂದುವನು.

★★★

## ತುಲಸಿಯನ್ನು ಅವಮಾನಿಸುವುದು ಮಹಾಪಾತಕ

**ತುಲಸೀಕಾನನಂ ದೃಷ್ಟ್ವಾ ವಿಮುಖೋ ಯಾತಿ ಪಾತಕೀ ।**
**ನಿಶ್ಚಯಾನ್ಮುನಿಶಾರ್ದೂಲ ಬ್ರಹ್ಮಹಾ ಸ ನಿಗದ್ಯತೇ ॥** – ಪದ್ಮಪುರಾಣ

ತುಲಸೀವನವನ್ನು ನೋಡಿ ಪೂಜಿಸದೆ ತೆರಳುವವನು ಮಹಾಪಾತಕಿ ಎನ್ನಿಸಿ ನಿಶ್ಚಯವಾಗಿ ಬ್ರಹ್ಮಘಾತಕಿ ಎನ್ನಿಸುವನು.

**ತುಲಸೀ ನ ಯೇಷಾಂ ಮಮ ಪೂಜನಾರ್ಥಂ ಸಂಪಾದ್ಯತೈಕಾದಶಿಪುಣ್ಯವಾಸರೇ ।**
**ಧಿಗ್ಜೀವನಂ ಜೀವಿತಮರ್ಥಸಂತತಿಂ ತೇಷಾಂ ಸುಖಂ ನೇಹ ಚ ನಾಪ್ಯತಃ ಪರಮ್ ॥**
– ಪದ್ಮಪುರಾಣ

ಏಕಾದಶಿಯ ಪುಣ್ಯದಿನದಂದು ನನ್ನ ಪೂಜೆಗಾಗಿ ಯಾವನು ತುಲಸಿದಳಗಳನ್ನು ಸಂಪಾದಿಸುವುದಿಲ್ಲವೋ ಅವನ ಜೀವನಕ್ಕೆ ಧಿಕ್ಕಾರ. ಅವನಿಗೆ ಸಂಪತ್ತಾಗಲಿ, ಸಂತತಿಯಾಗಲಿ ಲಭಿಸುವುದಿಲ್ಲ. ಈ ಲೋಕದಲ್ಲಾಗಲಿ, ಪರಲೋಕದಲ್ಲಾಗಲಿ ಸುಖವು ದೊರೆಯುವುದಿಲ್ಲ.

# ತುಲಸಿಯ ಒಂದು ಎಲೆಯನ್ನು ಹಾಳುಮಾಡುವುದೂ ಸಹ ಮಹಾಪಾತಕ

ಉದ್ದಿಶ್ಯ ತುಲಸೀದೇವೀಮನ್ನದಾನಮನಾರತಮ್ ।
ಕೃತ್ವಾ ಕೃತ್ವಾನ್ನಪೂರ್ಣೇತಿ ಸಂಜ್ಞಾಂತರಮವಾಪ ಸಾ ।
ಏಕಸ್ಯಾಪಿ ನ ಪರ್ಣಸ್ಯ ತುಲಸ್ಯಾಃ ಸಹತೇ ಕ್ಷಯಮ್ ॥

– ಸ್ಕಂದಪುರಾಣ, ಪ್ರಭಾಸಖಂಡೇ, ತುಲಸೀಮಾಹಾತ್ಮ್ಯ(೮೨/೪೧)

ತುಲಸಿಯನ್ನು ಉದ್ದೇಶಿಸಿ, ಸದಾಕಾಲ ಅನ್ನದಾನವನ್ನು ಮಾಡಿದ್ದರಿಂದ ಪಾರ್ವತಿಗೆ ಅನ್ನಪೂರ್ಣೆ ಎಂಬ ಮತ್ತೊಂದು ಹೆಸರು. ಒಂದು ಎಲೆ ಹಾಳಾಗುವುದನ್ನು ಸಹ ತುಲಸಿಯು ಸಹಿಸುವುದಿಲ್ಲ.

★★★

# ತುಲಸಿಯ ಮಹಾಮಹಿಮೆ

ಯಾ ದೃಷ್ಟಾ ನಿಖಿಲಾಘಸಂಘಶಮನೀ ಸ್ಪೃಷ್ಟಾ ವಪುಃಪಾವನೀ
ರೋಗಾಣಾಮಭಿವಂದಿತಾ ನಿರಸನೀ ಸಿಕ್ತಾಽಂತಕತ್ರಾಸಿನೀ ।
ಪ್ರತ್ಯಾಸತ್ತಿವಿಧಾಯಿನೀ ಭಗವತಃ ಕೃಷ್ಣಸ್ಯ ಸಂರೋಪಿತಾ
ನ್ಯಸ್ತಾ ತಚ್ಚರಣೇ ವಿಮುಕ್ತಿಫಲದಾ ತಸ್ಯೈ ತುಲಸ್ಯೈ ನಮಃ ॥

ದರ್ಶನದಿಂದ ಸಕಲಪಾಪಗಳ ಹಿಂಡನ್ನು ಪರಿಹರಿಸುವ, ಸ್ಪರ್ಶನದಿಂದ ದೇಹವನ್ನು ಪಾವನಗೊಳಿಸುವ, ವಂದನೆಯಿಂದ ರೋಗಗಳನ್ನು ಗುಣಪಡಿಸುವ, ಪ್ರೋಕ್ಷಣದಿಂದ ಯಮನ ಭಯವನ್ನು ಪರಿಹರಿಸುವ, ಬೆಳೆಸುವುದರಿಂದ ಭಗವಂತನಾದ ಶ್ರೀಕೃಷ್ಣನಲ್ಲಿ ಭಕ್ತಿಯನ್ನು ಕರುಣಿಸುವ, ಶ್ರೀಹರಿಯ ಪಾದಕಮದಲ್ಲಿ ಸಮರ್ಪಣದಿಂದ ಮುಕ್ತಿ ಫಲವನ್ನು ನೀಡುವ ತುಲಸಿಗೆ ನಮಸ್ಕಾರವು.

॥ ಶ್ರೀಕೃಷ್ಣಾರ್ಪಣಮಸ್ತು ॥

ಸಮರ್ಪಿತಂ ಮಯಾ ಭವೇತ್ ಸುಮಧ್ವಸುತ್ತವಾಣಿನಾ ।
ರಮಾರಮೇಶಪಾದಯೋಃ ಪ್ರಭಂಜನಾಭಿಧಾಯುಜಾ ॥

✻✻✻✻✻✻

## ಪರಿಶಿಷ್ಟ – ೦೧

# ತುಲಸೀಮಾಹಾತ್ಮ್ಯ

ತುಲಸಿಯ ಮಹಾತ್ಮ್ಯವನ್ನು ಬಗೆಬಗೆಯಾಗಿ ನಿರೂಪಿಸಿದ ಪುರಾಣಗಳು ಅದನ್ನು ಅನೇಕ ಉಪಾಖ್ಯಾನಗಳ ಮೂಲಕ ಮತ್ತಷ್ಟು ದೃಢಪಡಿಸಿವೆ. ತುಲಸಿಯ ದರ್ಶನ, ಸ್ಪರ್ಶನ, ನಾಮಸಂಕೀರ್ತನೆ, ಸೇವನೆ, ಮೊದಲಾದವುಗಳು ಅತ್ಯಂತ ಪಾವನ ಎಂಬುದನ್ನು ನಿದರ್ಶನಗಳೊಂದಿಗೆ ನಿರೂಪಿಸುವ ಆ ಉಪಾಖ್ಯಾನಗಳು ಶ್ರದ್ಧೆಯನ್ನು ಮತ್ತಷ್ಟು ಹೆಚ್ಚಿಸಿ ವಿಶೇಷವಾಗಿ ತುಲಸಿಯ ಆರಾಧನೆಯ ದೀಕ್ಷೆಗೆ ಕಾರಣವಾಗುವುವು. ಇಂತಹ ಉಪಾಖ್ಯಾನಗಳನ್ನೆಲ್ಲಾ ಸಂಗ್ರಹಿಸಿರುವ ತುಲಸೀಮಹಾತ್ಮ್ಯ ಎಂಬ ಪ್ರಾಚೀನ ಹಸ್ತಪ್ರತಿಯೊಂದು ನಮ್ಮ ಶ್ರೀಜಯತೀರ್ಥ ಸಂಸ್ಕೃತ ಹಸ್ತಲಿಖಿತ ಗ್ರಂಥಾಲಯದಲ್ಲಿ ಉಪಲಬ್ಧವಿದೆ. ತುಂಬಾ ತ್ರುಟಿತವಾಗಿರುವ ಇದರಲ್ಲಿಯ ಉಪಾಖ್ಯಾನಗಳ ಸಂಗ್ರಹ ನಿರೂಪಣೆಯನ್ನು ಇಲ್ಲಿ ಕಾಣಬಹುದು. ಮೇಲ್ನೋಟಕ್ಕೆ ಕಥೆಗಳಂತೆ ತೋರುವ ಇವುಗಳು ವಾಸ್ತವವಾಗಿ ತಾತ್ತ್ವಿಕ ಮಹತ್ತ್ವವನ್ನು ಹೊಂದಿವೆ ಎಂಬುದು ಸರ್ವಮೂಲಗಳ ಬೆಳಕಿನಲ್ಲಿ ಅರ್ಥಮಾಡಿಕೊಂಡಾಗ ಸ್ಫುಟಪಡುವುದು. ಕಥೆಗಳ ನಿರೂಪಣೆ ದೀರ್ಘವಾಗಿದ್ದು, ಇಲ್ಲಿ ಅವುಗಳ ಸಂಗ್ರಹವನ್ನಷ್ಟೇ ಕೊಡಲಾಗಿದೆ.

## ೧. ತಾರುಣ್ಯ ನೀಡಿದ ತುಲಸಿಯ ಸೇವೆ (ಪದ್ಮಪುರಾಣ)

ಉಜ್ಜಯಿನಿಯಲ್ಲಿ ಉದಯನ ಎಂಬ ಅರಸನಿದ್ದ. ಶಮದಮಾದಿ ಸಂಪನ್ನನಾಗಿದ್ದ ಮಹಾತ್ಮ ಅವನು. ಅವನೊಮ್ಮೆ ಮಂತ್ರಿಗಳೊಂದಿಗೆ ಕೂಡಿಕೊಂಡು ತೀರ್ಥಯಾತ್ರೆಗೆಂದು ಯಮುನಾ ನದಿಗೆ ತೆರಳಿದ್ದ. ಅವನೊಂದಿಗೆ ಸುಶೀಲೆ ಎಂಬ ಅವನ ಪತ್ನಿಯೂ ತೆರಳಿದ್ದಳು. ಆ ವೇಳೆಗೆ ಅವರಿಬ್ಬರೂ ವೃದ್ಧರಾಗಿದ್ದರು, ಆದರೆ ಅವರಿಗಿನ್ನೂ ಸಂತತಿಯಾಗಿರಲಿಲ್ಲ. ಮಾರ್ಗದಲ್ಲಿ ಮಹರ್ಷಿವರ್ಯರಾದ ವಸಿಷ್ಠಮುನಿಗಳನ್ನು ಕಂಡರು. ವಿದ್ವಾಂಸರ ಮಧ್ಯದಲ್ಲಿ ಕಂಗೊಳಿಸುತ್ತಿದ್ದ ಅವರನ್ನು ಕಂಡು ರಥದಿಂದ ಕೂಡಲೇ ಕೆಳಕ್ಕಿಳಿದು ಅವರ ಬಳಿಗೆ ತೆರಳಿದರು. ಅವರು ಕೇಳಿದಾಗ ತಮಗೆ ಸಂತತಿ ಇಲ್ಲದ ಕೊರಗನ್ನು ತೋಡಿಕೊಂಡರು. ಅದಕ್ಕೆ ವಸಿಷ್ಠರು ಚಂದ್ರವಂಶದ ಉಳಿವಿಗಾಗಿ ನಿನಗೆ ಯೌವನ ಮರಳುವುದು, ಸಂತತಿಯಾಗುವುದು ಎಂದು ನುಡಿದರು. ಅದರ ಬಗ್ಗೆ ಅವರು ಕೇಳಿಕೊಂಡಾಗ ಅವರು ತಿಳಿಸಿದರು, ಅಮೃತಮಥನ ಕಾಲದಲ್ಲಿ ಉದ್ಭವಿಸಿದ ತುಲಸಿಯು ದೇವದೇವತೆಗಳಿಂದಲೂ ವಂದಿತಳಾದವಳು. ಅವಳ ಅನುಗ್ರಹದಿಂದ ಪುನಃ ತಾರುಣ್ಯ ಪಡೆಯುವಿರಿ. ನಿಮಗೆ ಭರತ ಎಂಬ ಪುತ್ರನು ಜನಿಸುವನು. ಅವನಿಂದ ಈ [೬.೭] ಭರತಖಂಡ ಮತ್ತಷ್ಟು ಹೆಸರಾಗುವದು. ''ತುಲಸಿ......'' ಎಂಬ ಮಂತ್ರದಿಂದ

---

೬.೭ ಮೇಲ್ನೋಟಕ್ಕೆ ಈ ಭರತನಿಂದಲೇ ಭರತಖಂಡ ಎಂಬ ಹೆಸರು ಬಂದಿತು ಎಂಬಂತೆ ಪುರಾಣವಾಕ್ಯ (ಪುತ್ರಶ್ಚ ಯುವಯೋರೇವ ಭವಿತಾ ಭರತಾಖ್ಯಯಾ । ತತೋ ಹಿ ಭರತಂ ವರ್ಷಂ ಭವಿಷ್ಯತಿ ಸುಶಬ್ದಿತಮ್ ॥) ಕಂಡುಬರುವುದು. ಆದರೆ, ಶ್ರೀಮದ್ಭಾಗವತ ಮಹಾಪುರಾಣದ ಸ್ಪಷ್ಟ ನಿರೂಪಣೆ- ಯಂತೆ ಭರತಖಂಡ

ನೀವು ತುಲಸಿಯನ್ನು ಷೋಡಶೋಪಚಾರದಿಂದ ಪೂಜಿಸಿರಿ. ಅವಳ ಎಲೆಗಳಿಂದ ಶ್ರೀಹರಿಯನ್ನು ಅರ್ಚಿಸಿರಿ. ಅವನಿಗೆ ಅಭಿಷೇಕಿಸಿದ ತುಲಸೀಸಹಿತ ತೀರ್ಥವನ್ನು ಪ್ರಾಶನ ಮಾಡಿರಿ. ಹೀಗೆ ನೀವಿಬ್ಬರೂ ಮಾಡಿದಲ್ಲಿ ವರ್ಷದ ಕೊನೆಯಲ್ಲಿ ನಿಮಗೆ ಯೌವನ ಲಭಿಸುವದು.

ಅವರ ಮಾತನ್ನು ಕೇಳಿ ಅವರಿಬ್ಬರು ತಮ್ಮ ಪಟ್ಟಣಕ್ಕೆ ಹಿಂದಿರುಗಿದರು. ಅಪಾರ ಸಂಖ್ಯೆಯಲ್ಲಿ ತುಲಸಿಯನ್ನು ಬೆಳೆಸಿದರು. ಕೃಷ್ಣತುಲಸಿಯನ್ನು ಹಾಗೆ ಬೆಳೆಸಿ ಪ್ರತಿನಿತ್ಯ ಸಾವಿರ ಸಾಲಿಗ್ರಾಮಗಳನ್ನು ಪೂಜಿಸುತ್ತ ರಾಜನು ಶಂಖತೀರ್ಥವನ್ನು ಶಿರಸ್ಸಿನ ಮೇಲೆ ಧರಿಸಿದ. ಸಹಸ್ರನಾಮಗಳಿಂದ ಪ್ರತಿನಿತ್ಯ ಭಕ್ತಿಯಿಂದ ಶ್ರೀಹರಿಯನ್ನು ಆರಾಧಿಸಿದ. ಪ್ರಸಾದರೂಪವಾಗಿ ತುಲಸಿಯನ್ನು ಭಕ್ಷಿಸಿದ. ಹಾಗೆ ಸಂವತ್ಸರ ಕಳೆಯಿತು. ಕೊನೆಗೆ ಶ್ರೇಷ್ಠ ತೀರ್ಥದಲ್ಲಿ ಮುಳುಗಿ ಮೇಲೆದ್ದಾಗ ತಾವಿಬ್ಬರೂ ಯೌವನವನ್ನು ಪಡೆದಿದ್ದನ್ನು ಕಂಡು ವಿಸ್ಮಿತನಾದ. ಮುಂದೆ ಅವನ ಪತ್ನಿಯಲ್ಲಿ ಭರತ ಎಂಬ ಪುತ್ರನನ್ನು ಪಡೆದ. ಬಗೆಬಗೆಯ ಭೋಗಗಳನ್ನು ಅನುಭವಿಸಿದ. ಇನ್ನೂ ಅನೇಕ ಮಕ್ಕಳನ್ನು ಪಡೆದ. ತುಲಸಿಯ ಅನುಗ್ರಹದಿಂದ ಬಹುಕಾಲ ರಾಜ್ಯವನ್ನು ಆಳಿ ಕೊನೆಗೆ ಸಪತ್ನೀಕನಾಗಿ ವೈಕುಂಠಲೋಕವನ್ನೂ ಪಡೆದ.

★ ★ ★

## ೨. ತುಲಸೀ ಸೇವೆಯಿಂದ ದೀರ್ಘಾಯುವಾದ ಕೃಷ್ಣಕ
### (ಪದ್ಮಪುರಾಣ)

ಕೃಷ್ಣಕ ಎಂಬ ವಿಪ್ರನಿದ್ದ. ಅವನು ಮೂರ್ಖನೂ, ಸತ್ಕರ್ಮಹೀನನೂ ಆಗಿದ್ದವನು. ಅವನೊಮ್ಮೆ ಮುತ್ತುಗದ ಎಲೆಗಳನ್ನು ತರಲು ಪ್ರಾತಃಕಾಲದಲ್ಲೇ ಅಡವಿಗೆ ತೆರಳಿದ. ಅಡವಿಯಲ್ಲಿ ಅಲೆಯುತ್ತ ತುಲಸೀವನವನ್ನು ಕಂಡನು. ಹಸಿರುವರ್ಣದ ಕೋಮಲವೂ, ಮನೋಹರವೂ, ಪುಣ್ಯಕರವೂ ಆದ ಅದನ್ನು ಕಂಡು ಇದು ಗೋವುಗಳಿಗೆ ಆಹಾರವಾದೀತು ಎಂದು ಭಾವಿಸಿ ಅವುಗಳನ್ನು ತರಲೆಂದು ಹೊರಟ. ಆ ವೇಳೆಗೆ ಆಯುಷ್ಯ ಮುಗಿದಿದ್ದ ಅವನ ಬಳಿಗೆ ಸರ್ಪವೊಂದು ಆಗಮಿಸಿತು. ಅಲ್ಲಿಗೆ ಧಾವಿಸಿದ್ದ ಯಮದೂತರು ಆ ಸರ್ಪಕ್ಕೆ ಅವನನ್ನು ಆ ತುಲಸೀಗಿಡಗಳನ್ನು ಸ್ಪರ್ಶಿಸುವ ಮುನ್ನವೇ ಕಚ್ಚಲು ಪ್ರೇರಿಸಿದರು. ಅದನ್ನೆಲ್ಲ ಗಮನಿಸದ ಕೃಷ್ಣಕ ಕೀಳಲೆಂದು ತುಲಸಿಯನ್ನು ಸ್ಪರ್ಶಿಸಿಯೇ ಬಿಟ್ಟ[೨.೮]. ಆ ಕೂಡಲೇ ಅಲ್ಲಿಗೆ

---

ಎಂಬ ಹೆಸರಿಗೆ ಕಾರಣನಾಗಿದ್ದು ಋಷಭನಾಮಕ ಭಗವದ್ರೂಪದ ಪುತ್ರನಾದ ಭರತ ಚಕ್ರವರ್ತಿಯಿಂದ. ಆದ್ದರಿಂದ, ಇಲ್ಲಿಯ ಭರತಖಂಡ ಎಂಬ ಉಲ್ಲೇಖವನ್ನು ಮುಂಚೆ ಇದ್ದ ಹೆಸರಿನ ವಿಸ್ತಾರ ಎಂಬ ಅರ್ಥದಲ್ಲಿ ತಿಳಿಯಬೇಕು. ಶ್ರೀಮದ್ಭಾಗವತದಲ್ಲಿ ಪ್ರಿಯವ್ರತ ರಾಜನ ನಿಮಿತ್ತದಿಂದಲೇ ಸಪ್ತದ್ವೀಪಗಳು ಉಂಟಾದವು ಎಂಬ ಮಾತನ್ನು ಶ್ರೀಮದಾಚಾರ್ಯರು ಆ ಮುನ್ನವೇ ಇದ್ದ ಸಪ್ತದ್ವೀಪಗಳು ಅವನಿಂದ ಮತ್ತಷ್ಟು ವಿಸ್ತಾರಗೊಂಡವು ಎಂಬುದಾಗಿ ವ್ಯಾಖ್ಯಾನಿಸಿರುವುದು ಇದಕ್ಕೆ ಗಮಕ.

೨.೮ ತುಲಸಿಯ ಸ್ಪರ್ಶ ಅಪಮೃತ್ಯುವನ್ನು ಪರಿಹರಿಸುವಂತಹ ಶ್ರೇಷ್ಠ ಸಾಧನ ಎಂಬುದು ಇಲ್ಲಿಯ ಭಾವ.

ಆಗಮಿಸಿದ ಮಹಾವಿಷ್ಣುವಿನ ಸುದರ್ಶನ ಚಕ್ರವು ಸರ್ಪವು ಅವನನ್ನು ಕಚ್ಚದಂತೆ ಮಾಡಿತು. ಆಗ ಸರ್ಪವು ಹುಲ್ಲಿನ ರಾಶಿಯಲ್ಲಿ ಸೇರಿಕೊಂಡಿತು. ಅವನು ತುಲಸಿಯನ್ನು ಕೆಳಗಿರಿಸಿದ ಮೇಲೆ ಕಚ್ಚಬೇಕೆಂಬುದು ಅದರ ಉದ್ದೇಶವಾಗಿತ್ತು. ತನ್ನ ಮನೆಗೆ ಹಿಂದಿರುಗಿದ ಅವನನ್ನು ಯಮದೂತರು ಹಿಂಬಾಲಿಸಿ ನಡೆದರು. ಆದರೆ ಅವನ ಮನೆಯೊಳಗೆ ಪ್ರವೇಶಿಸಲಾಗದೆ ಯಮದೂತರು ದ್ವಾರದಲ್ಲಿಯೇ ನಿಂತುಬಿಟ್ಟರು.

ಇದನ್ನೆಲ್ಲಾ ಕಾಣುತ್ತಿದ್ದ ಕೃಷ್ಣಪೂಜಕನಾದ ಒಬ್ಬ ಬ್ರಾಹ್ಮಣನು ಕೌತುಕದಿಂದ ಅದಕ್ಕೆ ಕಾರಣವನ್ನು ಕೇಳಿದನು. ಯಮದೂತರು ವಿಷಯವನ್ನೆಲ್ಲಾ ತಿಳಿಸಿದರು. ಅದನ್ನು ಕೇಳಿ ಆ ಬ್ರಾಹ್ಮಣನು ಅವನನ್ನು ರಕ್ಷಿಸುವ ಉಪಾಯವನ್ನು ಆಲೋಚಿಸಿದನು. ಅದಕ್ಕಾಗಿ ಆ ಯಮದೂತರನ್ನೇ ಕೇಳಿದನು. ಆಗ ಯಮದೂತರು ಇನ್ನು ಎರಡು ಯಾಮದಲ್ಲಿ ಸರ್ಪ ಕಚ್ಚಿ ಇವನ ಆಯುಷ್ಯ ಮುಗಿಯುವದು. ಅವನು ಹಿಡಿದಿರುವ ತುಲಸಿ ಅವನನ್ನು ಈಗ ರಕ್ಷಿಸುತ್ತಿದೆ. ತುಲಸಿಪತ್ರದಲ್ಲಿ ಶ್ರೀಹರಿಯ ನಿತ್ಯ ಸನ್ನಿಧಾನ. ಇವನೇನಾದರೂ ತುಲಸಿಯನ್ನು ಶ್ರೀಹರಿಗೆ ಸಮರ್ಪಿಸಿದಲ್ಲಿ ಈ ಸುದರ್ಶನ ಚಕ್ರವು ನಮ್ಮನ್ನೇ ಬೂದಿ ಮಾಡುವದು. ಇವನನ್ನು ನೀವು ರಕ್ಷಿಸಲು ಬಯಸಿದಲ್ಲಿ ಇವನು ತುಲಸಿಯಿಂದ ಶ್ರೀಹರಿಯನ್ನು ಪೂಜಿಸಿದರೆ ಪತ್ರವನ್ನು ನೀಡಿದರೆ ಇವನು ಪೂರ್ಣಾಯುವಾಗುವನು^^. ಆ ಬ್ರಾಹ್ಮಣನು ಅದರಂತೆಯೇ ಮಾಡಲು ಆ ಯಮಭಟರು ಅವರು ನೋಡುತ್ತಿದ್ದಂತೆಯೇ ಮರೆಯಾದರು. ಆ ವಿಪ್ರನು ಕೃಷ್ಣಕನಿಗೆ ಬುದ್ಧಿ ಹೇಳಿದನು. ಅವನು ವೈಷ್ಣವ ಕ್ಷೇತ್ರಕ್ಕೆ ತೆರಳಿ ತುಲಸಿಯಿಂದ ಶ್ರೀಹರಿಯನ್ನು ಭಕ್ತಿಯಿಂದ ಪೂಜಿಸಿದನು. ಅದರ ಫಲವಾಗಿ ಅವನು ಹಾಗೂ ಆ ಬ್ರಾಹ್ಮಣನು ಅಲ್ಪಕಾಲದಲ್ಲಿಯೇ ಸದ್ಗತಿಯನ್ನು ಪಡೆದರು.

★ ★ ★

## ೩. ಪಾಪ ಕಳೆದ ತುಲಸಿಯ ಗಾಳಿ

### (ಸ್ಕಂದಪುರಾಣದಲ್ಲಿ ಪ್ರಭಾಸಖಂಡ)

ಪೌಂಡ್ರಕ ಎಂಬ ಒಬ್ಬ ಬೇಡ; ಪರಮ ದುರಾಚಾರಿ. ಪ್ರತಿದಿನವೂ ನೂರಾರು ಪ್ರಾಣಿಗಳನ್ನು ಕೊಂದು ಬದುಕುತ್ತಿದ್ದವನು. ಬ್ರಹ್ಮಸ್ವಹರಣ ಮೊದಲಾದ ಪಾಪಕಾರ್ಯಗಳಲ್ಲಿ

"ಸ್ಪೃಷ್ಟಾವಪುಃಪಾವನೀ" ಎಂಬ ತುಲಸಿಯ ಮಹಿಮೆಗೆ ಇದು ಉತ್ತಮ ನಿದರ್ಶನ. ವಿದ್ಯುಚ್ಛಕ್ತಿಯನ್ನು ಮುಟ್ಟುತ್ತಲೇ ದೇಹದಲ್ಲಿನ ಪ್ರಾಣವು ಅಳಿಯುವಂತೆ, ತುಲಸಿಯನ್ನು ಸ್ಪರ್ಶಿಸುತ್ತಲೇ ಅವನಲ್ಲಿದ್ದ ಅಪಮೃತ್ಯು ಯೋಗ ಪರಿಹಾರವಾಯಿತು ಎಂಬುದು ವೈಜ್ಞಾನಿಕ ಹಿನ್ನೆಲೆಯಲ್ಲಿಯೂ ಅರ್ಥವತ್ತಾದ ವಿಚಾರವಾಗಿದೆ.

^^ ತುಲಸಿಯ ಸ್ಪರ್ಶನ ಹಾಗೂ ಅದರ ಪೂಜೆಯಿಂದಾಗಿ ಕೃಷ್ಣಕ ಎಂಬ ಕರ್ಮಭ್ರಷ್ಟನಾಗಿದ್ದ ಬ್ರಾಹ್ಮಣ ಉದ್ಧಾರವನ್ನು ಕಂಡ. ತುಲಸಿಯ ಸ್ಪರ್ಶ ಮನಃಪರಿವರ್ತನೆಗೂ ಸಾಧನವಾಗುವ ಅಪೂರ್ವ ಉಪಾಯ ಎಂಬ ವಿಶೇಷಾಂಶ ಇದರಲ್ಲಿದೆ.

ನಿರಂತರ ತೊಡಗಿದ್ದವನು. ದಾರಿಯಲ್ಲಿ ಅಡ್ಡಗಟ್ಟಿ ಬ್ರಾಹ್ಮಣರನ್ನು ಕೊಂದು ಅವರ ಧನವನ್ನು ಕದಿಯುತ್ತಿದ್ದವನು. ಗೋಹತ್ಯೆ, ಸ್ತ್ರೀ ಹತ್ಯೆ ಮೊದಲಾದವುಗಳನ್ನು ಮಾಡುತ್ತಿದ್ದ ಮಹಾ ಉನ್ಮತ್ತ. ಸಕಲ ಬಗೆಯ ಮಾಂಸಗಳನ್ನು ತಿನ್ನುತ್ತಿದ್ದ ಪಾಪಿ. ಚಂಡಾಲಕನ್ಯೆಯರೊಂದಿಗೆ ಅವನ ವಿಹಾರ. ಹೀಗೆ ಅವನು ಒಂಭತ್ತು ಸಾವಿರದ ಹನ್ನೆರಡು ವರ್ಷಗಳು ಕಾಲಕಳೆದ. ಮಹಾನದಿಗಳು ಒಣಗಿಹೋದವು; ಅಡವಿಯ ಗಿಡಗಳು ನಾಶವಾದವು; ಜಗತ್ತಿನಲ್ಲಿ ಜನರೇ ಇಲ್ಲವಾಗತೊಡಗಿದರು. ಆಗೊಂದು ದಿನ ಆಹಾರ ಸಿಗದ ಅವನು ಹಸಿವೆಯಿಂದ ಪೀಡಿತನಾಗಿ ವೃದ್ಧನಾದ ತನ್ನ ತಂದೆಯನ್ನೇ ಕೊಂದು ತಿಂದುಹಾಕಿದ. ಮಾರನೆಯ ದಿನ ತಾಯಿಯನ್ನೂ ತಿಂದ. ಅದರ ಮರುದಿನ ಪತ್ನಿಯನ್ನೂ ಸಹ. ಮುಂದೆ ಕ್ರಮವಾಗಿ ಪುತ್ರರನ್ನೂ ಪುತ್ರಿಯರನ್ನೂ ಗ್ರಾಸ ಮಾಡಿಕೊಂಡ. ಅವರೆಲ್ಲ ಮುಗಿದ ಮೇಲೆ ಚಂಡಾಲಕನ್ಯೆಯರ ಜೊತೆಗೆ ಭಯಂಕರವಾದ ಕಾಡಿಗೆ ತೆರಳಿ ದಾರಿಹೋಕರನ್ನು ತಿನ್ನ ತೊಡಗಿದ. ಅವನು ಹಾಗೆ ಕೊಂದ ದಾರಿಹೋಕರಿಗೂ, ಬ್ರಾಹ್ಮಣರಿಗೂ, ಸ್ತ್ರೀಯರಿಗೂ, ಪಕ್ಷಿಗಳಿಗೂ, ಪ್ರಾಣಿಗಳಿಗೂ ಲೆಕ್ಕವೇ ಸಿಗದು.

ಆಗೊಂದು ದಿನ ಬೇಟೆಗೆಂದು ಕಾಡಿಗೆ ತೆರಳಿದ ಅವನು ಬೇರಾವ ಪ್ರಾಣಿಯನ್ನು ಕಾಣದೆ ಎದುರಿನಲ್ಲಿ ದೊಡ್ಡ ಸಿಂಹವೊಂದನ್ನು ಕಂಡ. ಅದನ್ನು ಕೊಲ್ಲಲೆಂದು ಮನಸ್ಸು ಮಾಡಿದ. ಆ ಸಿಂಹಕ್ಕೂ ಅಂತಹದೇ ಹಸಿವು. ಇವನನ್ನು ತಿನ್ನಲು ಅದು ಧಾವಿಸಿತು. ಅವನ ಬಾಣದ ಪೆಟ್ಟಿಗೆ ಮೈಯೆಲ್ಲ ಗಾಯಗೊಂಡಿದ್ದ ಆ ಸಿಂಹವು ಕೊನೆಗೂ ಅವನನ್ನು ಹಿಡಿದು ಸೀಳಿಹಾಕಿತು. ತಾನೂ ಸತ್ತುಹೋಯಿತು.

ಆ ವೇಳೆಗೆ ಆ ಕಾಡಿನಲ್ಲಿದ್ದ ತುಲಸೀವನದಿಂದ ಬೀಸಿ ಬಂದ ಗಾಳಿ ಅವನ ದೇಹವನ್ನು ಸೋಕಿತು. ಯಮನು ಕಳುಹಿಸಿದ್ದ ದೂತರು ಪಾಶ ಹಿಡಿದು ಆ ಪಾಪಿಯನ್ನು ಎಳೆದೊಯ್ಯಲೆಂದು ಅಲ್ಲಿಗೆ ಆಗಮಿಸಿದರು. ಕತ್ತಿಗೆ ಪಾಶ ಬಿಗಿದು ಕರೆದೊಯ್ಯಲು ಸಿದ್ಧರಾದರು. ಆ ಸಮಯಕ್ಕೆ ಶಂಖ-ಚಕ್ರಗಳನ್ನು ಧರಿಸಿದ ವಿಷ್ಣುದೂತರು ಅಲ್ಲಿಗೆ ಆಗಮಿಸಿ ಅವನನ್ನು ಬಿಡುಗಡೆ ಮಾಡಲು ಹೇಳಿದರು. ಆದರೆ ಅವನು ಪಾಪಿ ಎಂಬ ಕಾರಣದಿಂದ ಬಿಡಲಾಗದೆ ಕೊನೆಗೆ ಅವರಿಗೂ ವಿಷ್ಣುದೂತರಿಗೂ ಯುದ್ಧ ಪ್ರಾರಂಭವಾಗಿ ಯಮದೂತರಿಗೆ ಸೋಲುಂಟಾಯಿತು. ಹಾಗೆ ಸೋತ ಯಮದೂತರು ನಡೆದುದನ್ನೆಲ್ಲ ಯಮದೇವರಿಗೆ ಅರಿಕೆ ಮಾಡಿಕೊಂಡರು. ಕೋಪಗೊಂಡ ಯಮದೇವರು ಚಿತ್ರಗುಪ್ತರನ್ನು ಕರೆದು ಆ ಪಾಪಿಯ ಪುಣ್ಯ ಪಾಪದ ಲೆಕ್ಕವನ್ನು ಪರಿಶೀಲಿಸಲು ಆದೇಶವಿತ್ತರು. ಅವನ ಲೆಕ್ಕದಲ್ಲಿ ಪುಣ್ಯದ ಹೆಸರೇ ಇಲ್ಲವೆಂಬುದನ್ನು ಚಿತ್ರಗುಪ್ತ ತಿಳಿಸಿದ. ಅಂಥ ಪಾಪಿಗೆ ವಿಷ್ಣುದೂತರ ರಕ್ಷಣೆ ಲಭಿಸಿ ಸದ್ಗತಿ ಹೇಗೆ ಲಭಿಸಿತು ಎಂಬ ಚಿಂತೆ ಯಮನಿಗೆ ಉಂಟಾಯಿತು. ಅವರು ಕೂಡಲೇ ಚಿತ್ರಗುಪ್ತ ಮೊದಲಾದವರೊಂದಿಗೆ ವೈಕುಂಠಕ್ಕೆ ತೆರಳಿ ನಾರಾಯಣನಿಗೆ ಪ್ರಣಾಮಗಳನ್ನು ಸಲ್ಲಿಸಿ ಬಗೆಬಗೆಯಾಗಿ ಸ್ತುತಿಸಿ ಪ್ರಾರ್ಥಿಸಿ ಕೊಂಡರು. ತಮ್ಮ ಅಧಿಕಾರಕ್ಕೆ ಅರ್ಥವಿಲ್ಲದ್ದರಿಂದ ಅದನ್ನು ತೊರೆಯುವ ಬಯಕೆಯನ್ನು ಯಮದೇವರು

ಅರಿಕೆ ಮಾಡಿಕೊಂಡರು. ಪರಮ ಪಾಪಿಯಾದ ಆ ಪೌಂಡ್ರಕನನ್ನು ತಾವು ಶಿಕ್ಷಿಸಲು ಅವಕಾಶ ಲಭಿಸದೇ ವಿಷ್ಣುದೂತರ ರಕ್ಷಣೆಯಿಂದ ಸದ್ಗತಿಗೆ ಕರೆದೊಯ್ಯಲ್ಪಟ್ಟ ಪ್ರಸಂಗವನ್ನೂ ಅದಕ್ಕೆ ಕಾರಣವನ್ನಾಗಿ ತಿಳಿಸಿದರು.

ಶ್ರೀಹರಿ ಅವರಿಗೆ ತಿಳಿಸಿದ, ಯಮದೇವರು ತಿಳಿಸಿದಂತೆ ಆ ಪೌಂಡ್ರಕನು ಮಹಾ ಪಾತಕಿ ಎಂಬುದು ನಿಸ್ಸಂಶಯ. ಅವನು ನರಕವನ್ನು ಹೊಂದುವುದೇ ಉಚಿತವಾಗಿತ್ತು ಎಂಬುದು ನಿಜ. ಆದರೆ ಅಂತ್ಯಕಾಲದಲ್ಲಿ ಅವನ ಮೇಲೆ [೪೦]ತುಲಸೀವನದ ಮೇಲಿಂದ ಬೀಸಿಬಂದ ಗಾಳಿಯ ಸ್ಪರ್ಶಉಂಟಾಗಿ ಅವನ ಪಾಪಗಳೆಲ್ಲ ಬೂದಿಯಾದವು. ತುಲಸಿಯ ಮಹಿಮೆ ಅಂಥದು. ಅದನ್ನು ಯಾವ ಬಗೆಯಿಂದ ಸೇವಿಸಿದರೂ ಪಾಪ ನಾಶವಾಗುವದು ನಿಶ್ಚಿತ. ಹೀಗಾಗಿ ಅವನು ಸದ್ಗತಿ ಪಡೆಯುವಂತಾಯಿತು. ಚಿಂತಿಸಬೇಕಿಲ್ಲ ತುಲಸಿಯನ್ನು ಅವಮಾನಿಸುವವರನ್ನೂ, ಪೂಜಿಸದವರನ್ನೂ, ಅದರ ಮೃತ್ತಿಕೆಯನ್ನು ದಾಟುವವರನ್ನೂ, ಅದರಂತೆ ಇತರ ಪಾಪ ಕಾರ್ಯಗಳನ್ನು ಮಾಡುವವರನ್ನೂ ಯಮದೇವರು ಅಗತ್ಯವಾಗಿ ಶಿಕ್ಷಿಸಬಹುದು. ಅದಕ್ಕೆ ಯಾವ ಅಡೆತಡೆಯೂ ಇರದು ಎಂದು ತಿಳಿಸಿದ. ಕಾರಣ ತಿಳಿದು ಸಮಾಧಾನ ಹೊಂದಿದ ಯಮದೇವರು ತಮ್ಮ ಪಟ್ಟಣಕ್ಕೆ ತೆರಳಿ ಎಂದಿನಂತೆ ತಮ್ಮ ಕರ್ತವ್ಯದಲ್ಲಿ ತೊಡಗಿದರು. ಹೀಗೆ ತುಲಸಿಯ ಸಂಪರ್ಕ ಪಡೆದ ಗಾಳಿ ದೇಹಕ್ಕೆ ತಾಗಿ ಅದು ಮುಕ್ತಿಗೆ ಕ್ರಮವಾಗಿ ಸಾಧನವಾಗುವುದು[೪೧].

---

೪೦ ತುಲಸಿಯ ದರ್ಶನ, ಸ್ಪರ್ಶನಗಳು ಪಾವನ. ಅದರಂತೆ, ಕೇವಲ ಅದರ ಮೇಲಿಂದ ಬೀಸಿ ಬರುವಂತಹ ಗಾಳಿಯೂ ಸಹ ಪಾವನ. ಮಲಿನ ವಸ್ತುಗಳಿಂದ ಬೀಸಿ ಬರುವ ಗಾಳಿಯಲ್ಲಿ ಮಾಲಿನ್ಯ ತುಂಬಿರುವಂತೆ, ಪವಿತ್ರ ವಸ್ತುಗಳ ಮೇಲಿಂದ ಬೀಸಿ ಬರುವ ಗಾಳಿಯಲ್ಲಿ ಪಾವಿತ್ರ್ಯವೂ ತುಂಬಿರುವುದು. ತುಲಸಿಯು ಶ್ರೀಹರಿಗೆ ಪರಮಪ್ರಿಯವಾದ ಮಹಾಪವಿತ್ರವಾದ ವಸ್ತು. ಅದರಿಂದಾಗಿ ಅದರ ಮೇಲಿಂದ ಬೀಸಿ ಬರುವ ಗಾಳಿಗೆ ಪರಮಪಾವಿತ್ರ್ಯ ಲಭಿಸಿರುವುದು. ಅಂತಹ ಗಾಳಿಯ ಸ್ಪರ್ಶವೂ ಸಹ ಸಕಲ ಪಾಪಗಳನ್ನೂ ಪರಿಹರಿಸುವ ದಿವ್ಯಸಾಮರ್ಥ್ಯವನ್ನು ಪಡೆದಿರುವುದು ಎಂಬುದು ಸಮುಚಿತವೇ ಆಗಿದೆ.

೪೧ ಶ್ರೀಮದ್ಭಾಗವತಪುರಾಣದಲ್ಲಿನ ಅಜಾಮಿಳನ ಕಥೆಯನ್ನು ಇದು ಹೋಲುವುದು. ಅಲ್ಲಿ ಅಜಾಮಿಳನ ಪಾಪನಿವೃತ್ತಿಗೆ ಶ್ರೀಹರಿಯ 'ನಾರಾಯಣ' ಎಂಬ ನಾಮದ ಉಚ್ಚಾರಣೆಯು ಕಾರಣವಾದಂತೆ, ಇಲ್ಲಿ ಶ್ರೀಹರಿ ಪ್ರಿಯಳಾದ ತುಲಸಿಯ ವನದಿಂದ ಬೀಸಿ ಬಂದ ಗಾಳಿ ಈ ಪೌಂಡ್ರಕ ಬೇಡನ ಸಕಲ ಪಾಪದ ಪರಿಹಾರಕ್ಕೆ ಕಾರಣವಾಯಿತು. ಶ್ರೀಹರಿಯ ನಾಮದಂತೆ ಶ್ರೀಹರಿಗೆ ಪ್ರಿಯವಾದ ತುಲಸೀ ಮೊದಲಾದವುಗಳ ಸಂಪರ್ಕ ಪಡೆದ ಗಾಳಿ ಮೊದಲಾದವುಗಳೂ ಸಹ ಸಕಲ ಪಾಪ ಪರಿಹಾರಕ ಎಂಬುದು ಇವುಗಳ ಒಟ್ಟು ಭಾವ. ಇಲ್ಲಿಯ ಪೌಂಡ್ರಕನು ಬ್ರಹ್ಮಹತ್ಯೆ, ಗೋಹತ್ಯೆ, ಸ್ತ್ರೀಹತ್ಯೆ, ಮಾತೃಹತ್ಯೆ, ಪಿತೃಹತ್ಯೆ ಮೊದಲಾಗಿ ಸಕಲ ಪಾತಕಗಳನ್ನೂ ಮಾಡಿದ್ದ ಮಹಾಪಾತಕಿ. ಅವನ ಸಕಲ ಪಾತಕಗಳೂ ಸಹ ತುಲಸಿಯಿಂದಾಗಿ ಪರಿಹಾರವಾದುವು ಎಂಬ ಇಲ್ಲಿಯ ವಿವರಣೆಯು "ಪಾಪಾನಿ ಯಾನಿ ರವಿಸೂನುಪಟಸ್ಥಿತಾನಿ ಗೋಬ್ರಹ್ಮಬಾಲಪಿತೃಮಾತೃವಧಾದಿಕಾನಿ। ನಶ್ಯಂತಿ ತಾನಿ ತುಲಸೀವನದರ್ಶನೇನ ಗೋಕೋಟಿದಾನಸದೃಶಂ ಫಲಮಾಪ್ನುವಂತಿ ॥ ೧ ॥" ಎಂಬ ತುಲಸಿಯ ಮಾಹಾತ್ಮ್ಯದ ಫಲಶ್ರುತಿಗೆ ನಿದರ್ಶನದಂತಿದೆ.

# ೪. ಪಾರ್ವತಿಯನ್ನು ಉದ್ಧರಿಸಿದ ತುಲಸೀ

## (ಸ್ಕಂದಪುರಾಣ – ಪ್ರಭಾಸ ಖಂಡ)

ಹಿಂದೊಮ್ಮೆ ಶಿವನ ನೆಲೆಯಾದ ಕೈಲಾಸ ಶಿಖರದಲ್ಲಿ ನಡೆದ ಪ್ರಸಂಗ ಇದು. ಆಗೊಮ್ಮೆ ಶಿವನು ಮಾಧವಿ ಮಂಟಪದಲ್ಲಿ ಶ್ರೇಷ್ಠವಾದ ಆಸನದಲ್ಲಿ ಮಂಡಿಸಿದ್ದ. ಆಗ ಅಲ್ಲಿಗೆ ಬಂದ ಪಾರ್ವತಿಯು ವಿನೋದಕ್ಕೆಂದು ಹಿಂದಿನಿಂದ ಬಂದು ಶಿವನ ಎರಡು ಕಣ್ಣುಗಳನ್ನು ತನ್ನ ಕೈಗಳಿಂದ ಮುಚ್ಚಿದಳು. ಶಿವನ ಆ ಎರಡು ಕಣ್ಣುಗಳು ಸೂರ್ಯ ಚಂದ್ರರ ನೆಲೆಗಳು. ಅದರಿಂದಾಗಿ ಭೂಮಂಡಲಕ್ಕೆ ಕತ್ತಲೆ ಆವರಿಸಿ ಸರ್ವಕರ್ಮಗಳು ಲುಪ್ತವಾಗುವಂತಾಯಿತು. ಅಧ್ಯಯನಾದಿಗಳು ನಿಂತುಹೋದವು. ಪಶುಪಕ್ಷಿಗಳು ನಾಶ ಹೊಂದಿದವು. ಸಜ್ಜನರು ಸತ್ಕರ್ಮಗಳನ್ನು ತೊರೆದರು. ಅದು ಒಂದು ಕ್ಷಣವೆಂಬಂತೆ ಕಳೆದರೂ ಒಟ್ಟಾಗಿ ಆರು ಯುಗಗಳು ಆ ಸಮಯದಲ್ಲಿ ಕಳೆದಿದ್ದವು[೪೨]. ಬಳಿಕ ರುದ್ರದೇವರು ತಮ್ಮ ಜ್ಞಾನದೃಷ್ಟಿಯಿಂದ ಅದನ್ನೆಲ್ಲ ತಿಳಿದು ತಮ್ಮ ಮೂರನೆಯ ಕಣ್ಣನ್ನು ತೆರೆದರು. ಜಗತ್ತು ಮತ್ತೊಮ್ಮೆ ಬದುಕುವಂತಾಯಿತು. ಪಾರ್ವತಿಯು ವಿನಯದಿಂದ ಶಿವನ ಪಕ್ಕದಲ್ಲಿ ಕುಳಿತಳು. ಶಿವ ತಿಳಿಸಿದ, ಪಾರ್ವತಿ ನೀನು ಮಾಡಿದ್ದು ಆಪತ್ತಿಗೆ ಕಾರಣವಾಯಿತು. ಆರು ಯುಗಗಳಷ್ಟು ಕಾಲ ಭೂಮಿಗೆ ಕತ್ತಲು ಆವರಿಸಿ ಲೋಕಗಳು ನಾಶ ಹೊಂದಿದವು. ಇದರಿಂದ ನಿನಗೆ ಪಾಪ ಒದಗಿದವು. ಪ್ರಾಯಶ್ಚಿತ್ತವಿಲ್ಲದೆ ಪಾಪದ ಪರಿಹಾರವಿಲ್ಲ. ಇದಕ್ಕೆ ಉಚಿತವಾದ ಪರಿಹಾರ ಮಾಡಿಕೊ. ವಿಷಯ ತಿಳಿದ ಪಾರ್ವತಿಯು ಬಾಡಿದ ಮುಖವುಳ್ಳವಳಾಗಿ ತನ್ನ ತಪ್ಪಿಗೆ ಪರಿತಪಿಸಿದಳು. ಪರಿಪರಿಯಾಗಿ ಶಿವನನ್ನು ಸ್ತುತಿಸಿ ಆ ತಪ್ಪಿಗೆ ಸೂಕ್ತ ಪ್ರಾಯಶ್ಚಿತ್ತ ತಿಳಿಸಲು ಕೇಳಿಕೊಂಡಳು. ಶಿವ ತಿಳಿಸಿದ, ಇಂತಹ ಲೋಕನಾಶರೂಪದ ಪಾಪಕ್ಕೆ ಪರಿಹಾರವೆಂದರೆ ತುಲಸೀ ಪೂಜೆಯೆ ಆಗಿದೆ. ಭಕ್ತಿಯುಕ್ತವಾದ ಮನಸ್ಸಿನಿಂದ ಪೂಜಿಸಿದರೆ ತುಲಸಿಯು ಮೋಕ್ಷವನ್ನೇ ನೀಡಬಲ್ಲಳು. ಇನ್ನು ಪಾಪವನ್ನು ಪರಿಹರಿಸದಿರುವಳೇ. ನೀನು ಕೂಡಲೇ ಭರತಖಂಡದಲ್ಲಿನ ಕಾಂಚೀ ಕ್ಷೇತ್ರಕ್ಕೆ ತೆರಳು.'ಕ' ಎಂಬುದು ಬ್ರಹ್ಮದೇವರ ಹೆಸರು. ಬ್ರಹ್ಮದೇವರಿಂದ ಆದರಿಸಲ್ಪಟ್ಟ ಪಟ್ಟಣ ಆದ್ದರಿಂದ ಅದಕ್ಕೆ ಅದಕ್ಕೆ 'ಕಾಂಚೀ' ಎಂದು ಹೆಸರು. ಅಲ್ಲಿ ವರದರಾಜ ರೂಪದ ಶ್ರೀಹರಿಯು ನೆಲೆಸಿರುವನು. ಅವನ ಸನ್ನಿಧಿಯಲ್ಲಿ ತುಲಸಿವನವನ್ನು ಬೆಳೆಸು. ಶ್ರದ್ಧೆಯಿಂದ ಪೂಜಿಸು. ಅಲ್ಲಿ ಒಂದು ಮಾವಿನ

---

೪೨ ಇದು ಶ್ರೀಮದ್ಭಾಗವತದ ರೇವತ ರಾಜನ ಪ್ರಸಂಗವನ್ನು ಹೋಲುವುದು. ಬ್ರಹ್ಮಲೋಕದಲ್ಲಿ ಗಾನಪರವಶನಾಗಿದ್ದ ರೇವತ ಅದು ಮುಗಿವ ವೇಳೆಗೆ ಭೂಲೋಕದಲ್ಲಿ ಅನೇಕ ಯುಗಗಳು ಕಳೆದದ್ದನ್ನು ಗಮನಿಸಿ ಅಚ್ಚರಿಗೊಳ್ಳುವಂತಾಯಿತು ಎಂಬುದು ಅಲ್ಲಿಯ ವಿಷಯ. ಇಲ್ಲಿ ಶ್ರೀರುದ್ರದೇವರು ಕಣ್ಣುಗಳನ್ನು ಒಂದು ಕ್ಷಣಕಾಲ ಪಾರ್ವತೀದೇವಿಯು ಮುಚ್ಚಿದ್ದರೂ ಅದು ಭೂಲೋಕದಲ್ಲಿ ಆರು ಯುಗಗಳಷ್ಟು ದೀರ್ಘಕಾಲವಾಯಿತು. ಎಂಬುದು ಇಲ್ಲಿಯ ವಿವರಣೆ. ಇದರಿಂದ ದೇವಲೋಕದ ಕಾಲಮಾನದಲ್ಲಿ ಇರುವ ಅಗಾಧ ವ್ಯತ್ಯಾಸವು ತಿಳಿಯುವುದು. ಮನುಷ್ಯಮಾನದ ಒಂದು ವರ್ಷ ದೇವತೆಗಳಿಗೆ ಕೇವಲ ಒಂದು ದಿನ ಮಾತ್ರ ಎಂಬ ಪುರಾಣಗಳ ನಿರೂಪಣೆ ಇದಕ್ಕೆ ಸಂವಾದಿಯಾಗಿದೆ.

ವೃಕ್ಷವಿದೆ. ಅದರ ಬುಡದಲ್ಲಿ ಒಂದು ಮಣ್ಣಿನ ಲಿಂಗವನ್ನು ಸ್ಥಾಪಿಸು. ಶ್ರೀಹರಿಗೆ ಸಮರ್ಪಿಸಿದ ತುಲಸಿ ಪತ್ರಗಳಿಂದ ಆ ಲಿಂಗವನ್ನು ಆರಾಧಿಸು. ತುಲಸಿ ವೃಕ್ಷವನ್ನು ನಾಲ್ಕು ತಿಂಗಳು ಜೇನಿನಿಂದ, ಐದು ತಿಂಗಳು ಎಳನೀರಿನಿಂದ, ಎರಡುತಿಂಗಳು ಇಕ್ಷುರಸದಿಂದಲೂ ಬೆಳೆಸು. ಪಾಯಸಾನ್ನವನ್ನು ಸಮರ್ಪಿಸು. ಪ್ರತಿದಿನವೂ ಷೋಡಶೋಪಚಾರ ಪೂಜೆ ಮಾಡು. ಅದರಿಂದ ತುಷ್ಟಳಾಗುವ ತುಲಸಿಯು ನಿನಗೆ ಷಣ್ಮುಖನು ಪುತ್ರನಾಗುವಂತೆ ಅನುಗ್ರಹಿಸುವಳು. ನಾನು ಮುಂದಿನ ಫಾಲ್ಗುಣ ಹುಣ್ಣಿಮೆಯಂದು ನಿನಗೆ ಪ್ರತ್ಯಕ್ಷ ಕಾಣಿಸಿಕೊಂಡು ಕೈಹಿಡಿಯುವೆನು. ನಿನ್ನ ಪಾಪವು ಪರಿಹಾರವಾಗಿ ಷಣ್ಮುಖನು ಜನಿಸುವಂತೆ ತುಲಸಿಯು ಅನುಗ್ರಹಿಸುವಳು.

ಶಿವನ ಆದೇಶದಂತೆ ಪಾರ್ವತಿ ಕಾಂಚೀ ಕ್ಷೇತ್ರಕ್ಕೆ ತೆರಳಿ ಅಲ್ಲಿಯ ಪಂಪಾ ನದಿಯ ತೀರದಲ್ಲಿ ವೃಂದಾವನವನ್ನು ಸ್ಥಾಪಿಸಿ ತುಲಸಿಯನ್ನು ಬೆಳೆಸಿ ಪೂಜಿಸಿದಳು[೪೩]. ಓಂಕಾರೇಶ್ವರನನ್ನು ಆರಾಧಿಸಿದಳು. ತುಲಸಿಯ ಒಂದು ಎಲೆಯೂ ಸಹ ನಾಶವಾಗದಂತೆ ಭಕ್ತಿಯಿಂದ ಬೆಳೆಸಿ ಪೂಜಿಸಿದಳು. ಅದರಿಂದ ಕಂಚೀ ಕಾಮಾಕ್ಷಿಗೆ 'ಅಪರ್ಣಾ'[೪೪] ಎಂದು ಹೆಸರಾಯಿತು. ಒಂದು ವರ್ಷಕಾಲ ಪೂಜೆ ಸಾಗಿತು. ಹರಿವಲ್ಲಭೆಯಾದ ತುಲಸಿಯು ಅವಳ ಪೂಜೆಗೆ ಮೆಚ್ಚಿದಳು. ತುಲಸಿಯು ಪ್ರತ್ಯಕ್ಷವಾಗಿ ಪಾರ್ವತಿಯನ್ನು ಗಾಢವಾಗಿ ಆಲಂಗಿಸಿದಳು ಮತ್ತು ಪಾರ್ವತಿಯ ಪಾಪ ಪರಿಹಾರವಾಯಿತೆಂದು ತಿಳಿಸಿ ಷಣ್ಮುಖನು ಪುತ್ರನಾಗಿ ಜನಿಸುವಂತೆ ಆಶೀರ್ವದಿಸಿದಳು. ಮುಂದೆ ಶಿವನೂ ಸಹ ಆಗಮಿಸಿ ಪಾರ್ವತಿಯ ಕೈಹಿಡಿದ. ಪಾರ್ವತಿ ಪರಮೇಶ್ವರರು ನಂದಿ ವಾಹನರಾಗಿ ಕೈಲಾಸ ಶಿಖರಕ್ಕೆ ತೆರಳಿ ಮುಂಚಿನಂತೆಯೇ ನೆಲಸಿದರು. ಹೀಗೆ ಪಾಪ

---

೪೩. ತುಲಸಿಯನ್ನು ಬೆಳೆಸುವುದರ ಫಲ ಇಲ್ಲಿ ಅಪೂರ್ವ ರೀತಿಯಲ್ಲಿ ನಿರೂಪಿತವಾಗಿದೆ. ಬೇರಾವ ವೃಕ್ಷಗಳನ್ನು ಬೆಳೆಸಿದರೂ ಸಹ ಲಭಿಸಲಾರದಂತಹ ಅಪೂರ್ವವಾದಂತಹ ಫಲ ತುಲಸಿಯನ್ನು ಬೆಳೆಸುವುದರಿಂದ ಲಭಿಸುವುದು. ಶ್ರೀಹರಿಗೆ ಹೆಚ್ಚು ಪ್ರಿಯವಾಗುತ್ತಾ ಹೋದವರ ಪ್ರಗತಿಗೆ ಸಲ್ಲಿಸುವ ಸೇವೆ ಹೀಗೆ ತಾರಕ ಎಂಬುದು ಇಲ್ಲಿಯ ಮುಖ್ಯ ಸಂದೇಶ.

೪೪ ಮೇನಾದೇವಿಯ ಮೂರು ಮಕ್ಕಳಿಗೆ ಕ್ರಮವಾಗಿ ಅಪರ್ಣಾ, ಏಕಪರ್ಣಾ ಹಾಗೂ ಏಕಪಾಟಲಾ ಎಂಬ ಹೆಸರುಗಳು ಇದ್ದವು. ಅದಕ್ಕೆ ಕಾರಣ, ಉತ್ತಮ ವರಪ್ರಾಪ್ತಿಗಾಗಿ ಆ ಮೂವರು ತಪಸ್ಸನ್ನು ಕೈಗೊಂಡು ಆಹಾರವಾಗಿ ಏಕಪರ್ಣಾ ಎಂಬುವಳು ದಿನಕ್ಕೆ ಒಂದು ಎಲೆಯನ್ನು ತಿನ್ನುವ ಪರಿಪಾಠವಿಟ್ಟುಕೊಂಡದ್ದರಿಂದ ಅವಳಿಗೆ ಆ ಹೆಸರು ಉಂಟಾಯಿತು; ಏಕಪಾಟಲಾ ಎಂಬುವಳು ದಿನಕ್ಕೆ ಕೇವಲ ಒಂದು ಪಾಟಲಾಪುಷ್ಪವನ್ನು ತಿನ್ನುವ ವ್ರತ ಕೈಗೊಂಡದ್ದರಿಂದ ಅವಳಿಗೆ ಆ ಹೆಸರೇ ಬಂದಿತು; ಒಂದು ಪರ್ಣವನ್ನೂ ಸಹ ತಿನ್ನದಂತಹ ಕಠೋರ ತಪಸ್ಸಿನಲ್ಲಿ ನಿರತಳಾಗಿದ್ದರಿಂದ ಅಪರ್ಣಾ ಎಂಬ ಹೆಸರು ಪಾರ್ವತಿಗೆ ಉಂಟಾಯಿತು ಎಂದು ಹರಿವಂಶದಲ್ಲಿ ನಿರೂಪಿತವಾಗಿದೆ. ಇಲ್ಲಿಯ ಪ್ರಸಂಗ ಮತ್ತೊಂದು ರೀತಿಯಲ್ಲಿ ಆ ಹೆಸರನ್ನು ವಿವರಿಸಿದೆ. ಇಂತಹ ವ್ಯತ್ಯಾಸವನ್ನು ಕಲ್ಪಭೇದ ರೀತಿಯಲ್ಲಿ ಕೂಡಿಸಬಹುದು; ಅಥವಾ ಇದು ಆ ಪ್ರಸಂಗಕ್ಕೆ ಪೂರಕವಾದಂತಹ ಮತ್ತೊಂದು ಘಟನೆ ಎಂಬುದಾಗಿಯೂ ಅನ್ವಯಿಸಿಕೊಳ್ಳಬಹುದು. ತುಲಸಿಯನ್ನು ಅದರ ಒಂದು ಎಲೆಯೂ ಸಹ ಕೊಂಕದಂತೆ ಬೆಳೆಸುವುದು ಅತ್ಯಂತ ಹೆಚ್ಚಿನ ಪುಣ್ಯಕ್ಕೆ ಸಾಧನ ಎಂಬುದು ಈ ಪ್ರಸಂಗದ ಸಂದೇಶ.

ಪರಿಹಾರಕ್ಕಾಗಿ ಪಾರ್ವತಿಯಿಂದಲೂ ಪೂಜಿತಳಾದ ಹಿರಿಮೆ ತುಲಸಿಯದು. ಆದ್ದರಿಂದ ಸತ್ಪುತ್ರನನ್ನೂ ಸದ್ಗತಿಯನ್ನೂ ಬಯಸುವವನು ವಿಷ್ಣುಪ್ರಿಯೆಯಾದ ತುಲಸಿಯನ್ನು ತಪ್ಪದೇ ಸದಾ ಪೂಜಿಸಬೇಕು.

★ ★ ★

## ೫. ಕುರುಡು ಕಳೆದ ತುಲಸೀ

(ಸ್ಕಾಂದಪುರಾಣದ ಸನತ್ಕುಮಾರ ಸಂಹಿತೆ)

ಸುಮಾಲಿನೀ ಎಂಬವಳು ವಾಮದೇವ ಎಂಬವರ ಪುತ್ರಿ. ವಿಷ್ಣುಭಕ್ತಿಯಿಂದ ಕೂಡಿದ್ದ ಅವಳು ಸದಾ ವಿಷ್ಣುವನ್ನೇ ಆರಾಧಿಸುತ್ತಿದ್ದಳು. ಅವಳು ಒಮ್ಮೆ ಮುನಿಶ್ರೇಷ್ಠನಾದ ತಂದೆಯನ್ನು ಕುರಿತು ಕೇಳಿದಳು, 'ಪೂಜ್ಯರೇ, ನನಗೆ ಮನಸ್ಸಿಗೆ ಆನಂದ ನೀಡುವಂತಹ ವಿಷ್ಣುವಿನ ಮೇಲೆ ಭಕ್ತಿ ಇದೆ. ಇತರ ದೇವತೆಗಳಲ್ಲಿ ನನ್ನ ಮನಸ್ಸು ರಮಿಸಲಾರದು. ನಾನೀಗ ಏನು ಮಾಡಲಿ? ನನಗೆ ಯಾವ ಗತಿ ಲಭಿಸೀತು'? ವಾಮದೇವ ಮುನಿ ನುಡಿದರು, 'ತುಲಸೀದೇವಿಯನ್ನು ಆರಾಧಿಸುವುದರಿಂದ ಇತರ ದೇವತೆಗಳನ್ನು ಆರಾಧಿಸಿದ ಫಲವು ಸಹ ಲಭಿಸುವುದು[೪೫]. ಶ್ರೇಯಸ್ಸಿಗೆ ತುಲಸಿಯೇ ದೇವತೆ. ನೀನು ಅವಳನ್ನು ಆರಾಧಿಸಿ ಉತ್ತಮ ಗತಿಯನ್ನು ಪಡೆದುಕೋ'. ಅಂದಿನಿಂದ ಸುಮಾಲಿನಿಯು ಮನೆಯ ಪ್ರಾಂಗಣದಲ್ಲಿ ಶ್ರೇಷ್ಠವಾದ ಮಂಟಪವನ್ನು ಮಾಡಿ ಅದರಲ್ಲಿ ತುಲಸಿಯನ್ನು ಸ್ಥಾಪಿಸಿ ಆರಾಧಿಸತೊಡಗಿದಳು. ಆಗೊಮ್ಮೆ ಅವಳ ಹದಿನಾರು ಜನ ಸಹೋದರರು ಸಮಿತ್ತು ಹಾಗೂ ಕುಶಗಳನ್ನು ತರಲೆಂದು ಶ್ರೇಷ್ಠವಾದ ವನವೊಂದಕ್ಕೆ ತೆರಳಿದ್ದರು. ಆ ಮಧ್ಯದಲ್ಲಿ ಗೌತಮ ಮುನಿಯ ಆಶ್ರಮವನ್ನು ತಲುಪಿ ತಮ್ಮ ಸ್ನಾನದಿಂದ ಅಲ್ಲಿದ್ದ ಸರೋವರವನ್ನು ಕ್ಷೋಭೆಗೊಳಿಸಿದರು[೪೬]. ಅಲ್ಲಿಗೆ ಬಂದ ಗೌತಮರು ಸರೋವರವು

೪೫ ದೇವತೆಗಳಲ್ಲಿ ಶ್ರೀವಾಯುದೇವರ ಆರಾಧನೆಯಿಂದ ಸರ್ವೋತ್ತಮನಾದ ಶ್ರೀಹರಿಯ ಪ್ರೀತಿಯೂ, ರುದ್ರಾದಿ ಇತರ ಸಕಲದೇವತೆಗಳ ಪ್ರೀತಿಯೂ ಲಭಿಸುವಂತೆ ತುಲಸೀ ಆರಾಧನೆಯಿಂದ ಇತರ ದೇವತೆಗಳ ಆರಾಧನೆಯಲ್ಲಿ ಉಂಟಾಗುವ ಲೋಪವು ಪರಿಹಾರವಾಗುವುದು ಎಂದು ತಿಳಿಯಬೇಕು. ಆ ದೋಷವು ಪರಿಹಾರವಾಗಿ ಅವರನ್ನು ತಾರತಮ್ಯಕ್ರಮದಲ್ಲಿ ಆರಾಧಿಸುವ ಸದ್ಬುದ್ಧಿ ಹುಟ್ಟುವುದು ಎಂದೂ ಸಹ ಇವುಗಳಿಂದ ತಿಳಿಯಬಹುದು.

೪೬ ಸರೋವರಗಳು ತೀರ್ಥವೆಂದು ಮಾನ್ಯವಾಗಿ ಇರುವ ಪವಿತ್ರ ಸ್ಥಳಗಳು. ಅವುಗಳ ಪಾವಿತ್ರ್ಯವನ್ನು ಸಂರಕ್ಷಿಸುವುದೂ ಸಹ ತೀರ್ಥಯಾತ್ರೆಯ ಒಂದು ಪ್ರಮುಖ ಅಂಗ. ಅವುಗಳನ್ನು ಕಲುಷಿತಗೊಳಿಸಿದಾಗ ಅಪಾರ ದೋಷವು ಉಂಟಾಗುವುದು. ಮಹಾಭಾರತದಲ್ಲಿ ಬಂದಿರುವಂತೆ ವೃತ್ರಾಸುರನ ಸಂಹಾರದಿಂದ ಒದಗಿದ ಬ್ರಹ್ಮಹತ್ಯಾ ಪಾಪವನ್ನು ಇಂದ್ರದೇವರು ಬ್ರಹ್ಮದೇವರ ಆದೇಶದಂತೆ ನಾಲ್ಕು ಭಾಗಗಳನ್ನಾಗಿ ವಿಂಗಡಿಸಿ ಅವುಗಳನ್ನು ಕ್ರಮವಾಗಿ, ನೀರು, ಭೂಮಿ, ಅಗ್ನಿ ಹಾಗೂ ಸ್ತ್ರೀಯರಿಗೆ ಹಂಚಿ ಕೊಟ್ಟರು; ಅವುಗಳಲ್ಲಿ ನೆಲೆಸಿದ ಬ್ರಹ್ಮಹತ್ಯಾ ಪಾಪವು ಅವುಗಳನ್ನು ದುರುಪಯೋಗಪಡಿಸಿಕೊಂಡವರಿಗೆ

ಮಲಿನವಾದದ್ದನ್ನು ಕಂಡು, 'ನೀವೆಲ್ಲ ಅಂಧರಾಗಿರಿ' ಎಂದು ಅವರನ್ನು ಶಪಿಸಿದರು. ಅವರ ಶಾಪದಿಂದ ಅಂಧರಾದ ಆ ಮುನಿಪುತ್ರರು ತುಂಬ ದುಃಖಿತರಾಗಿ ದಾರಿಕಾಣದವರಾಗಿ ಕೊನೆಗೂ ತಮ್ಮ ಆಶ್ರಮವನ್ನು ತಲುಪಿದರು. ಹಾಗೆ ಬಂದ ಅವರನ್ನು ನೋಡಿ ವಾಮದೇವ ಮುನಿಯು ಮನಸ್ಸಿನಲ್ಲಿ ವಿಸ್ಮಯಗೊಂಡವರಾಗಿ ದಿವ್ಯದೃಷ್ಟಿಯಿಂದಲೇ ನಡೆದ ಸಂಗತಿಯನ್ನು ತಿಳಿದುಕೊಂಡು ದುಃಖದಿಂದ ಪರಿತಪಿಸಿದರು.

ಪುತ್ರಿಯಾದ ಸುಮಾಲಿನಿಯು ತಂದೆಯು ಶೋಕತಪ್ತನಾದದ್ದನ್ನು ಕಂಡು ಅದರ ಕಾರಣವನ್ನು ಕೇಳಿ ತಿಳಿದುಕೊಂಡಳು. ತಂದೆಯನ್ನು ವಿಷ್ಣುವಿನ ಪೂಜೆಗೆ ತೆರಳಲೆಂದು ಕಳುಹಿಸಿಕೊಟ್ಟಳು. ತಾನು ಪ್ರಾಂಗಣಕ್ಕೆ ತೆರಳಿ ತುಲಸಿಯನ್ನು ಸೋದರರ ಕುರುಡನ್ನು ಹೋಗಲಾಡಿಸಲು ಬೇಡಿಕೊಂಡಳು. ಕರುಣಾಳುವಾದ ತುಲಸಿಯು ಅವಳ ಭಕ್ತಿಗೆ ಮೆಚ್ಚಿ ಅವರೆಲ್ಲರಿಗೂ ದೃಷ್ಟಿ ಮರಳುವಂತೆ ಮಾಡಿದಳು[೪೭]. ಅತ್ತ ಗೌತಮರು ಹಾಗೆ ಶಾಪ ನೀಡಿದ್ದಕ್ಕೆ ಪಶ್ಚಾತ್ತಾಪಪಟ್ಟು ಆ ಮುನಿಪುತ್ರರನ್ನು ಹುಡುಕಿ ಅಲ್ಲಿಗೆ ಆಗಮಿಸಿದರು. ಅವರೆಲ್ಲರೂ ಗೌತಮಮುನಿಯನ್ನು ಅರ್ಘ್ಯಾದಿಗಳಿಂದ ಸತ್ಕರಿಸಿ ಪೂಜಿಸಿದರು. ಧ್ಯಾನ ದೃಷ್ಟಿಯಿಂದ ಎಲ್ಲವನ್ನೂ ತಿಳಿದಿದ್ದ ಗೌತಮಮುನಿಗಳು ಸುಮಾಲಿನಿಯ ತುಲಸಿ ಆರಾಧನೆಯ ವೈಭವವನ್ನು ನೋಡಲು ಬಂದಿರುವುದಾಗಿ ತಿಳಿಸಿದರು ಮತ್ತು ಅವಳ ದರ್ಶನದಿಂದ ಪುನೀತರಾದವೆಂದು ತಿಳಿಸಿ ಮರಳಿದರು. ತಮ್ಮ ಹೆಂಡತಿ ಮಕ್ಕಳೊಂದಿಗೆ ತಮ್ಮ ಆಶ್ರಮದ ಪ್ರಾಂಗಣದಲ್ಲಿ ಮಂಟಪವನ್ನು ಸ್ಥಾಪಿಸಿ ಅದರಲ್ಲಿ ತುಲಸಿಯನ್ನು ಬೆಳೆಸಿ ಪೂಜಿಸಿದರು. ಆದ್ದರಿಂದ ತಿಳಿದವರು ಸರ್ವ ಪ್ರಯತ್ನದಿಂದಲೂ ಸದಾ ತುಲಸಿಯನ್ನು ಪೂಜಿಸಬೇಕು. ಪೂಜಿತಳಾದ ತುಲಸಿಯು ಸಕಲ ಕಾಮನೆಗಳನ್ನು ದಯಪಾಲಿಸುವಳು.

★ ★ ★

---

ತಲುಪುವಂತೆ ಅವುಗಳು ಆ ಪಾಪವನ್ನು ಪರಿಹರಿಸಿಕೊಳ್ಳುವ ಉಪಾಯವನ್ನೂ ಸಹ ಸೂಚಿಸಿದವು. ಪವಿತ್ರವಾದ ತೀರ್ಥಗಳನ್ನು ಮಲಿನಗೊಳಿಸಿದವರಿಗೆ ಈ ಪ್ರಸಂಗದಲ್ಲಿ ನಿರೂಪಿತವಾಗಿರುವಂತೆ ಬ್ರಹ್ಮಹತ್ಯೆಯ ದೋಷ ಉಂಟಾಗುವುದರಿಂದ ಗೌತಮ ಮುನಿಗಳು ಆ ಸ್ತ್ರೀಯರಿಗೆ ಆ ರೀತಿಯಾದ ಶಾಪವನ್ನು ನೀಡಿದ್ದು ಸಮುಚಿತ ಎಂದು ತಿಳಿಯುತ್ತದೆ. ಈ ಕಥೆಯಲ್ಲಿ ಪರಿಸರ ಸಂರಕ್ಷಣೆಯ ಸಂದೇಶವೂ ಸಹ ಅಡಗಿರುವುದನ್ನು ಗಮನಿಸಬೇಕು. ಇಲ್ಲಿ ಅಂಧತ್ವ ಶಾಪವೂ ಸಹ ಅರ್ಥವತ್ತಾದುದು. ಅಂಧತ್ವವು ಅಜ್ಞಾನದ ಸಂಕೇತ. ಶಾಸ್ತ್ರತತ್ತ್ವದ ಅರಿವನ್ನು ಹೊಂದದೇ ಅಪರಾಧವೆಸಗಿದ್ದಾಗಿ ಅವರಿಗೆ ಅಂಧತ್ವರೂಪ ಶಾಪವು ಒದಗಿತು ಎಂಬಲ್ಲಿಯೂ ಸ್ವಾರಸ್ಯವನ್ನು ಗಮನಿಸಬಹುದು.

೪೭ ತುಲಸಿಯ ಆರಾಧನೆಯಿಂದ ದೃಷ್ಟಿಲಾಭ ಎಂದು ತಿಳಿಯುವುದು. ಇದು ಶ್ರೀರಾಘವೇಂದ್ರ ಸ್ತೋತ್ರದ "ಅಂಧೋಽಪಿ ದಿವ್ಯದೃಷ್ಟಿಃ ಸ್ಯಾತ್" ಎಂಬ ಮಾತನ್ನು ಅರ್ಥಮಾಡಿಕೊಳ್ಳಲು ನೆರವಾಗುವ ಪ್ರಸಂಗ. ತುಲಸಿಯ ಆರಾಧನೆಯಿಂದ ಬಾಹ್ಯದೃಷ್ಟಿಯೊಂದಿಗೆ ಯಥೋಚಿತವಾಗಿ ದಿವ್ಯದೃಷ್ಟಿಯೂ ಸಹ ಲಭಿಸುವುದು ಎಂದೂ ತಿಳಿಯುವುದು.

## ೬. ಬ್ರಹ್ಮಲೋಕಕ್ಕೆ ತೆರಳಿದ ಬ್ರಹ್ಮರಾಕ್ಷಸ
### (ವಿಷ್ಣುಧರ್ಮೋತ್ತರಪುರಾಣ)

ಹಿಂದೆ ಹರಿಮೇಧ ಮತ್ತು ಸುಮೇಧ ಎಂಬ ಇಬ್ಬರು ವಿಪ್ರಶ್ರೇಷ್ಠರು ತೀರ್ಥಯಾತ್ರೆಯ ನಿಮಿತ್ತದಿಂದ ಭೂಮಿಯಲ್ಲಿ ಸಂಚರಿಸುತ್ತಿದ್ದರು. ಸಕಲ ಪ್ರಾಣಿಗಳಲ್ಲೂ ದಯೆಯಿಂದ ಕೂಡಿದವರೂ ಸರ್ವತತ್ತ್ವಾರ್ಥಗಳನ್ನು ಬಲ್ಲವರೂ ಆಗಿದ್ದ ಅವರು ಗಂಗಾಯಾತ್ರೆಯ ಪ್ರಸಂಗದಿಂದ ಉತ್ತರದಿಕ್ಕಿಗೆ ತೆರಳಿದರು. ಆಗೊಮ್ಮೆ ಅರಣ್ಯದಲ್ಲಿ ಶ್ರಮಪೀಡಿತರಾಗಿ ಅಲ್ಲಿ ತುಲಸಿಯ ವನವನ್ನು ಕಂಡರು. ಅವರಿಬ್ಬರಲ್ಲಿ ಸುಮೇಧನು ಆ ತುಲಸೀ ವನವನ್ನು ಪ್ರದಕ್ಷಿಣೆ[೪೮] ಮಾಡಿ ಭಕ್ತಿಯಿಂದ ನಮಸ್ಕರಿಸಿದ. ಅದನ್ನು ಕಂಡು ಹರಿಮೇಧನು ತುಂಬಾಸಂತೋಷದಿಂದ ತುಲಸಿಯ ಮಹಾತ್ಮ್ಯವನ್ನು ತಿಳಿಸಲು ಬಹಳವಾಗಿ ಕೇಳಿಕೊಂಡ. ''ಎಲೈ ವಿಪ್ರಶ್ರೇಷ್ಠನೇ! ಭೂಮಿಯಲ್ಲಿ ಬಹಳಷ್ಟು ಶ್ರೇಷ್ಠರಾದ ವಿಪ್ರರಿರುವಾಗ ನೀನು ಇದಕ್ಕೇಕೆ ನಮಸ್ಕರಿಸಿದೆ?'' ಸುಮೇಧನು ತಿಳಿಸಿದ, ''ನೀನು ಒಳ್ಳೆಯದನ್ನು ಕೇಳಿದೆ. ಇಲ್ಲಿ ಬಿಸಿಲು ಬಹಳವಾಗಿ ಬಾಧಿಸುತ್ತಿದೆ. ಈ ಆಲದ ಮರದ ಬಳಿಗೆ ತೆರಳೋಣ'' ಎಂದು ಅವನೊಡನೆ ದೊಡ್ಡ ಪೊಟರೆಗಳಿಂದ ಕೂಡಿದ, ದಟ್ಟ ಎಲೆಗಳಿಂದ ತುಂಬಿದ್ದ ಆ ವಟವೃಕ್ಷದ ನೆರಳಲ್ಲಿ ಕುಳಿತರು. ಸುಮೇಧನು ಬಳಲಿಕೆಯನ್ನು ಪರಿಹರಿಸಿಕೊಂಡು, ದೇವನಾದ ಶ್ರೀಹರಿಯನ್ನು ಸ್ಮರಿಸಿಕೊಂಡು ವಿಷಯವನ್ನು ಹೇಳಲು ಆರಂಭ ಮಾಡಿದ.

ಹಿಂದೆ ದೂರ್ವಾಸರ ಶಾಪದಿಂದ ಐಶ್ವರ್ಯ ಕಳೆದುಕೊಂಡ ಇಂದ್ರನು ಶ್ರೀಹರಿಯ ಆದೇಶದಂತೆ ಇತರ ದೇವತೆಗಳಿಂದ ಕೂಡಿಕೊಂಡು ಕ್ಷೀರಸಾಗರವನ್ನು ಮಥನ ಮಾಡಿದ. ಹಾಗೆ ಮಥನ ಮಾಡಿದ ಕ್ಷೀರಸಾಗರದಿಂದ ಐರಾವತ, ಕಲ್ಪವೃಕ್ಷ, ಚಂದ್ರ, ಮಹಾಲಕ್ಷ್ಮೀ, ಉಚ್ಚೈಃಶ್ರವಸ್ಸು ಎಂಬ ಕುದುರೆ, ಕೌಸ್ತುಭಮಣಿ, ಹಾಗೂ ಶ್ರೀಹರಿಯೇ ಆದ ಧನ್ವಂತರಿ ಅದರಲ್ಲಿ ಪ್ರಾದುರ್ಭವಿಸಿದರು. ಅವೆಲ್ಲವೂ ಲೋಕಕ್ಕೆ ಶ್ರೇಯಸ್ಸು ಉಂಟು ಮಾಡುವಂತಹವು, ಎಂದು ಧನ್ವಂತರಿಯು ಅಮೃತಕಲಶವನ್ನು ತನ್ನ ಎರಡೂ ಕೈಗಳಲ್ಲಿ ಹಿಡಿದುಕೊಂಡ. ಅವನ ಕಣ್ಣಿನಿಂದ ಸುರಿದ ಆನಂದಾಶ್ರುವಿನ ಹನಿಗಳು ಅಮೃತಕಲಶದಲ್ಲಿ ಬಿದ್ದವು. ಕೂಡಲೇ ಅಲ್ಲಿ ತುಲಸಿಯು ಪ್ರಾದುರ್ಭವಿಸಿದಳು. ಪ್ರಸನ್ನವದನನಾದ ಶ್ರೀಹರಿಯು ಅವಳನ್ನು ತೊಡೆಯ ಮೇಲೆ ಕೂಡಿಸಿಕೊಂಡು ಸಕಲ ಲೋಕಗಳನ್ನು ಪಾವನಗೊಳಿಸು ಎಂಬುದಾಗಿ ವರ ನೀಡಿದ. ಆದರಿಂದಾಗಿ ಜಗನ್ನಾಥನಾದ ಶ್ರೀಹರಿಗೆ ತುಲಸಿಯು ಅತ್ಯಂತ ಪ್ರಿಯಳೆನಿಸಿದಳು. ತುಲಸಿಯ ವನ ಎಲ್ಲಿರುವದೋ ಅಲ್ಲಿ ಶ್ರೀಹರಿಯು ನೆಲಸಿರುವನು. ಅವಳನ್ನು ಪೂಜಿಸಿದರೆ ತಾನೂ ಪೂಜಿತನಾಗುವನು. ವಿಷ್ಣುವಿನ ಶಿರಸ್ಸಿನ ಮೇಲೆ ತುಲಸೀಪತ್ರವನ್ನು ಸಮರ್ಪಿಸಿ ಪೂಜಿಸಿದವನು ಸ್ವರ್ಗಲೋಕದಲ್ಲಿ ದೇವಗಣಗಳಿಂದ ವಿಶೇಷವಾಗಿ ಆದರಿಸಲ್ಪಡುವನು.

ಹೀಗೆ ಮಹಾತ್ಮನಾದ ಸುಮೇಧನು ತಿಳಿಸುತ್ತಿದ್ದಂತೆ ಸನಿಹದಲ್ಲೇ ಮಂಗಲಕರವಾದ ದೊಡ್ಡ ವಿಮಾನವೊಂದು ಕಾಣಿಸಿಕೊಂಡಿತು. ಆ ವೇಳೆಗೆ ಆ ವಟವೃಕ್ಷದಿಂದ ತಮ್ಮ ತೇಜಸ್ಸಿನಿಂದ ನಾಲ್ಕು

---

೪೮ ಇದು ತುಲಸಿಯ ಪ್ರದಕ್ಷಿಣೆಗೆ ಲಭಿಸುವ ಫಲವನ್ನು ತಿಳಿಸುವ ಉಪಾಖ್ಯಾನ.

ದಿಕ್ಕುಗಳನ್ನೂ ಬೆಳಗುತ್ತಿದ್ದ ಲಕ್ಷಣವಾಗಿ ಸರ್ವಾಭರಣಭೂಷಿತರಾದ ಇಬ್ಬರು ಹೊರಬಂದು ಸುಮೇಧ ಹಾಗೂ ಹರಿಮೇಧರಿಗೆ ನಮಸ್ಕರಿಸಿದರು. ವಿಸ್ಮಯಭರಿತರಾದ ಅವರಿಬ್ಬರೂ, 'ದೇವತೆಗಳಂತಿರುವ ನೀವು ನಮಗೇತಕ್ಕೆ ನಮಸ್ಕರಿಸಿದಿರಿ'? ಎಂದು ಕೇಳಿದರು. ಅದಕ್ಕೆ ಅವರಿಬ್ಬರೂ ಪುನಃ ಪ್ರದಕ್ಷಿಣೆ ನಮಸ್ಕಾರ ಮಾಡಿ ತಿಳಿಸಿದರು, 'ನೀವಿಬ್ಬರೂ ನಮಗೆ ತಂದೆ ತಾಯಿಗಳಿದ್ದಂತೆ. ನಿಮ್ಮ ಅನುಗ್ರಹದಿಂದ ಭಯಂಕರವಾದ ಬ್ರಹ್ಮಶಾಪದಿಂದ ನಾವು ಬಿಡುಗಡೆ ಹೊಂದಿದೆವು'. ಅವರಿಬ್ಬರಲ್ಲಿ ಹಿರಿಯನಾದವನು ಹೇಳಿದ; 'ನಾನು ಆಸ್ತಿಕ ಎಂಬ ದೇವಲೋಕದ ವ್ಯಕ್ತಿ. ನಾನು ಅಪ್ಸರೆಯರ ಗುಂಪಿನೊಂದಿಗೆ ಬಹುಕಾಲ ವಿಹರಿಸಿದೆ. ಆಗ ಆ ಸ್ತ್ರೀಯರ ಬಿಚ್ಚಿದ ಮುಡಿಗಳಿಂದ ಹೂಗಳು ತಪಃಪ್ರಭಾವದಿಂದ ಕೂಡಿದ ರೋಮಶ ಮುನಿಯ ಆಶ್ರಮದಲ್ಲಿ ಬಿದ್ದವು. ಅವುಗಳನ್ನು ನೋಡಿ ಆ ಮುನಿಶ್ರೇಷ್ಠನು ಕೋಪಗೊಂಡರು. 'ಇದರಲ್ಲಿ ಸ್ತ್ರೀಯರದೇನೂ ತಪ್ಪಿಲ್ಲ, ತಪ್ಪು ಇವನದೇ' ಎಂದು 'ನೀನು ಬ್ರಹ್ಮರಾಕ್ಷಸರಿಂದ ಕೂಡಿದ ವಟವೃಕ್ಷವಾಗು' ಎಂದು ನನ್ನನ್ನು ಶಪಿಸಿದರು[೪೯]. ನಾನು ಪರಿಪರಿಯಾಗಿ ಕೇಳಿಕೊಂಡಾಗ, 'ತುಲಸೀಪತ್ರದ ಮಾಹಾತ್ಮ್ಯ, ವಿಷ್ಣುವಿನ ನಾಮವನ್ನು ನೀನು ದ್ವಿಜರ ಮುಖದಿಂದ[೫೦] ಕೇಳಿದಾಗ ನೀನು ಶಾಪದಿಂದ ಬಿಡುಗಡೆ ಹೊಂದುತ್ತೀ' ಎಂದರು. ನಿನ್ನ ಅನುಗ್ರಹದಿಂದ ನನಗೀಗ ಬಿಡುಗಡೆಯಾಗಿದೆ. ಈ ಇನ್ನೊಬ್ಬನು ಹಿಂದೆ ಗುರುಸೇವೆ ಮಾಡಿಕೊಂಡಿದ್ದ ಒಬ್ಬ ಮುನಿ, ಗುರುವಿನ ಆದೇಶವನ್ನು ಉಲ್ಲಂಘಿಸಿದ್ದರಿಂದ ಬ್ರಹ್ಮರಾಕ್ಷಸನಾಗಿದ್ದಾನೆ. ನಿಮ್ಮ ಅನುಗ್ರಹದಿಂದ ಈಗ ಇವನೂ ಶಾಪಮುಕ್ತನಾದ. ನಿಮ್ಮಿಬ್ಬರ ತೀರ್ಥಯಾತ್ರೆ ಸಫಲವಾಗಲಿ. ಪುಣ್ಯಗಳು ಉತ್ತರೋತ್ತರ ದಿನದಿನವೂ ಹೆಚ್ಚಲಿ', ಹೀಗೆ ತಿಳಿಸಿ ಅವರಿಬ್ಬರೂ ಅಲ್ಲಿಗೆ ಆಗಮಿಸಿದ ವಿಮಾನವನ್ನೇರಿದರು. ಅಲ್ಲಿಂದ ತೆರಳುತ್ತ 'ನೀವು ಇಲ್ಲಿ ಬಗೆಬಗೆಯ ಮನೋಹರವಾದ ಭೋಗಗಳನ್ನು ಅನುಭವಿಸಿದ ಮೇಲೆ ಸ್ವರ್ಗಕ್ಕೆ ತೆರಳುವಿರಿ, ಸಂಶಯವಿಲ್ಲ'ಎಂದು ನುಡಿದು ದೇವಲೋಕಕ್ಕೆ ತೆರಳಿದರು. ತುಲಸಿಯ ಮಾಹಾತ್ಮ್ಯ ಇಂತಹುದು. ಈ ತುಲಸಿ ಮಾಹಾತ್ಮ್ಯವನ್ನು ಶ್ರಾದ್ಧಕಾಲದಲ್ಲಿ ಪಠಿಸುವವರ ಪಿತೃಗಳೆಲ್ಲರೂ ಪರಗತಿಗೆ ತೆರಳುವರು. ಸಕಲ ಪಾಪಗಳನ್ನು ಪರಿಹರಿಸುವ ಪವಿತ್ರವಾದ ಇದನ್ನು ಪಠಿಸುವವನು ದೇವತೆಗಳಿಂದಲೂ ಆದರಿಸಲ್ಪಡುವನು.

★ ★ ★

## ೭. ಸಕಲ ಪಾಪಗಳನ್ನೂ ಕಳೆದ ತುಲಸೀ ಕಾನನ

### (ವಿಷ್ಣುಧರ್ಮೋತ್ತರಪುರಾಣ)

ಒಬ್ಬ ಬೇಡನಿದ್ದ. ಪ್ರಾಣಿಗಳಿಗಂತೂ ಅವನು ಯಮನೇ ಆಗಿದ್ದ. ದೊಡ್ಡ ಅರಣ್ಯದಲ್ಲಿ ಮೃಗಗಳನ್ನು ಕೊಲ್ಲುತ್ತ ಕ್ರೂರಕರ್ಮಿಯಾದ ಅವನು ಅಲೆಯುತ್ತಿದ್ದ. ಅವನ ದುಷ್ಟತನಕ್ಕೆ

---

೪೯ ಮುನಿಗಳ ಪವಿತ್ರವಾದ ಆಶ್ರಮಗಳನ್ನು ನಿರ್ಮಾಲ್ಯಾದಿಗಳಿಂದ ಅಪವಿತ್ರಗೊಳಿಸುವುದು ಪಾತಕ ಎಂಬ ವಿವರ ಇಲ್ಲಿದೆ. ತೀರ್ಥಗಳ ಪಾವಿತ್ರ್ಯವನ್ನು ಸಂರಕ್ಷಿಸುವಂತೆ ಋಷಿಮುನಿಗಳ ಆಶ್ರಮಗಳ ಪಾವಿತ್ರ್ಯವನ್ನು ಸಂರಕ್ಷಿಸುವುದು ಸಾಧನೆಯ ಒಂದು ಮುಖ. ತೀರ್ಥಯಾತ್ರೆಯ ಮುಖ್ಯ ಉದ್ದೇಶ ಪುಣ್ಯಸಂಪಾದನೆಯೇ ಹೊರತು, ಪಾಪಸಂಪಾದನೆಯಾಗಕೂಡದು. ಋಷಿಮುನಿಗಳಿಗೆ ಮಾಡುವ ಯಾವುದೇ ಅಪಚಾರವೂ ಸಹ ಹೆಚ್ಚಿನ ಅನರ್ಥಕ್ಕೆ ಕಾರಣ. ಆದ್ದರಿಂದ, ಯಾತ್ರಿಕರು ಮೊದಲಾದವರು ತುಂಬಾ ಎಚ್ಚರಿಕೆಯಿಂದ ಪುಣ್ಯವೃದ್ಧಿಯಾಗುವಂತೆ ಸಾಧನ ಮಾಡಿ ಉದ್ಧೃತರಾಗಬೇಕು ಎಂದು ಇಲ್ಲಿಯ ಸಂದೇಶ.

೫೦ ತುಲಸಿಯ ಪರಿಪರಿಯ ಸೇವೆಯಂತೆ ಅದರ ಮಾಹಾತ್ಮ್ಯದ ಶ್ರವಣವೂ ಸಹ ತಾರಕ.

ಹೇಸಿ ಜನ ಅವನಿಂದ ದೂರಾಗಿದ್ದರು. ಮಿತ್ರರಿಲ್ಲ, ಬಂಧುಗಳಿಲ್ಲ, ಹೀಗೆಯೇ ದಿನಗಳು ಕಳೆದವು. ಕೊನೆಗೊಮ್ಮೆ ಅವನಿಗೆ ಬೇಟೆಗೆ ಒಂದು ಮೃಗವೂ ಸಹ ದೊರೆಯದಾಯಿತು. ಹಾಗೆ ಚಿಂತೆಗೊಳಗಾದವನಿಗೆ ಪಂಚಾಗ್ನಿಯ ತಾಪವೂ ಸಹ ತಂಪೇ ಎನ್ನಿಸುವಂತಾಗುವುದು. ಎಷ್ಟು ಹುಡುಕಿದರೂ ಅರಣ್ಯದಲ್ಲಿ ಒಂದು ಮೃಗವೂ ಸಿಗಲಿಲ್ಲ. ನಾನೀಗ ಹಸಿವಿನಿಂದ ಸತ್ತಲ್ಲಿ ನರಿ ಮೊದಲಾದ ಪ್ರಾಣಿಗಳು ನನ್ನ ದೇಹವನ್ನು ತಿಂದುಹಾಕುವುದು. ಬಂಧುಗಳಾರೂ ಇತ್ತ ಸುಳಿಯರು ಎಂದು ರೋದಿಸುತ್ತಿದ್ದ. ಆ ವೇಳೆಗೆ ಮೃಗವೊಂದು ಅವನ ಮುಂದೆ ಕಾಣಿಸಿಕೊಂಡಿತು. ಅದನ್ನು ಕಾಣುತ್ತಲೇ ಸ್ವಲ್ಪ ನೆಮ್ಮದಿ ಲಭಿಸಿ ಅದನ್ನು ಹಿಡಿಯಲೆಂದು ಧನುಸ್ಸನ್ನು ಕೈಗೆತ್ತಿಕೊಂಡ. ಆ ಕ್ರೂರಮೃಗವು ಅಂಜಿ ಆ ಕಾಡನ್ನು ತೊರೆದು ತುಲಸೀವನವನ್ನು ಹೊಕ್ಕಿತು. ತಿರ್ಯಕ್ ಜಂತುಗಳಿಗೂ ಸಹ ಪಾಪಗಳು ಸವೆದಾಗ ಪುಣ್ಯಭೂಮಿಯು ಲಭಿಸುವ ಯೋಗ ಲಭಿಸುತ್ತದೆ. ಮಾಡಿದ ಕರ್ಮ ಶುಭವೋ ಅಶುಭವೋ ಹಗ್ಗದಿಂದ ಬಿಗಿದೋ ಎಂಬಂತೆ ಅದರ ಫಲದೆಡೆಗೆ ಎಳೆದೊಯ್ಯುವುದು. ಆ ವೇಳೆಗೆ ಅದನ್ನು ಬೆನ್ನಟ್ಟಿದ ಆ ವ್ಯಾಧ ಆ ಮೃಗವನ್ನು ಕೊಂದು ಹಾಕಿದ. ಅದರ ಮಾಂಸವನ್ನು ತೆಗೆದುಕೊಂಡು ಸಂತುಷ್ಟ ಮನಸ್ಕನಾಗಿ ಅವನು ಹೆಂಡತಿಯನ್ನು ನೆನೆಯುತ್ತ ತನ್ನ ಮನೆಗೆ ತೆರಳಿದ.

ಆ ಮಾರ್ಗದಲ್ಲಿ ಕಾಡ್ಗಿಚ್ಚು ಉದ್ಭವಿಸಿ ಕಾಡನ್ನು ದಹಿಸಿತು. ಆ ಬೇಡನೂ ಕೂಡ ಅದರಲ್ಲಿ ದಹಿಸಿಹೋದ. ಅವನು ಸಾಯುತ್ತಲೇ ಯಮದೂತರು ನಾಯಿಗಳ ಹಿಂಡಿನೊಂದಿಗೆ ಕೂಡಿ ಕೈಯಲ್ಲಿ ಖಡ್ಗತೋಮರಗಳನ್ನು ಹಿಡಿದುಕೊಂಡು ಅಲ್ಲಿಗೆ ಆಗಮಿಸಿದರು. ಕರಾಳ ದಂಷ್ಟ್ರಗಳು, ಭಯಂಕರ ಮುಖ, ನಿಮಿರಿ ನಿಂತ ತಲೆಕೂದಲು, ಕಾಳರಾತ್ರಿಯಂಥ ಕಾಂತಿ; ಅವರನ್ನು ಕಾಣುತ್ತಲೇ ಬೇಡ ಭಯದಿಂದ ನಡುಗತೊಡಗಿದ. ಕೆಲವರು ಅವನನ್ನು ಹೊಡೆದರು. ಕೆಲವರು ಪಾಶದಿಂದ ಬಂಧಿಸಿದರು. ಯಮದೇವರ ಬಳಿಗೆ ಕರೆದೊಯ್ಯಲು ಸಿದ್ಧರಾದರು. ಆ ವೇಳೆಗೆ ಭಕ್ತವತ್ಸಲನಾದ ಜಗನ್ನಾಥನಾದ ಶ್ರೀಹರಿ ಆ ಬೇಡನನ್ನು ಕರೆತರಲೆಂದು ತನ್ನ ದೂತರನ್ನು ಅಲ್ಲಿಗೆ ಕಳಿಸಿಕೊಟ್ಟ. ಹತ್ತು ದಿಕ್ಕುಗಳನ್ನು ಬೆಳಗುತ್ತ ವಿಷ್ಣುದೂತರು ಅಲ್ಲಿಗೆ ಆಗಮಿಸುತ್ತಲೇ ಯಮದೂತರು ಅಂಜಿ ಆ ಬೇಡನನ್ನು ಬಿಟ್ಟು ಸ್ವಲ್ಪ ದೂರಕ್ಕೆ ಓಡಿದರು. ಭಯಗೊಂಡಿದ್ದ ಆ ಬೇಡನಿಗೆ ವಿಷ್ಣುದೂತರು ಧೈರ್ಯವಿತ್ತು ಯಮದೂತರಿಗೆ ಅವನನ್ನು ಬಿಡುಗಡೆ ಮಾಡಲು ತಿಳಿಸಿದರು. ಅಚ್ಚರಿಪಟ್ಟ ಯಮದೂತರು ತಮ್ಮ ಒಡೆಯನಾದ ಯಮನ ಶಾಸನದಂತೆ ಆ ಪಾಪಿಯನ್ನು ಕರೆದೊಯ್ಯುವುದಾಗಿ ತಿಳಿಸಿದರು. ವಿಷ್ಣುದೂತರು ಅವನು ಪಾಪಿ ಎಂಬುದನ್ನು ಒಪ್ಪದೆ ಅವನನ್ನು ಬಿಡುಗಡೆ ಮಾಡಲು ತಿಳಿಸಿದರು. ಆಗ ಯಮದೂತರು ವಿಷ್ಣು ಭಕ್ತರನ್ನು ಹೊರತು ಇತರರನ್ನು ತಾವು ಯಮಲೋಕಕ್ಕೆ ಕರೆದೊಯ್ಯುವುದು ನಿಶ್ಚಿತ ಎಂಬುದಾಗಿ ತಿಳಿಸಿ ವಿಷ್ಣು ಭಕ್ತರ ಲಕ್ಷಣಗಳನ್ನು ತಿಳಿಸಿದರು. ಅವರು ಹೇಳಿದ ಭಾಗವತ ಧರ್ಮಗಳಲ್ಲಿ ತನ್ನಲ್ಲಿ ಒಂದೂ ಸಹ ಇಲ್ಲವೆಂಬುದನ್ನು ಅರಿತ ಆ ಬೇಡ ಪರಿತಪಿಸುತ್ತ ಶ್ರೀಹರಿಯ ನಾಮಗಳನ್ನು ಉಚ್ಚರಿಸತೊಡಗಿದನು. ಆಗ ವಿಷ್ಣುದೂತರು ಯಮದೂತರಿಗೆ ಅವನು ಪರಮ ಪಾಪಿಯಾಗಿದ್ದರೂ ಕೊನೆಗಾಲದಲ್ಲಿ ಮೃಗವನ್ನು ಬೇಟೆಯಾಡಲೆಂದು

[೫೧]ತುಲಸೀವನವನ್ನು ಪ್ರವೇಶಿಸಿದ್ದರಿಂದ ಅವನ ಸಕಲ ಪಾಪಗಳೂ ಸಹ ಪರಿಹಾರವಾದುದರಿಂದ ಅವನನ್ನು ಕರೆದೊಯ್ಯಲಾಗದು ಎಂದು ಮನವರಿಕೆ ಮಾಡಿಕೊಟ್ಟರು ಹಾಗೂ ಆ ಬೇಡನನ್ನು ವಿಮಾನದಲ್ಲಿ ಕುಳ್ಳಿರಿಸಿಕೊಂಡು ವಿಷ್ಣುಲೋಕಕ್ಕೆ ತೆರಳಿದರು. ಇದರಿಂದ ತುಲಸಿಯ ನಾಮವನ್ನು ಉಚ್ಚರಿಸುವುದು, ನಮಸ್ಕರಿಸುವುದು, ಭಕ್ಷಿಸುವುದೂ, ದರ್ಶನ ಮಾಡುವುದೂ ಸಹ ಸಕಲ ಪಾಪಗಳನ್ನು ಪರಿಹರಿಸುವ ಶ್ರೇಷ್ಠ ಪುಣ್ಯಕಾರ್ಯ ಎಂದು ತಿಳಿಯುವುದು.

★ ★ ★

## ೮. ತುಲಸಿಯಿಂದ ಆದ ವಿವಾಹ

### (ಪದ್ಮಪುರಾಣ)

ದುರ್ಗಾರಣ್ಯವೆಂಬ ಪಟ್ಟಣ. ಸುಶೀಲ ಎಂಬವನು ಅದರ ರಾಜ. ವಸುಸೇನೆ ಎಂಬುವಳು ಅವನ ಹೆಂಡತಿ. ಅವಳು ಪರಮ ಪತಿವ್ರತೆ, ಅಪ್ರತಿಮ ಸುಂದರಿ. ದೇವಸೇನೆ ಎಂಬುವಳು ಅವರಿಬ್ಬರ ಪುತ್ರಿ. ಅವಳೂ ಸಹ ಅನುಪಮ ಸುಂದರಿ. ಬಾಲ್ಯದಿಂದಲೂ ವೈಷ್ಣವರನ್ನು ಸಂತೋಷಪಡಿಸುವುದು, ಪ್ರತಿನಿತ್ಯ ತುಲಸಿಯನ್ನು ಪೂಜಿಸುವುದು ಅವಳ ಮುಖ್ಯ ಕಾರ್ಯವಾಗಿತ್ತು. ಅವಳು ವಿವಾಹ ಯೋಗ್ಯ ವಯಸ್ಸನ್ನು ತಲುಪಿದಾಗ ರಾಜ ಅವಳ ಸ್ವಯಂವರದ ಬಗ್ಗೆ ಚಿಂತಿಸಿದ. ಸ್ವಯಂವರಕ್ಕೆಂದು ಆಗಮಿಸಿದ ಪ್ರತಿಯೊಬ್ಬ ರಾಜಕುಮಾರನನ್ನು ಅವಳು 'ಶ್ವೇತದ್ವೀಪಕ್ಕೆ ಹೋಗಿದ್ದಿರಾ' ಎಂದು ಕೇಳುತ್ತಿದ್ದಳು. ಅದಕ್ಕೆ ಇಲ್ಲ ಎಂಬುದೇ ಅವರೆಲ್ಲರ ಉತ್ತರವಾಗಿತ್ತು. ಆ ವಿಷಯ ತಿಳಿದ ದೇವದತ್ತನೆಂಬ ವಂಚಕನಾದ ವಿಪ್ರನೊಬ್ಬನು ಅಲ್ಲಿಗೆ ಆಗಮಿಸಿ ತಾನು ಶ್ವೇತದ್ವೀಪವನ್ನು ನೋಡಿರುವೆ ಎಂದು ಹೇಳಿಬಿಟ್ಟ. ಅದಕ್ಕೆ ದೇವಸೇನೆಯು ಶ್ವೇತದ್ವೀಪವು ಹೇಗಿರುವುದು ಎಂದು ಕೇಳಿದಳು. ಅವನು ಆ ಶ್ವೇತದ್ವೀಪದಲ್ಲಿ ಶ್ರೀಹರಿಯ ಭವನವು ಅತ್ಯಪೂರ್ವ ಎಂಬುದಾಗಿ ಬಗೆಬಗೆಯಲ್ಲಿ ವರ್ಣಿಸಿದ. ಆದರೆ ಅವನ ವರ್ಣನೆಯಿಂದ ತೃಪ್ತಳಾಗದ ಅವಳು ಅವನು ಹೇಳುತ್ತಿರುವುದು ಸುಳ್ಳು ಎಂದು ಅರ್ಥ ಮಾಡಿಕೊಂಡಳು. ಅವನನ್ನು ಹೊಡೆಯಲು ತನ್ನ ಸಖಿಯರಿಗೆ ಆಜ್ಞಾಪಿಸಿದಳು. ಅವರಿಂದ ಪೆಟ್ಟು ತಿಂದು ಹೊರಹಾಕಲ್ಪಟ್ಟ ಅವನು ಆ ಅವಮಾನಕ್ಕಾಗಿ ಬಹಳವಾಗಿ ಪರಿತಪಿಸಿದ. ಹೇಗಾದರೂ ಮಾಡಿ ಶ್ವೇತದ್ವೀಪವನ್ನು ಕಂಡು ಬರಲೇಬೇಕೆಂದು ನಿಶ್ಚಯಿಸಿದ. ಅಲ್ಲಿಯವರೆಗೂ ಆಹಾರವನ್ನು ತೊರೆಯುವ ಸಂಕಲ್ಪವನ್ನೂ ಮಾಡಿದ. ಹಾಗೆ ನಿಶ್ಚಯಿಸಿ ಮಹೇಂದ್ರ ಪರ್ವತಕ್ಕೆ ತೆರಳಿ ಅಲ್ಲಿ ನೆಲಸಿದ್ದ ಪರುಶುರಾಮ ರೂಪದ ಶ್ರೀಹರಿಯನ್ನು ಕಂಡು ನಮಸ್ಕರಿಸಿದ. ಅವರ ಆದೇಶದಂತೆ ಬದರಿಗೆ ತೆರಳಿ ಅಲ್ಲಿದ್ದ ಮುನಿಗಳನ್ನು ಶ್ವೇತದ್ವೀಪವನ್ನು ತಲುಪುವ ಬಗೆಯನ್ನು ಕೇಳಿಕೊಂಡ. ಅದಕ್ಕೆ ಅವರು ಅಲ್ಲಿಗೆ ಜೀವಂತವಾಗಿ ಹೋಗಲು ಅಸಾಧ್ಯ. ಆದರೆ ತ್ರಿತ ಎಂಬ ಮುನಿಯಿಂದ ತುಲಸೀಪೂಜೆಯ ವಿಧಾನವನ್ನು ತಿಳಿದುಕೊಂಡು ತುಲಸಿಯನ್ನು ಆರಾಧಿಸಿ ಅವಳ ಅನುಗ್ರಹವನ್ನು ಸಂಪಾದಿಸಿದಲ್ಲಿ ಶ್ವೇತದ್ವೀಪಕ್ಕೆ ತೆರಳಲು ಸಾಧ್ಯ ಎಂದು ತಿಳಿಸಿದರು. ದೇವದತ್ತನು ಆ ತ್ರಿತ ಮುನಿಯನ್ನು ಶರಣುಹೊಕ್ಕ. ಪ್ರಸನ್ನರಾದ ಆ ಮುನಿಯು ತುಲಸೀ ಪೂಜೆ ವಿಧಿವಿಧಾನವನ್ನು ತಿಳಿಸಿಕೊಟ್ಟರು.

---

[೫೧] ತುಲಸೀವನದ ಪ್ರವೇಶ, ಅದರ ದರ್ಶನ, ಅದರ ಸನ್ನಿಧಾನದಲ್ಲಿ ಮರಣ, ಮೊದಲಾದ ಪ್ರತಿಯೊಂದೂ ಸಹ ಸಕಲ ಪಾಪ ಪರಿಹಾರಕವಾದ ಶ್ರೇಷ್ಠ ಪುಣ್ಯಕಾರ್ಯ ಎಂಬ ವಿಶೇಷ ಸಂದೇಶ ಈ ಕಥೆಯಲ್ಲಿದೆ.

ಅದರಂತೆ 'ತುಲಸೀ ಶ್ರೀಸಖಿ' ಎಂಬ ಮಂತ್ರವನ್ನು ಏಳು ಕೋಟಿ ಬಾರಿ ಜಪಿಸಿ ತುಲಸಿಯನ್ನು ವಿಧ್ಯುಕ್ತವಾಗಿ ಪೂಜಿಸಲು ತಿಳಿಸಿದರು.

ಅವರು ಹೇಳಿದಂತೆಯೇ ತುಲಸಿಯನ್ನು ಆರಾಧಿಸಿ ೧೨ ವರ್ಷಗಳ ಬಳಿಕ ಸ್ವಪ್ನದಲ್ಲಿ ತುಲಸಿಯ ದರ್ಶನ ಪಡೆದ. ತುಲಸಿಯು ಅವನಿಗೆ ಶ್ವೇತದ್ವೀಪಕ್ಕೆ ತೆರಳುವ ವರವನ್ನು ನೀಡಿದಳು. ಆ ವೇಳೆಗೆ ಅಲ್ಲಿ ಒಂದು ಮಹಾ ನಾಗಸರ್ಪವು ಕಾಣಿಸಿಕೊಂಡಿತು. ಭಯಗೊಂಡ ಮುನಿಗಳೆಲ್ಲ ತಮ್ಮ ತಮ್ಮ ಆಶ್ರಮಗಳನ್ನು ಸೇರಿಕೊಂಡರು. ದೇವದತ್ತನೂ ಸಹ ಭೀತನಾಗಿ ಮರವೊಂದರ ಪೊಟರೆಯನ್ನು ಹೊಕ್ಕ. ಅಲ್ಲಿ ಗರುಡ ನೆಲಸಿರುವುದನ್ನು ಕಂಡ. ಗರುಡ ಹೊರಕ್ಕೆ ಆಗಮಿಸಿ ತನ್ನ ಕೊಕ್ಕಿನಿಂದ ಆ ಸರ್ಪವನ್ನು ನಾಶಪಡಿಸಿದ. ಗರುಡ ಗಗನ ಮಾರ್ಗದಲ್ಲಿ ತೆರಳಿ ಆ ಸರ್ಪವನ್ನು ತಿಂದು ಹಾಕಿದ. ಆಗ ತ್ರಿತ ಮೊದಲಾದ ಮುನಿಗಳೆಲ್ಲರು ಭೀತಿಯನ್ನು ತೊರೆದರು. ಗರುಡನು ಪುನಃ ಅಲ್ಲಿಗೆ ಆಗಮಿಸಿ ಆ ದುಷ್ಟ ಸರ್ಪವು ನಾಶವಾಯಿತು ನೀವಿನ್ನು ನಿರ್ಭಯವಾಗಿ ಬದುಕಬಹುದು ಎಂದು ತಿಳಿಸಿದ. ಹೀಗೆ ಹೇಳಿದ ಗರುಡ ಶ್ವೇತದ್ವೀಪಕ್ಕೆ ಹಾರಿದ. ಆ ದೇವದತ್ತನೂ ಆ ಗರುಡನ ರೆಕ್ಕೆಯೊಳಗೆ ತಾನೂ ಸೇರಿಕೊಂಡು [೫೨] ಶ್ವೇತದ್ವೀಪವನ್ನು ತಲುಪಿದ. ಅವನು ತುಲಸಿಯ ಅನುಗ್ರಹವನ್ನು ಪಡೆದದ್ದರಿಂದಲೇ ಗರುಡ ಹಾಗೆ ಆ ದೇವದತ್ತನು ತನ್ನೊಂದಿಗೆ ಹಾರಲು ಅವಕಾಶ ನೀಡಿದ್ದ. ಶ್ವೇತದ್ವೀಪದಲ್ಲಿ ಶ್ರೀಹರಿಯ ಮಂದಿರವನ್ನು ಕಾಣುತ್ತಲೇ ಭೀತನಾಗಿ ಗರುಡನ ಮೇಲಿಂದ ಕೆಳಕ್ಕುರುಳಿದ. ಹಾಗೆ ಬಿದ್ದ ಅವನನ್ನು ನೋಡಿ ದಿವ್ಯ ಅಪ್ಸರೆಯರು ಅವನಿಗೆ ಅದು ವೈಕುಂಠ; ಅಲ್ಲಿರುವುದು ತುಲಸಿಯ ಭವನ ಎಂಬುದಾಗಿ ತಿಳಿಸಿದರು. ಅವನಿಗೆ [೫೩] ತುಲಸಿಯ ದರ್ಶನವನ್ನೂ ಮಾಡಿಸಿದರು. ತುಲಸಿಯನ್ನು ಕಾಣುತ್ತಲೇ ದೇವದತ್ತನು ಸಾಮ ಮಂತ್ರಗಳನ್ನು ಪಠಿಸಿ ಅವಳನ್ನು ಪರಿಪರಿಯಾಗಿ ಸ್ತುತಿಸಿದ. ತುಲಸಿಯು ಅವನಿಗೆ ಅನ್ನಪಾನಾದಿಗಳನ್ನು ನೀಡುವಂತೆ ಸಖಿಯರಿಗೆ ತಿಳಿಸಿದಳು. ಹಾಗೆಯೇ ಅಲ್ಲಿ ಮಲಗಿದ್ದ ದೇವಸೇನೆಯನ್ನೂ ಸಹ ತೋರಿಸುವಂತೆ ಹೇಳಿದಳು. ಮೃತಳಾಗಿದ್ದ ದೇವಸೇನೆ ಮಲಗಿದ್ದಳು. ತುಲಸಿಯ ಆದೇಶದಂತೆ ಅವಳ ಸಖಿಯರು ಅವನ ಕಣ್ಣನ್ನು ಕಟ್ಟಿ ಬಳಿಕ ಕಣ್ಣು ತೆರೆಯಲು ಹೇಳಿದರು. ಕ್ಷಣಮಾತ್ರದಲ್ಲಿ ಗರುಡ ಅವನನ್ನು ತಾನು ಬಂದಿದ್ದ ಪಾಂಡ್ಯ ದೇಶಕ್ಕೆ ತಲುಪಿಸಿದ.

---

೫೨ ಇಲ್ಲಿ ಶ್ವೇತದ್ವೀಪವನ್ನು ತಲುಪಿದ ಎಂದರೆ ಅಲ್ಲಿಯ ಅಮುಕ್ತಸ್ಥಾನವನ್ನು ತಲುಪಿದ ಎಂದರ್ಥ. ಸನಕಾದಿಗಳಿಂದ ಶಾಪ ಪಡೆದ ಜಯ-ವಿಜಯರು ನೆಲೆಸಿದ್ದು ಇಂತಹ ಅಮುಕ್ತಸ್ಥಾನದಲ್ಲಿ ಎಂಬುದು ಶ್ರೀಮದ್ಭಾಗವತ ಹಾಗೂ ಅದರ ತಾತ್ಪರ್ಯನಿರ್ಣಯದಿಂದ ತಿಳಿಯುವುದು. ಹಿರಣ್ಯಕಶಿಪುವೂ ಸಹ ವೈಕುಂಠದ ಅಮುಕ್ತಸ್ಥಾನಕ್ಕೆ ತೆರಳಿದ್ದ ವಿವರವೂ ಶ್ರೀಮದ್ಭಾಗವತದಲ್ಲಿ ಬಂದಿದೆ. ಅವನಿಗೆ ಹಾಗೆ ತೆರಳಲು ಕಾರಣವಾಗಿದ್ದು ಅವನೊಳಗಿದ್ದ ಜಯನ ಆವೇಶ ಹಾಗೂ ಬ್ರಹ್ಮದೇವರ ವರ ಕಾರಣವಾಗಿದ್ದರೆ, ಈ ದೇವದತ್ತನಿಗೆ ತುಲಸಿಯ ಸೇವೆ ಕಾರಣವಾಯಿತು ಎಂಬುದು ವಿಶೇಷ.

೫೩. ಹನ್ನೆರಡು ವರ್ಷಗಳಷ್ಟು ದೀರ್ಘಕಾಲ ತುಲಸೀ ಮಂತ್ರವನ್ನು ಒಟ್ಟು ಏಳು ಕೋಟಿ ಬಾರಿ ಜಪಿಸಿ ಸೇವಿಸಿದ್ದರ ಫಲ ಹೀಗೆ ದೇವದತ್ತ ಬ್ರಾಹ್ಮಣನಿಗೆ ಗರುಡನ ಅನುಗ್ರಹದ ಸಂಪಾದನೆ ಕಾರಣವಾಗಿ, ಕೊನೆಗೆ ವೈಕುಂಠದ ದರ್ಶನಕ್ಕೂ ಸಾಧನವಾಯಿತು. ತುಲಸಿಯು ಈ ರೀತಿಯಾಗಿ ಕಾರಣಳಾಗುವಳು ಎಂಬುದು, "ನ್ಯಸ್ತಾ ತಚ್ಚರಣೇ ವಿಮುಕ್ತಿ ಫಲದಾ" ಎಂಬ ಮಾತಿಗೆ ಸಾಕ್ಷಿಯಾಗಿದೆ.

ಅವನು ಅಲ್ಲಿದ್ದ ದೇವಸೇನೆಯನ್ನು ಕಂಡ. ಅವಳು ಕೇಳಿದಾಗ ತಾನು ಕಂಡ ಶ್ವೇತದ್ವೀಪವನ್ನು ವರ್ಣಿಸಿದ. ಅಲ್ಲಿ ಅವಳು ಮೃತಳಾಗಿದ್ದನ್ನು ಕಂಡದ್ದನ್ನೂ ಸಹ ತಿಳಿಸಿದ. ಅದನ್ನು ಕೇಳುತ್ತಲೇ ದೇವಸೇನೆಯು ಪ್ರಾಣ ತೊರೆದಳು. ಅದನ್ನು ಕೇಳಿ ಅವಳ ಸಖಿಯರು ದುಃಖಿಸಿದರು.

ದೇವದತ್ತ ವಿಷಣ್ಣ ಮನಸ್ಕನಾಗಿ ಪರುಶುರಾಮರ ಬಳಿಗೆ ತೆರಳಿ ಅದಕ್ಕೆಲ್ಲ ಕಾರಣ ಕೇಳಿದನು. ಅವರು ತಿಳಿಸಿದರು. ತ್ರಿತ ಎಂಬ ಮುನಿ ಹಿಂದೆ ಅವರ ಶಿಷ್ಯನಾಗಿದ್ದ. ಅವನು ತುಲಸಿಯ ಭಕ್ತ. ಅವನು ತುಲಸಿಯನ್ನು ಸೇವಿಸಲೆಂದು ಶಿಷ್ಯನೊಬ್ಬನೊಡನೆ ಶ್ವೇತದ್ವೀಪಕ್ಕೆ ತೆರಳಿದ್ದ. ಅಲ್ಲಿ ತುಲಸಿಯ ಸನಿಹದಲ್ಲಿ ಚಾಮರ ಹಿಡಿದಿದ್ದ ದೇವಸೇನೆ ಇದ್ದಳು. ಅವಳನ್ನು ಕಾಣುತ್ತಲೇ [೫೪]ಕಾಮಪೀಡಿತನಾದ ಅವರ ಶಿಷ್ಯ ಕಾಮದ ಕಣ್ಣಿನಿಂದಲೇ ಅವಳನ್ನು ನೋಡಿದ. ಅದನ್ನು ಗಮನಿಸಿದ ತುಲಸಿಯು ಅವನನ್ನು ಶಪಿಸಿದಳು, 'ನೀನು ಭಸ್ಮೀಭೂತನಾಗು. ಅವಳೂ ಮೃತಳಾಗಲಿ'. ಆಗ ಆ ಮುನಿಯು ತುಲಸಿಯನ್ನು ಬಹಳವಾಗಿ ಪ್ರಾರ್ಥಿಸಿಕೊಂಡ. ಅವರ ಶಾಪ ವಿಮೋಚನೆಯನ್ನು ತುಲಸಿಯು ತಿಳಿಸಿದಳು, 'ಆ ದೇವಸೇನೆಯು ಅವಳೇ. ಅವಳಿಗೆ ಪೂರ್ವಜನ್ಮದ ಸ್ಮೃತಿಯು ಇರುವುದು. ಅವಳು ಮತ್ತೊಂದು ದೇಹದಿಂದ ಜನಿಸುವಳು. ಅದೇ ರೂಪದಿಂದ ಅವಳು ನನ್ನ ಸೇವಕಿಯಾಗುವಳು.' ಮುನಿಯು ಅದರಿಂದ ಸಂತುಷ್ಟನಾದ. ಶಿಷ್ಯನೊಡನೆ ಬದರಿಕಾಶ್ರಮಕ್ಕೆ ಮರಳಿದ. ಅಲ್ಲಿ ದೇವದತ್ತ ನಿರಾಹಾರದಿಂದ ೧೨ ವರ್ಷಗಳ ಕಾಲ ನೆಲಸಿದ. ಅಲ್ಲಿಗೆ ನಾರದರು ಆಗಮಿಸಿ, 'ದೇವದತ್ತ' ಎಂಬುದಾಗಿ ಆವನನ್ನು ಮಾತನಾಡಿಸಿದರು. ಅವನನ್ನು ಕರೆದೊಯ್ಯಲೆಂದು ತುಲಸಿ ಆದೇಶದಂತೆ ತಾವು ಬಂದಿರುವುದಾಗಿ ಹೇಳಿದರು. ದೇವದತ್ತನು ಅದಕ್ಕೆ ಒಪ್ಪಿ ಅವರು ಉಪದೇಶಿದ ಮಂತ್ರವನ್ನು ಪಠಿಸಿದ. ಕೂಡಲೇ ಗಗನದಲ್ಲಿ ಸಂಚರಿಸಿ ಅಲ್ಲಿಂದ ಶ್ವೇತದ್ವೀಪಕ್ಕೆ ತಲುಪಿ ತುಲಸಿಯ ಮಂದಿರಕ್ಕೆ ವಂದಿಸಿ ಅಲ್ಲಿ ದೇವಸೇನೆಯನ್ನು ಕಂಡ. ತುಲಸಿಯ ಆದೇಶದಂತೆ ನಾರದರು ಅವರಿಬ್ಬರನ್ನು ಒಂದುಗೂಡಿಸಿದರು. ಹೀಗೆ ದೇವದತ್ತ ದೇವಸೇನೆಯನ್ನು ಪಡೆದುಕೊಂಡ. ತುಲಸಿಯನ್ನು ಪರಿಪರಿಯಾಗಿ ಸೇವಿಸುತ್ತ ತುಲಸಿಯ ದರ್ಶನವನ್ನು ಪಡೆದುಕೊಂಡ.

★ ★ ★

## ೯. ತುಲಸಿಯ ನೀರಿನಿಂದ ಪಾಪ ತೊಳೆದುಕೊಂಡ ರಾಜ

(ಪದ್ಮಪುರಾಣ)

ಹಿಂದೆ ದ್ವಾಪರಯುಗದಲ್ಲಿ ಒಬ್ಬ ಬ್ರಾಹ್ಮಣನಿದ್ದ; ಅವನು ಸ್ನಾನಪೂರೈಸಿ, ತುಲಸಿವನಕ್ಕೆ ತೆರಳಿ, ಮನೆಗೆ ಆಗಮಿಸಿದ. ಆಗ ಅವನ ಪುಣ್ಯದಿಂದೆಂಬಂತೆ ಸೂರ್ಯನಂತೆ ಕಂಗೊಳಿಸುವ

---

[೫೪] ದೇವಸ್ಥಾನ, ಪುಣ್ಯಕ್ಷೇತ್ರ ಮೊದಲಾದವುಗಳಲ್ಲಿ ಹೀಗೆ ಕಾಮವಿಕಾರಕ್ಕೆ ಒಳಗಾಗುವುದು ಅಲ್ಲಿಯ ದಿವ್ಯಸನ್ನಿಧಿಗೆ ಮಾಡುವ ಅಪಚಾರವಾದ್ದರಿಂದ ಅದು ಶಾಪಕ್ಕೆ ಕಾರಣವಾಗುವುದು. ಸತ್ಯಲೋಕದಲ್ಲಿ ನಡೆದಿದ್ದ ದೇವಸಭೆಯಲ್ಲಿ ಗಾಳಿಗೆ ಸೆರಗು ಜಾರಿದ ಗಂಗೆಯನ್ನು – ಅವಳು ತನ್ನ ಪತ್ನಿಯಾಗಿದ್ದರೂ – ಎವೆಯಿಕ್ಕದೆ ನೋಡಿದ ಕಾರಣದಿಂದ ಮಹಾಭಿಷಕ್ ಎಂಬ ವರುಣಾಂಶನಾದ ರಾಜ ಕೂಡಲೇ ಶಂತನುವಾಗಿ ಜನಿಸುವಂತಾಯಿತು ಎಂಬ ಮಹಾಭಾರತದ ಪ್ರಸಂಗವನ್ನು ಇದು ಹೋಲುವುದು.

ಮಹಾಪಾಪಿಯಾದ ಒಬ್ಬ ಭಕಕನು ಬಾಯಾರಿಕೆಯಿಂದ ಪೀಡಿತನಾಗಿ ಅಲ್ಲಿಗೆ ಆಗಮಿಸಿದ. ತುಲಸಿಬುಡದ ನೀರನ್ನು ಕುಡಿಯುತ್ತಲೇ ಅವನ ಪಾಪವೆಲ್ಲಾ ಪರಿಹಾರವಾಯಿತು. ಆ ವೇಳೆಗೆ ಅಸಿಮರ್ದನ ಎಂಬ ಮತ್ತೊಬ್ಬ ಬೇಡ ಅಲ್ಲಿಗೆ ಆಗಮಿಸಿದ. 'ನನ್ನ ಅಡುಗೆಯ ಪಾತ್ರದಲ್ಲಿದ್ದ ಅನ್ನವನ್ನು ತಿಂದವರಾರು' ಎಂದು ಅವನನ್ನು ಕೇಳಿದ. 'ನನ್ನ ಪಾತ್ರೆಯಲ್ಲಿನ ಅನ್ನವನ್ನು ಪಾಪಿಯಾದ ನೀನು ತಿಂದೆಯಾ' ಎಂದು ಅವನನ್ನು ಹೊಡೆದ. ಸತ್ತುಬಿದ್ದ ಅವನನ್ನು ಕರೆದೊಯ್ಯಲೆಂದು ಯಮನ ಆದೇಶದಂತೆ ಯಮದೂತರು ಪಾಶ, ಮುದ್ಗರ ಮೊದಲಾದ ಆಯುಧಗಳನ್ನು ಕೈಯಲ್ಲಿ ಹಿಡಿದುಕೊಂಡು ಅಲ್ಲಿಗೆ ಆಗಮಿಸಿದರು. ಕೂಡಲೇ ಅಲ್ಲಿಗೆ ಆಗಮಿಸಿದ ವಿಷ್ಣುದೂತರು ಅವನನ್ನು ಯಮದೂತರ ಪಾಶದಿಂದ ಬಿಡುಗಡೆ ಮಾಡಿ ಮೇಲಕ್ಕೆ ಕರೆದೊಯ್ದರು. ಆಗ ಅವನು ಕೇಳಿದ. ನನ್ನ ಯಾವ ಪುಣ್ಯದಿಂದ ನೀವು ಹೀಗೆ ನನ್ನನ್ನು ಬಿಡುಗಡೆಮಾಡಿದಿರಿ? ನೀನು ಹಿಂದೆ ಒಬ್ಬ ಪುಣ್ಯವಂತನಾದ ರಾಜನಾಗಿದ್ದೆ ಆಗ ನೀನು ಒಬ್ಬ ಸುಂದರಿಯಾದ ಕನ್ಯೆಯನ್ನು ಅಪಹರಣಮಾಡಿದೆ. ಆ ಪಾಪದಿಂದಾಗಿ ನೀನು ಯಮಲೋಕಕ್ಕೆ ತೆರಳಿ, ಬಗೆಬಗೆಯ ಶಿಕ್ಷೆಯನ್ನು ಅನುಭವಿಸಿದೆ. ಕೆಂಪಗೆ ಕಾದ ತಾಮ್ರದ ಸ್ತ್ರೀವಿಗ್ರಹದ ಆಲಿಂಗನ ಮೊದಲಾದ ಘೋರಶಿಕ್ಷೆಗೆ ಗುರಿಯಾದೆ. ಹೀಗೆ ಬಹುಜನ್ಮಗಳನ್ನು ಕಳೆದು ಈ ಜನ್ಮದಲ್ಲಿ ಹಿಂದಿನ ಪುಣ್ಯದಿಂದ ತುಲಸಿಯ ಬುಡದ ನೀರನ್ನು ಪಾನಮಾಡಿದ್ದರಿಂದ ನಿನ್ನ ಸಕಲ ಪಾಪಗಳೂ ಪರಿಹಾರವಾದವು.

**ವಿ.ಸೂ.:** ಮೇಲ್ನೋಟಕ್ಕೆ ಇಲ್ಲಿಯ ಉಪಾಖ್ಯಾನಗಳಲ್ಲಿ ಕೇವಲ ತುಲಸಿಯ ದರ್ಶನ, ಸ್ಪರ್ಶನ, ವಂದನೆ, ಪಾಲನೆ, ರೋಪಣ, ಅದರ ಮೇಲಿಂದ ಬೀಸಿ ಬಂದ ಗಾಳಿ, ಮೊದಲಾದವುಗಳಿಂದಲೇ ಮಹಾಪಾತಕಿಗಳು ತಮ್ಮ ಸಕಲ ಪಾತಕಗಳನ್ನೂ ಪರಿಹರಿಸಿಕೊಂಡು ಸದ್ಗತಿಗೆ ತೆರಳಿದಂತೆ ಕಾಣುವರು. ಆದರೆ, ಅಪರೋಕ್ಷಜ್ಞಾನದಿಂದ ಮಾತ್ರವೇ ಸದ್ಗತಿಯೆಂಬುದು ಶಾಸ್ತ್ರದ ಸಂದೇಶ. ತುಲಸೀ ಮೊದಲಾದವುಗಳ ಸೇವನೆ ಅಂತಹ ಅಪರೋಕ್ಷಜ್ಞಾನಗಳಿಗೆ ಸಾಧನವಾಗುವ ಸಾಮಗ್ರಿಗಳಲ್ಲಿ ಸೇರಿದೆ ಎಂದರೆ ಕೇವಲ ಇಷ್ಟು ಮಾತ್ರದಿಂದಲೇ ಸದ್ಗತಿ ಹೇಗೆ ಲಭಿಸೀತು ಎಂಬ ಪ್ರಶ್ನೆಗೆ ಅವಕಾಶವಿದೆ. ಅದನ್ನು ಶ್ರೀಮದಾಚಾರ್ಯರು ಗೀತಾಭಾಷ್ಯ ಮೊದಲಾದ ಕೃತಿಗಳಲ್ಲಿ ಪರಿಹರಿಸಿರುವರು. ಅಪರೋಕ್ಷಜ್ಞಾನಿಗಳಾದವರಿಗೆ ಪ್ರಾರಬ್ಧವಶಾತ್ ಒದಗುವ ಪಾತಕಗಳ ಪರಿಹಾರಕ್ಕೆ ಇವು ನಿಮಿತ್ತವಾಗುವುದರಿಂದ ಇಂತವುಗಳ ಪೂರ್ಣಫಲ ಅವರಿಗೆ ಮಾತ್ರವೇ ಅನ್ವಯಿಸುವುದು. ಇತರರಿಗೆ ಇವು ಕ್ರಮೇಣ ಜ್ಞಾನಕ್ಕೆ ಸಾಧನವೆನ್ನಿಸಿ ಉದ್ಧಾರಕ್ಕೆ ಕಾರಣವಾಗುವುದು. ಜ್ಞಾನಿಗಳಿಗೆ ಪಾಪಪರಿಹಾರದೊಂದಿಗೆ ಮೋಕ್ಷದಲ್ಲಿನ ಆನಂದಾತಿಶಯ ಪ್ರಾಪ್ತಿಗೆ ಇಂತಹ ಸಾಧನೆ ಕಾರಣವಾಗುವುದು. ಇತರರಿಗೆ ಜ್ಞಾನಪ್ರಾಪ್ತಿಗೆ ಸಾಧನವಾಗುವುದು ಎಂದು ತಿಳಿಯಬೇಕು.

**॥ ಶ್ರೀಕೃಷ್ಣಾರ್ಪಣಮಸ್ತು ॥**

ಸಮರ್ಪಿತಂ ಮಯಾ ಭವೇತ್ ಸುಮಧ್ವನುತ್ತವಾಣಿನಾ।
ರಮಾರಮೇಶಪಾದಯೋಃ ಪ್ರಭಂಜನಾಭಿಧಾಯುಜಾ॥

★★★★★

## ಪರಿಶಿಷ್ಠ - ೦೨

# ಶ್ರೀತುಲಸೀಸ್ತೋತ್ರಮಂಜರೀ

ಮಹಾಲಕ್ಷ್ಮೀ, ಸರಸ್ವತೀಭಾರತೀಯರು ಮೊದಲಾದವರನ್ನು ಕುರಿತು ಹೇಗೋ ಹಾಗೆತುಲಸಿಯನ್ನುಕುರಿತು ಸಹ ಪ್ರತ್ಯೇಕವಾಗಿ ಅನೇಕ ಸ್ತೋತ್ರಕೃತಿಗಳು ಅಪಾರ ಸಂಖ್ಯೆಯಲ್ಲಿ ಕಂಡುಬರುತ್ತವೆ. ಉಪನಿಷತ್ತಿನಿಂದ ಪ್ರಾರಂಭಿಸಿ ಇತಿಹಾಸ ಪುರಾಣಗಳವರೆಗೂ ತುಲಸೀಸ್ತೋತ್ರದ ವ್ಯಾಪ್ತಿಯನ್ನು ಕಾಣಬಹುದು. ಹೀಗೆ ಪ್ರತ್ಯೇಕವಾದ ಸ್ತೋತ್ರಕೃತಿಗಳು ಧಾತ್ರೀ, ಮಾವು ಮೊದಲಾದ ಬೇರಾವ ಸಸ್ಯಗಳ ಬಗ್ಗೆಯೂ ಸಹ ಕಂಡುಬರುವುದಿಲ್ಲ ಎಂಬುದು ಗಮನಿಸಬೇಕಾದ ಸಂಗತಿ. ಇತರ ವೃಕ್ಷಗಳ ಬಗ್ಗೆ ಒಂದೆರಡು ಸ್ತೋತ್ರರೂಪದ ಶ್ಲೋಕಗಳು ಕಂಡುಬರುವ-ವಾದರೂ ಅಪಾರ ಸಂಖ್ಯೆಯ ವಿಸ್ತೃತ ಸ್ತೋತ್ರಕೃತಿಗಳು ಕಂಡುಬರುವುದು ತುಲಸಿಯ ಬಗ್ಗೆ ಮಾತ್ರ. ಈ ಸ್ತೋತ್ರಕೃತಿಗಳು ಸಹ ಸಾಮಾನ್ಯ ವರ್ಣನೆಯ ರೀತಿಯನ್ನು ಹೊಂದಿರದೆ, ಮಹಾಲಕ್ಷ್ಮಿಗೆ ಉಕ್ತವಾಗಿರುವ ಮೋಕ್ಷದಾತೃತ್ವಾದಿ ಮಹಾಮಹಿಮೆಗಳನ್ನು ಒಳಗೊಂಡಿರುವಂತೆ ರಚಿತವಾಗಿರುವುದು ಅತ್ಯಂತ ಮುಖ್ಯವಾದ ಸಂಗತಿ.ತುಲಸಿಯು ಮಹಾಲಕ್ಷ್ಮಿ ಎಂಬುದಕ್ಕೆ ಇಲ್ಲಿಯ ಸಕಲ ಸ್ತೋತ್ರಗಳು ಸಹ ಸಾಧಕವಾಗಿವೆ.

### ೧. ಶ್ರೀತುಲಸ್ಯುಪನಿಷತ್

ಅಥ ತುಲಸ್ಯುಪನಿಷದಂ ವ್ಯಾಖ್ಯಾಸ್ಯಾಮಃ । ನಾರದ ಋಷಿಃ । ಅಥರ್ವಾಂಗಿರಶ್ಛಂದಃ । ಅಮೃತಾ ತುಲಸೀ ದೇವತಾ । ಸುಧಾ ಬೀಜಮ್ । ವಸುಧಾ ಶಕ್ತಿಃ । ನಾರಾಯಣಃ ಕೀಲಕಮ್ । ಶ್ಯಾಮಾಂ ಶ್ಯಾಮವಪುರ್ಧರಾಂ ಋಕ್ಸ್ವರೂಪಾಂ ಯಜುರ್ಮನಾಂ ಬ್ರಹ್ಮಾಥರ್ವಪ್ರಾಣಾಂ ಕಲ್ಪಹಸ್ತಾಂ ಪುರಾಣಪಠಿತಾಂ ಅಮೃತೋದ್ಭವಾಂ ಅಮೃತರಸಮಂಜರೀಂ ಅನಂತಾಂ ಅನಂತರಸಭೋಗದಾಂ ವೈಷ್ಣವೀಂ ವಿಷ್ಣುವಲ್ಲಭಾಂ ಮೃತ್ಯುಜನ್ಮನಿಬರ್ಹಣೀಂ ದರ್ಶನಾತ್ ಪಾಪನಾಶಿನೀಂ ಸ್ಪರ್ಶನಾತ್ ಪಾವನೀಂ ಅಭಿವಂದನಾದ್ರೋಗನಾಶಿನೀಂ ಸೇವನಾನ್ಮೃತ್ಯು-ನಾಶಿನೀಂ ವೈಕುಂಠಾರ್ಚನಾದ್ವಿಪದ್ಧಂತ್ರೀಂ ಭಕ್ಷಣಾತ್ ವಯುನಪ್ರದಾಂ ಪ್ರಾದಕ್ಷಿಣ್ಯಾ-ದ್ದಾರಿದ್ರ್ಯನಾಶಿನೀಂ ಮೂಲಮೃಲ್ಲೇಪನಾನ್ಮಹಾಪಾಪಭಂಜಿನೀಂ ಘ್ರಾಣತರ್ಪಣಾದಂತ-ರ್ಮಲನಾಶಿನೀಂ ಯ ಏವಂ ವೇದ ಸ ವೈಷ್ಣವೋ ಭವತಿ । ವೃಥಾ ನ ಛಿಂದ್ಯಾತ್ । ದೃಷ್ಟ್ವಾ ಪ್ರದಕ್ಷಿಣಂ ಕುರ್ಯಾತ್ । ಯಾಂ ನ ಸ್ಪೃಶೇತ್ । ಪರ್ವಣಿ ನ ವಿಚಿನ್ವೇತ್ । ಯದಿ ವಿಚಿನ್ವತಿ ಸ ವಿಷ್ಣುಹಾ ಭವತಿ । ಶ್ರೀತುಲಸ್ಯೈ ಸ್ವಾಹಾ । ವಿಷ್ಣುಪ್ರಿಯಾಯೈ ಸ್ವಾಹಾ । ಅಮೃತಾಯೈ

ಸ್ವಾಹಾ । ಶ್ರೀತುಲಸ್ಯೈ ವಿದ್ಮಹೇ ವಿಷ್ಣುಪ್ರಿಯಾಯೈ ಧೀಮಹಿ । ತನ್ನೋ ಅಮೃತಾ ಪ್ರಚೋದಯಾತ್ ॥

ಅಮೃತೇಽಮೃತರೂಪಾಽಸಿ ಅಮೃತತ್ವಪ್ರದಾಯಿನಿ ।
ತ್ವಂ ಮಾಮುದ್ಧರ ಸಂಸಾರಾತ್ ಕ್ಷೀರಸಾಗರಕನ್ಯಕೇ ॥ ೧ ॥

ಶ್ರೀಸಖಿ ತ್ವಂ ಸದಾನಂದೇ ಮುಕುಂದಸ್ಯ ಸದಾ ಪ್ರಿಯೇ ।
ವರದಾಭಯಹಸ್ತಾಭ್ಯಾಂ ಮಾಂ ವಿಲೋಕಯ ದುರ್ಲಭೇ ॥ ೨ ॥

ಅವೃಕ್ಷವೃಕ್ಷರೂಪಾಽಸಿ ವೃಕ್ಷತ್ವಂ ಮೇ ವಿನಾಶಯ ।
ತುಲಸ್ಯತುಲರೂಪಾಽಸಿ ತುಲಾಕೋಟಿನಿಭೇಽಜರೇ ॥ ೩ ॥

ಅತುಲೇ ತ್ವತುಲಾಯಾಂ ಹಿ ಹರಿರೇಕೋಽಸ್ತಿ ನಾನ್ಯಥಾ ।
ತ್ವಮೇವ ಜಗತಾಂ ಧಾತ್ರೀ ತ್ವಮೇವ ವಿಷ್ಣುವಲ್ಲಭಾ ॥ ೪ ॥

ತ್ವಮೇವ ಸುರಸಂಸೇವ್ಯಾ ತ್ವಮೇವ ಮೋಕ್ಷದಾಯಿನೀ ।
ತ್ವಚ್ಛಾಯಾಯಾಂ ವಸೇಲ್ಲಕ್ಷ್ಮೀಸ್ತ್ವನ್ಮೂಲೇ ವಿಷ್ಣುರವ್ಯಯಃ ।
ಸಮಂತಾದ್ದೇವತಾಃ ಸರ್ವಾಃ ಸಿದ್ಧಚಾರಣಪನ್ನಗಾಃ ॥ ೫ ॥

ಯನ್ಮೂಲೇ ಸರ್ವತೀರ್ಥಾನಿ ಯನ್ಮಧ್ಯೇ ಬ್ರಹ್ಮದೇವತಾಃ ।
ಯದಗ್ರೇ ವೇದಶಾಸ್ತ್ರಾಣಿ ತುಲಸೀಂ ತಾಂ ನಮಾಮ್ಯಹಮ್ ॥ ೬ ॥

ತುಲಸಿ ಶ್ರೀಸಖಿ ಶುಭೇ ಪಾಪಹಾರಿಣಿ ಪುಣ್ಯದೇ ।
ನಮಸ್ತೇ ನಾರದನುತೇ ನಾರಾಯಣಮನಃಪ್ರಿಯೇ ॥ ೭ ॥

ಬ್ರಹ್ಮಾನಂದಾಶ್ರುಸಂಜಾತೇ ಬೃಂದಾವನನಿವಾಸಿನಿ ।
ಸರ್ವಾವಯವಸಂಪೂರ್ಣೇ ಅಮೃತೋಪನಿಷದ್ರಸೇ ॥ ೮ ॥

ತ್ವಂ ಮಾಮುದ್ಧರ ಕಲ್ಯಾಣಿ ಮಹಾಪಾಪಾಬ್ಧಿದುಸ್ತರಾತ್ ।
ಸರ್ವೇಷಾಮಪಿ ಪಾಪಾನಾಂ ಪ್ರಾಯಶ್ಚಿತ್ತಂ ತ್ವಮೇವ ಹಿ ॥ ೯ ॥

ದೇವಾನಾಂ ಚ ಋಷೀಣಾಂ ಚ ಪಿತೄಣಾಂ ತ್ವಂ ಸದಾ ಪ್ರಿಯೇ ।
ವಿನಾ ಶ್ರೀತುಲಸೀಂ ವಿಪ್ರಾ ಯೇಽಪಿ ಶ್ರಾದ್ಧಂ ಪ್ರಕುರ್ವತೇ ॥ ೧೦ ॥

ವೃಥಾ ಭವತಿ ತಚ್ಛ್ರಾದ್ಧಂ ಪಿತೄಣಾಂ ನೋಪಗಚ್ಛತಿ ।
ತುಲಸೀಪತ್ರಮುತ್ಸೃಜ್ಯ ಯದಿ ಪೂಜಾಂ ಕರೋತಿ ವೈ ॥ ೧೧ ॥

ಆಸುರೀ ಸಾ ಭವೇತ್ ಪೂಜಾ ವಿಷ್ಣುಪ್ರೀತಿಕರೀ ನ ಚ ।
ಯಜ್ಞಂ ದಾನಂ ಜಪಂ ತೀರ್ಥಂ ಶ್ರಾದ್ಧಂ ವೈ ದೇವತಾರ್ಚನಮ್ ॥ ೧೨ ॥

ತರ್ಪಣಂ ಮಾರ್ಜನಂ ಚಾನ್ಯನ್ನ ಕುರ್ಯಾತ್ ತುಲಸೀಂ ವಿನಾ ।
ತುಲಸೀದಾರುಮಣಿಭಿರ್ಜಪಃ ಸರ್ವಾರ್ಥಸಾಧಕಃ ।
ಏವಂ ನ ವೇದ ಯಃ ಕಶ್ಚಿತ್ ಸ ವಿಪ್ರಃ ಶ್ವಪಚಾಧಮಃ ॥ ೧೩ ॥

ಇತ್ಯಾಹ ಭಗವಾನ್ ಬ್ರಹ್ಮಾಣಂ ನಾರಾಯಣಃ, ಬ್ರಹ್ಮಾ ನಾರದಸನಕಾದಿಭ್ಯಃ ಸನಕಾದಯೋ ವೇದವ್ಯಾಸಾಯ, ವೇದವ್ಯಾಸಃ ಶುಕಾಯ, ಶುಕೋ ವಾಮದೇವಾಯ, ವಾಮದೇವೋ ಮುನಿಭ್ಯಃ, ಮುನಯೋ ಮನುಭ್ಯಃ ಪ್ರೋಚುಃ । ಯ ಏವಂ ವೇದ ಸ ಸ್ತ್ರೀಹತ್ಯಾಯಾಃ ಪ್ರಮುಚ್ಯತೇ । ಸ ವೀರಹತ್ಯಾಯಾಃ ಪ್ರಮುಚ್ಯತೇ । ಸ ಬ್ರಹ್ಮಹತ್ಯಾಯಾಃ ಪ್ರಮುಚ್ಯತೇ । ಸ ಮಹಾಭಯಾತ್ ಪ್ರಮುಚ್ಯತೇ । ಸ ಮಹಾದುಃಖಾತ್ ಪ್ರಮುಚ್ಯತೇ । ದೇಹಾಂತೇ ವೈಕುಂಠಮವಾಪ್ನೋತಿ ವೈಕುಂಠಮವಾಪ್ನೋತಿ । ಇತ್ಯುಪನಿಷತ್॥

॥ ಇತಿ [೫೫]ಶ್ರೀತುಲಸ್ಯುಪನಿಷತ್ ॥

★ ★ ★

---

೫೫ ತುಲಸಿಯನ್ನು ಕುರಿತಾಗಿಯೇ ಇರುವ ಉಪನಿಷತ್ತು ಇದು. ತುಲಸಿಯು ಅಮೃತೋದ್ಭವೆ, ಅಮೃತರಸದ ಮಂಜರಿ, ವಿಷ್ಣುವಲ್ಲಭೆ, ಹುಟ್ಟು-ಸಾವುಗಳನ್ನು ಪರಿಹರಿಸುವವಳು, ತುಲಸಿಯ ದರ್ಶನದಿಂದ ಪಾಪಗಳ ಪರಿಹಾರ, ಸ್ಪರ್ಶದಿಂದ ಪಾವಿತ್ರ್ಯ, ವಂದನೆಯಿಂದ ರೋಗಪರಿಹಾರ, ಸೇವನೆಯಿಂದ ಮೃತ್ಯುವಿನ ವಿನಾಶ, ಅರ್ಚನೆಯಿಂದ ವಿಪತ್ತುಗಳ ಪರಿಹಾರ, ಭಕ್ಷಣದಿಂದ ಜ್ಞಾನಪ್ರಾಪ್ತಿ, ಪ್ರದಕ್ಷಿಣೆಯಿಂದ ದಾರಿದ್ರ್ಯನಾಶ, ಮೃತ್ತಿಕೆಯ ಲೇಪನದಿಂದ ಮಹಾಪಾತಕಗಳ ಪರಿಹಾರ, ಪರಿಮಳದಿಂದ ಮನಃಶುದ್ಧಿ ಹೀಗೆ ತುಲಸಿಯ ಮಹಿಮೆಯನ್ನು ತಿಳಿಯುವುದೂ ಸಹ ವೈಷ್ಣವತ್ತ್ವಕ್ಕೆ ಸಾಧನ. ತುಲಸಿಯನ್ನು ವ್ಯರ್ಥವಾಗಿ ಛೇದಿಸಕೂಡದು. ಕಾಣುತ್ತಲೇ ಪ್ರದಕ್ಷಿಣೆ ಮಾಡಬೇಕು. ವಿನಾಕಾರಣ ಸ್ಪರ್ಶವೂ ನಿಷಿದ್ಧ. ಪರ್ವಕಾಲಗಳಲ್ಲಿ ತುಲಸಿಯನ್ನು ಬಿಡಿಸಕೂಡದು. ತುಲಸಿಯು ಅಮೃತತ್ತ್ವವನ್ನು ನೀಡುವವಳು. ತುಲಸಿಯ ನೆರಳಲ್ಲೂ ಸಂಪತ್ತು ನೆಲೆಸಿರುವುದು. ಸಮಸ್ತ ದೇವತೆಗಳೂ ತುಲಸಿಯನ್ನು ಸೇವಿಸುವರು. ದೇವತೆಗಳು, ಋಷಿಗಳು, ಪಿತೃಗಳು ಹೀಗೆ ತುಲಸಿಯು ಸಕಲರಿಗೂ ಪ್ರಿಯ. ತುಲಸಿಯಿಲ್ಲದ ಶ್ರಾದ್ಧವು ನಿಷ್ಫಲವೆನ್ನಿಸುವುದು, ತುಲಸಿಯಿಲ್ಲದ ಪೂಜೆ ಆಸುರೀ ಪೂಜೆ ಎನ್ನಿಸುವುದು. ಯಜ್ಞ, ದಾನ, ಜಪ, ತಪ, ತೀರ್ಥ, ಶ್ರಾದ್ಧ, ದೇವತಾರ್ಚನೆ, ತರ್ಪಣ, ಮಾರ್ಜನ, ಮೊದಲಾದ ಸಕಲ ಕಾರ್ಯಗಳಿಗೂ ತುಲಸಿಯು ಕಡ್ಡಾಯವಾದುದು. ತುಲಸೀ ಮಣಿಯ ಜಪಮಾಲೆ ಸರ್ವಾರ್ಥ ಸಾಧಕ. ಸ್ವತಃ ಶ್ರೀಹರಿಯಿಂದ ಉಪದಿಷ್ಟವಾಗಿ ಬಂದಿರುವ ಈ ಉಪನಿಷತ್ತು ಕ್ರಮವಾಗಿ ನಾರದ ಸನಕಾದಿಗಳು ಮೊದಲಾದವರಿಂದ ಪ್ರವರ್ತಿತವಾಗಿದೆ. ಇದರ ತಿಳುವಳಿಕೆಯೂ ಸಹ ಸ್ತ್ರೀಹತ್ಯೆ, ಬ್ರಹ್ಮಹತ್ಯೆ ಮೊದಲಾದ ಪಾತಕಗಳನ್ನು ಪರಿಹರಿಸುವುದು. ದುಃಖವನ್ನು ನೀಗಿಸುವುದು. ಕೊನೆಗೆ ಸದ್ಗತಿಗೂ ಕಾರಣವಾಗುವುದು ಎಂಬುದು ಇದರ ಭಾವ.

## ೨. ಶ್ರೀತುಲಸೀಮಾಹಾತ್ಮ್ಯಮ್[೫೬] - ೧

ಪಾಪಾನಿ ಯಾನಿ ರವಿಸೂನುಪಟಸ್ಥಿತಾನಿ
ಗೋಬ್ರಹ್ಮಬಾಲಪಿತೃಮಾತೃವಧಾದಿಕಾನಿ ।
ನಶ್ಯಂತಿ ತಾನಿ ತುಲಸೀವನದರ್ಶನೇನ
ಗೋಕೋಟಿದಾನಸದೃಶಂ ಫಲಮಾಪ್ನುವಂತಿ ॥ ೧ ॥

ಪುಷ್ಕರಾದ್ಯಾನಿ ತೀರ್ಥಾನಿ ಗಂಗಾದ್ಯಾಃ ಸರಿತಸ್ತಥಾ ।
ವಾಸುದೇವಾದಯೋ ದೇವಾ ವಸಂತಿ ತುಲಸೀವನೇ ॥ ೨ ॥

ತುಲಸೀಕಾನನಂ ಯತ್ರ ಯತ್ರ ಪದ್ಮವನಾನಿ ಚ ।
ವಸಂತಿ ವೈಷ್ಣವಾ ಯತ್ರ ತತ್ರ ಸನ್ನಿಹಿತೋ ಹರಿಃ ॥ ೩ ॥

---

೫೬ ''ತುಲಸೀಮಹಾತ್ಮ್ಯವು ಮಧ್ವಪುರಾಣ, ಸ್ಕಂದಪುರಾಣ ಮೊದಲಾದ ಅನೇಕ ಆಕರಗಳಲ್ಲಿ ನಿರೂಪಿತವಾಗಿದೆ. ಯಮಲೋಕದ ನರಕಗಳಿಗೆ ಕಾರಣವಾಗುವ ಗೋಹತ್ಯೆ ಮೊದಲಾದ ಸಕಲ ಪಾತಕಗಳೂ ಸಹ ತುಲಸೀವನವನ್ನು ದರ್ಶನಮಾಡುತ್ತಲೇ ನಾಶ ಹೊಂದುವುವು. ಕೋಟಿ ಗೋವುಗಳನ್ನು ದಾನ ನೀಡಿದಷ್ಟು ಫಲವೂ ಸಹ ಕೂಡಲೇ ಲಭಿಸುವುದು. ಪುಷ್ಕರ ಮೊದಲಾದ ತೀರ್ಥಗಳೂ, ಗಂಗೆ ಮೊದಲಾದ ನದಿಗಳೂ ತುಲಸೀವನದಲ್ಲಿ ನೆಲೆಸಿರುವುದು. ತುಲಸಿಯ ಮೇಲ್ಭಾಗದಲ್ಲಿ ಸಕಲ ತೀರ್ಥಗಳೂ, ಮಧ್ಯಭಾಗದಲ್ಲಿ ಸಕಲ ದೇವತೆಗಳೂ, ಅಗ್ರಭಾಗದಲ್ಲಿ ಸಕಲ ವೇದಗಳೂ ನೆಲೆಸಿರುವವು. ತುಲಸಿಯನ್ನು ಪ್ರಾರ್ಥಿಸಿಯೇ ಬಿಡಿಸಿಕೊಳ್ಳಬೇಕು. ಸಕಲ ಕಾರ್ಯಗಳ ಪ್ರಾರಂಭದಲ್ಲಿಯೂ ತುಲಸಿಯ ಸ್ಮರಣೆ ವಿಹಿತ. ಪ್ರತಿನಿತ್ಯ ಹದಿನೆಂಟು ತುಲಸೀ ದಳಗಳು ಗ್ರಾಹ್ಯ. ಮೊದಲಾದ ಅನೇಕ ವಿಧವಾದ ಮಹಿಮೆಗಳನ್ನು ಪುರಾಣಗಳು ವರ್ಣಿಸಿವೆ. ಒಂದು ತುಲಸೀದಳವು ನೂರು ಸುವರ್ಣ ಪುಷ್ಪಗಳಿಗಿಂತ ಮಿಗಿಲು. ಭೂತಪ್ರೇತಾದಿ ಸಕಲ ಪೀಡೆಗಳೂ ಸಹ ತುಲಸಿಯ ದರ್ಶನಮಾತ್ರದಿಂದಲೇ ನಾಶ ಹೊಂದುವುವು. ಮರಣಕಾಲದಲ್ಲಿ ತುಲಸಿಯನ್ನು ಶಿರಸಾ ಧರಿಸಿದಲ್ಲಿ ಸ್ವರ್ಗಪ್ರಾಪ್ತಿಯು ನಿಶ್ಚಿತ. ತುಲಸಿಯಿಂದ ಆದಿವ್ಯಾಧಿಗಳೂ ಸಹ ಪರಿಹಾರವಾಗುವುವು. ತುಲಸಿಯ ಪರಿಸರವೂ ಸಹ ಅತ್ಯಂತ ಪಾವನ. ತುಲಸಿಯನ್ನು ಬೆಳೆಸುವುದು ಅತ್ಯಂತ ಪುಣ್ಯಕರವಾದ ಕಾರ್ಯ. ತುಲಸೀಮಾಲೆಯ ಧಾರಣೆ ಸರ್ವಸಿದ್ಧಿಪ್ರದ. ತುಲಸಿಯು ಬಾಡಿದ್ದರೂ, ಒಣಗಿದ್ದರೂ ಪವಿತ್ರವೇ. ಕೌಸ್ತುಭಾದಿ ರತ್ನಗಳಿಗಿಂತ ತುಲಸಿಯು ಶ್ರೀಹರಿಗೆ ಪ್ರಿಯ (ಕೌಸ್ತುಭಕ್ಕೆ ಅಭಿಮಾನಿ ಬ್ರಹ್ಮದೇವರು. ತುಲಸಿಯಲ್ಲಿ ಮಹಾಲಕ್ಷ್ಮಿಯ ಸನ್ನಿಧಾನವಿರುವುದರಿಂದ ಅದು ಕೌಸ್ತುಭಕ್ಕಿಂತಲೂ ಮಿಗಿಲು ಎಂಬುದು ಸಮುಚಿತವಾದುದು). ದೇವಪೂಜೆಗೆಂದು ತುಲಸೀ ದಳಗಳ ದಾನವೂ ಸಹ ಮಹಾಪುಣ್ಯಕರ. ತುಲಸೀಮಾಲೆಯು ಸದಾ ಧಾರ್ಯವಾದುದು. ಚಾತುರ್ಮಾಸ್ಯದಲ್ಲಿ ತುಲಸಿಯ ಮಹತ್ತ್ವ ಮತ್ತಷ್ಟು ಹೆಚ್ಚಿನದು. ದೇವತೆಗಳೂ ಸಹ ತುಲಸಿಯನ್ನು ಬೆಳೆಸಿ ಅದರಿಂದ ಶ್ರೀಹರಿಯನ್ನು ಪೂಜಿಸುವರು. ತಾನೇ ತುಲಸಿಯನ್ನು ಬೆಳೆಸಿ, ಪೂಜಿಸುವುದು ಮತ್ತಷ್ಟು ಪುಣ್ಯಕರ. ಶ್ರಾದ್ಧಕಾಲದಲ್ಲಿ ತುಲಸಿಯನ್ನು ಉಪಯೋಗಿಸುವುದು ಗಯಾಶ್ರಾದ್ಧಕ್ಕೆ ಸಮಾನ. ತುಲಸೀಮಹಾತ್ಮ್ಯದ ಶ್ರವಣವೂ ಸಹ ಅತ್ಯಂತ ಪಾವನ. ತುಲಸಿಯ ಗಂಧವೂ ಸಹ ಪರಮಪವಿತ್ರ. ತುಲಸೀಕಾಷ್ಠದಿಂದ ಮಾಡುವ ಪ್ರತಿಮೆಗಳೂ ಸಹ ಪೂಜೆಗೆ ತುಂಬಾ ಶ್ರೇಷ್ಠ ಕರ್ಣದಲ್ಲಿ ತುಲಸಿಯನ್ನು ಧರಿಸುವುದು ಸಂಪತ್ಕರ. ಸಮಸ್ತ ಚರಾಚರ ಜಗತ್ತನ್ನು ತುಲಸಿಯು ಪಾಲಿಸುವುದು'' ಹೀಗೆ ಬಗೆಬಗೆಯಾಗಿ ಪುರಾಣಗಳಲ್ಲಿ ತುಲಸಿಯ ಮಹಾತ್ಮ್ಯ ನಿರೂಪಿತವಾಗಿದೆ.

ಯನ್ಮೂಲೇ ಸರ್ವತೀರ್ಥಾನಿ ಯನ್ಮಧ್ಯೇ ಸರ್ವದೇವತಾಃ।
ಯದಗ್ರೇ ಸರ್ವವೇದಾಶ್ಚ ತುಲಸಿ ತ್ವಾಂ ನಮಾಮ್ಯಹಮ್ ॥ ೪ ॥

ತುಲಸಿ ಶ್ರೀಸಖಿ ಶುಭೇ ಪಾಪಹಾರಿಣಿ ಪುಣ್ಯದೇ।
ನಮಸ್ತೇ ನಾರದನುತೇ ನಾರಾಯಣಮನಃಪ್ರಿಯೇ ॥ ೫ ॥

ರಾಜದ್ವಾರೇ ಸಭಾಮಧ್ಯೇ ಸಂಗ್ರಾಮೇ ಶತ್ರುಪೀಡನೇ।
ತುಲಸೀಸ್ಮರಣಂ ಕುರ್ಯಾತ್ ಸರ್ವತ್ರ ವಿಜಯೀ ಭವೇತ್ ॥ ೬ ॥

ತುಲಸ್ಯಮೃತಜನ್ಮಾಽಸಿ ಸದಾ ತ್ವಂ ಕೇಶವಪ್ರಿಯೇ।
ಕೇಶವಾರ್ಥೇ ಚಿನೋಮಿ ತ್ವಾಂ ವರದಾ ಭವ ಶೋಭನೇ ॥ ೭ ॥

ಮೋಕ್ಷೈಕಹೇತೋರ್ಧರಣೀಧರಸ್ಯ ವಿಷ್ಣೋಃ ಸಮಸ್ತಸ್ಯ ಗುರೋಃ ಪ್ರಿಯಸ್ಯ।
ಆರಾಧನಾರ್ಥಂ ಪುರುಷೋತ್ತಮಸ್ಯ ಛಿಂದೇ ದಲಂ ತೇ ತುಲಸಿ ಕ್ಷಮಸ್ವ ॥ ೮ ॥

ಕೃಷ್ಯಾರಂಭೇ ತಥಾ ಪುಣ್ಯೇ ವಿವಾಹೇ ಚಾರ್ಥಸಂಗ್ರಹೇ।
ಸರ್ವಕಾರ್ಯೇಷು ಸಿದ್ಧ್ಯರ್ಥಂ ಪ್ರಸ್ಥಾನೇ ತುಲಸೀಂ ಸ್ಮರೇತ್ ॥ ೯ ॥

ಯಃ ಸ್ಮರೇತ್ ತುಲಸೀಂ ಸೀತಾಂ ರಾಮಂ ಸೌಮಿತ್ರಿಣಾ ಸಹ।
ವಿನಿರ್ಜಿತ್ಯ ರಿಪೂನ್ ಸರ್ವಾನ್ ಪುನರಾಯಾತಿ ಕಾರ್ಯಕೃತ್ ॥ ೧೦ ॥

ಯಾ ದೃಷ್ಟಾ ನಿಖಿಲಾಘಸಂಘಶಮನೀ ಸ್ಪೃಷ್ಟಾ ವಪುಃಪಾವನೀ
ರೋಗಾಣಾಮಭಿವಂದಿತಾ ನಿರಸನೀ ಸಿಕ್ತಾಽಂತಕತ್ರಾಸಿನೀ।
ಪ್ರತ್ಯಾಸತ್ತಿವಿಧಾಯಿನೀ ಭಗವತಃ ಕೃಷ್ಣಸ್ಯ ಸಂರೋಪಿತಾ
ನ್ಯಸ್ತಾ ತಚ್ಚರಣೇ ವಿಮುಕ್ತಿಫಲದಾ ತಸ್ಯೈ ತುಲಸ್ಯೈ ನಮಃ ॥ ೧೧ ॥

ಖಾದನ್ ಮಾಂಸಂ ಪಿಬನ್ ಮದ್ಯಂ ಸಂಗಚ್ಛನ್ನಂತ್ಯಜಾದಿಭಿಃ।
ಸದ್ಯೋ ಭವತಿ ಪೂತಾತ್ಮಾ ಕರ್ಣಯೋಸ್ತುಲಸೀಂ ಧರನ್ ॥ ೧೨ ॥

ಚತುಷ್ಕರ್ಣೇ ಮುಖೇ ಚೈಕಂ ನಾಭಾವೇಕಂ ತಥೈವ ಚ।
ಶಿರಸ್ಯೇಕಂ ತಥಾ ಪ್ರೋಕ್ತಂ ತೀರ್ಥೇ ತ್ರಯಮುದಾಹೃತಮ್ ॥ ೧೩ ॥

ಅನ್ನೋಪರಿ ತಥಾ ಪಂಚ ಭೋಜನಾಂತೇ ದಲತ್ರಯಮ್।
ಏವಂ ಶ್ರೀತುಲಸೀ ಗ್ರಾಹ್ಯಾ ಅಷ್ಟಾದಶದಲಾ ಸದಾ ॥ ೧೪ ॥

॥ ಇತಿ ತುಲಸೀಮಾಹಾತ್ಮ್ಯಮ್ ॥

★ ★ ★

# ೩. ಶ್ರೀತುಲಸೀಮಾಹಾತ್ಮ್ಯಮ್ - ೨

**ಈಶ್ವರ ಉವಾಚ -**

ಸರ್ವೇಭ್ಯಃ ಪತ್ರಪುಷ್ಪೇಭ್ಯಃ ಸತ್ತಮಾ ತುಲಸೀಶಿಖಾ ।
ಸರ್ವಕಾಮಪ್ರದಾ ಶುದ್ಧಾ ವೈಷ್ಣವೀ ವಿಷ್ಣುಸುಪ್ರಿಯಾ ॥ ೧ ॥

ಭುಕ್ತಿಮುಕ್ತಿಪ್ರದಾ ಮುಖ್ಯಾ ಸರ್ವಲೋಕಪರಾ ಶುಭಾ ।
ಯಾಮಾಶ್ರಿತ್ಯ ಗತಾಃ ಸ್ವರ್ಗಮಕ್ಷಯಂ ಮುನಿಸತ್ತಮಾಃ ॥ ೨ ॥

ಹಿತಾರ್ಥಂ ಸರ್ವಲೋಕಾನಾಂ ವಿಷ್ಣುನಾ ರೋಪಿತಾ ಪುರಾ ।
ತುಲಸೀಪತ್ರಪುಷ್ಪಂ ಚ ಸರ್ವಧರ್ಮಪ್ರತಿಷ್ಠಿತಮ್ ॥ ೩ ॥

ಯಥಾ ವಿಷ್ಣೋಃ ಪ್ರಿಯಾ ಲಕ್ಷ್ಮೀರ್ಯಥಾಽಹಂ ಪ್ರಿಯ ಏವ ಚ ।
ತಥೇಯಂ ತುಲಸೀ ದೇವೀ ಚತುರ್ಥೋ ನೋಪಪದ್ಯತೇ ॥ ೪ ॥

ತುಲಸೀಪತ್ರಮೇಕಂ ತು ಶತಹೇಮಫಲಪ್ರದಮ್ ।
ನಾನ್ಯೈಃ ಪುಷ್ಪೈಸ್ತಥಾ ಪತ್ರೈರ್ನಾನ್ಯೈರ್ಗಂಧಾನುಲೇಪನೈಃ ॥ ೫ ॥

ತುಷ್ಯತೇ ದೈತ್ಯಹಾ ವಿಷ್ಣುಸ್ತುಲಸ್ಯಾಶ್ಚ ದಲೈರ್ವಿನಾ ।
ಅನೇನ ಪೂಜಿತೋ ಯೇನ ಹರಿರ್ನಿತ್ಯಂ ಪರಾಶಯಾ ॥ ೬ ॥

ತೇನ ದತ್ತಂ ಹುತಂ ಜ್ಞಾತಂ ಕೃತಂ ಯಜ್ಞವ್ರತಾದಿಕಮ್ ।
ಜನ್ಮಜನ್ಮನಿ ಭಾಸಿತ್ವಂ ಸುಖಂ ಭಾಗ್ಯಂ ಯಶಃ ಶ್ರಿಯಮ್ ॥ ೭ ॥

ಕುಲಂ ಶೀಲಂ ಕಲತ್ರಂ ಚ ಪುತ್ರಂ ದುಹಿತರಂ ತಥಾ ।
ಧನಂ ರಾಜ್ಯಮರೋಗತ್ವಂ ಜ್ಞಾನಂ ವಿಜ್ಞಾನಮೇವ ಚ ॥ ೮ ॥

ವೇದವೇದಾಂಗಶಾಸ್ತ್ರಂ ಚ ಪುರಾಣಾಗಮಸಂಹಿತಾಃ ।
ಸರ್ವಂ ಕರಗತಂ ಮನ್ಯೇ ತುಲಸ್ಯಾಽಭ್ಯರ್ಚನೇ ಹರೇಃ ॥ ೯ ॥

ಯಥಾ ಗಂಗಾ ಪವಿತ್ರಾಂಗೀ ಸುರಲೋಕೇ ವಿಮೋಕ್ಷದಾ ।
ಯಥಾ ಭಾಗೀರಥೀ ಪುಣ್ಯಾ ತಥೈವಂ ತುಲಸೀಶಿಖಾ ॥ ೧೦ ॥

ಕಿಂ ಚ ಗಂಗಾಜಲೇನೈವ ಕಿಂಚ ಪುಷ್ಕರಸೇವಯಾ ।
ತುಲಸೀದಲಮಿಶ್ರೇಣ ಜಲೇನೈವ ಪ್ರಮೋದ್ಯತೇ ॥ ೧೧ ॥

ಮಾಧವಃ ಸಂಮುಖೋ ಯಸ್ಯ ಜನ್ಮಜನ್ಮಸು ಧೀಮತಃ।
ತಸ್ಯ ಶ್ರದ್ಧಾ ಭವೇಚ್ಛುತ್ವಾ ತುಲಸ್ಯಾ ಹರಿಮರ್ಚಿತುಮ್ ॥ ೧೨ ॥

ಯೋ ಮಂಜರೀದಲೈರೇವ ತುಲಸ್ಯಾ ವಿಷ್ಣುಮರ್ಚಯೇತ್।
ತಸ್ಯ ಪುಣ್ಯಫಲಂ ಸ್ಕಂದ ಕಥಿತುಂ ನೈವ ಶಕ್ಯತೇ ॥ ೧೩ ॥

ತತ್ರ ಕೇಶವಸಾನ್ನಿಧ್ಯಂ ಯತ್ರಾಸ್ತಿ ತುಲಸೀವನಮ್।
ತತ್ರ ಬ್ರಹ್ಮಾ ಚ ಕಮಲಾ ಸರ್ವದೇವಗಣೈಃ ಸಹ ॥ ೧೪ ॥

ತಸ್ಮಾತ್ ತಾಂ ಸಂನಿಕೃಷ್ಟೇ ತು ಸದಾ ದೇವೀಂ ಪ್ರಪೂಜಯೇತ್।
ಸ್ತೋತ್ರಮಂತ್ರಾದಿಕಂ ಯದ್ವಾ ಸರ್ವಮಾನಂತ್ಯಮಶ್ನುತೇ ॥ ೧೫ ॥

ಯೇ ಚ ಪ್ರೇತಾಶ್ಚ ಕೂಷ್ಮಾಂಡಾಃ ಪಿಶಾಚಾ ಬ್ರಹ್ಮರಾಕ್ಷಸಾಃ।
ಭೂತದೈತ್ಯಾದಯಸ್ತತ್ರ ಪಲಾಯಂತೇ ಸದೈವ ಹಿ ॥ ೧೬ ॥

ಅಲಕ್ಷ್ಮೀರ್ನಾಶಿನೀ ಘೋರ್ಣಾ ಯಾ ಡಾಕಿನ್ಯಾದಿಮಾತರಃ।
ಸರ್ವಾಃ ಸಂಕೋಚಿತಾ ಯಾಂತಿ ದೃಷ್ಟ್ವಾ ತು ತುಲಸೀದಲಮ್ ॥ ೧೭ ॥

ಬ್ರಹ್ಮಹತ್ಯಾದಯಃ ಪಾಪವ್ಯಾಧಯಃ ಪಾಪಸಂಭವಾಃ।
ಕುಮಂತ್ರಿಣಾ ಕೃತಾ ಯೇ ಚ ಸರ್ವೇ ನಶ್ಯಂತಿ ತತ್ರ ವೈ ॥ ೧೮ ॥

ಭೂತಲೇ ವಾಪಿತಂ ಯೇನ ಹರ್ಯರ್ಥಂ ತುಲಸೀವನಮ್।
ಕೃತಂ ಕ್ರತುಶತಂ ತೇನ ವಿಧಿವತ್ ಪ್ರಿಯದಕ್ಷಿಣಮ್ ॥ ೧೯ ॥

ಹರಿಲಿಂಗೇಷು ಚಾನ್ಯೇಷು ಸಾಲಗ್ರಾಮಶಿಲಾಸು ಚ।
ತುಲಸೀಗ್ರಹಣಂ ಕೃತ್ವಾ ವಿಷ್ಣೋಃ ಸಾಯುಜ್ಯಮಾವ್ರಜೇತ್ ॥ ೨೦ ॥

ನಂದಂತಿ ಪುರುಷಾಸ್ತಸ್ಯ ಮಾಧವಾರ್ಥೇ ಕ್ಷಿತೌ ತು ಯಃ।
ತುಲಸೀಂ ರೋಪಯೇದ್ಧೀರಃ ಸ ಯಾತಿ ಮಾಧವಾಲಯಮ್ ॥ ೨೧ ॥

ಪೂಜಯಿತ್ವಾ ಹರಿಂ ದೇವಂ ನಿರ್ಮಾಲ್ಯಂ ತುಲಸೀದಲಮ್।
ಧಾರಯೇದ್ಯಃ ಸ್ವಶೀರ್ಷೇ ತು ಪಾಪಾತ್ ಪೂತೋ ದಿವಂ ವ್ರಜೇತ್ ॥ ೨೨ ॥

ಪೂಜನೇ ಕೀರ್ತನೇ ಧ್ಯಾನೇ ರೋಪಣೇ ಧಾರಣೇ ಕಲೌ।
ತುಲಸೀ ದಹತೇ ಪಾಪಂ ಸ್ವರ್ಗಂ ಮೋಕ್ಷಂ ದದಾತಿ ಚ ॥ ೨೩ ॥

ಉಪದೇಶಂ ದಿಶೇದಸ್ಯಾಃ ಸ್ವಯಮಾಚರತೇ ಪುನಃ।
ಸ ಯಾತಿ ಪರಮಂ ಸ್ಥಾನಂ ಮಾಧವಸ್ಯ ನಿಕೇತನಮ್ ॥ ೨೪ ॥

ಹರೇಃ ಪ್ರಿಯಕರಂ ಯಚ್ಚ ತನ್ಮೇ ಪ್ರಿಯತರಂ ಭವೇತ್।
ಸರ್ವೇಷಾಮಪಿ ದೇವಾನಾಂ ದೇವೀನಾಂ ಚ ಸಮಂತತಃ ॥ ೨೫ ॥

ಶ್ರಾದ್ಧೇಷು ಯಜ್ಞಕಾರ್ಯೇಷು ಪರ್ಣಮೇಕಂ ಷಡಾನನ।
ತಸ್ಮಾತ್ ಸರ್ವಪ್ರಯತ್ನೇನ ತುಲಸೀಸೇವನಂ ಕುರು ॥ ೨೬ ॥

ತುಲಸೀ ಸೇವಿತಾ ಯೇನ ತೇನ ಸರ್ವಂ ತು ಸೇವಿತಮ್।
ಗುರುಂ ವಿಪ್ರಂ ದೇವತೀರ್ಥಂ ತಸ್ಮಾತ್ ಸೇವಯ ಷಣ್ಮುಖ ॥ ೨೭ ॥

ಶಿಖಾಯಾಂ ತುಲಸೀಂ ಕೃತ್ವಾ ಯಸ್ತು ಪ್ರಾಣಾನ್ ಪರಿತ್ಯಜೇತ್।
ದುಷ್ಕೃತೌಘಾದ್ವಿನಿರ್ಮುಕ್ತಃ ಸ್ವರ್ಗಮೇತಿ ನಿರಾಮಯಮ್ ॥ ೨೮ ॥

ರಾಜಸೂಯಾದಿಭಿರ್ಯಜ್ಞೈರ್ವ್ರತೈಶ್ಚ ವಿವಿಧೈರ್ಯಮೈಃ।
ಯಾ ಗತಿಃ ಪ್ರಾಪ್ಯತೇ ಧೀರೈಃ ತುಲಸೀಸೇವಿನಾಂ ಭವೇತ್ ॥ ೨೯ ॥

ತುಲಸೀದಲೇನ ಚೈಕೇನ ಪೂಜಯಿತ್ವಾ ಹರಿಂ ನರಃ।
ವೈಷ್ಣವತ್ವಮವಾಪ್ನೋತಿ ಕಿಮನ್ಯೈಃ ಶಾಸ್ತ್ರವಿಸ್ತರೈಃ ॥ ೩೦ ॥

ನ ಪಿಬೇತ್ ಸ ಪಯೋಮಾತುಸ್ತುಲಸ್ಯಾಃ ಕೋಟಿಸಂಖ್ಯಕೈಃ।
ಅರ್ಚಿತಃ ಕೇಶವೋ ಯೇನ ಶಾಖಾಮೃದುಲಪಲ್ಲವೈಃ ॥ ೩೦ ॥

ಭಾವಯೇತ್ ಪುರುಷಾನ್ಮರ್ತ್ಯಃ ಶತಶೋಽಥ ಸಹಸ್ರಶಃ।
ಪೂಜಯಿತ್ವಾ ಹರಿಂ ನಿತ್ಯಂ ಕೋಮಲೈಸ್ತುಲಸೀದಲೈಃ ॥ ೩೨ ॥

ಪ್ರಧಾನತೋ ಗುಣಾಸ್ತ್ವತ್ರ ತು ತುಲಸ್ಯಾ ಗದಿತಾ ಮಯಾ।
ನಿಖಿಲಂ ಪುರುಕಾಲೇನ ಗುಣಂ ವಕ್ತುಂ ನ ಶಕ್ನುಮಃ ॥ ೩೩ ॥

ಯಸ್ತ್ವಿದಂ ಶೃಣುಯಾನ್ನಿತ್ಯಮಾಖ್ಯಾನಂ ಪುಣ್ಯಸಂಚಯಮ್।
ಪೂರ್ವಜನ್ಮಕೃತಾತ್ ಪಾಪಾನ್ಮುಚ್ಯತೇ ಜನ್ಮಬಂಧನಾತ್ ॥ ೩೪ ॥

ಸಕೃತ್ ಪಠನಮಾತ್ರೇಣ ವಹ್ನಿಷ್ಟೋಮಫಲಂ ಲಭೇತ್।
ನ ತಸ್ಯ ವ್ಯಾಧಯಃ ಪುತ್ರ ಮೂರ್ಖತ್ವಂ ನ ಕದಾಚನ ॥ ೩೫ ॥

ಸರ್ವದಾ ಜಯಮಾಪ್ನೋತಿ ನ ಗಚ್ಛೇತ್ ಸ ಪರಾಜಯಮ್ ।
ಲೇಖಸ್ತಿಷ್ಠೇತ್ ಗೃಹೇ ಯಸ್ಯ ತಸ್ಯ ಲಕ್ಷ್ಮೀಃ ಪ್ರವರ್ತತೇ ॥ ೩೬ ॥

ನ ಬಾಧಯೋ ನ ಚ ಪ್ರೇತಾ ನ ಶೋಕಾ ನಾವಮಾನನಾ ।
ನ ತಿಷ್ಠಂತಿ ಕ್ಷಣಂ ತತ್ರ ಯತ್ರೇಯಂ ವರ್ತತೇ ಲಿಪಿಃ ॥ ೩೭ ॥

॥ ಇತಿ ಶ್ರೀಪಾದ್ಮಪುರಾಣೇ ತುಲಸೀಮಾಹಾತ್ಮ್ಯಮ್ (೧/೬೦) ॥

★ ★ ★

## ೪. ಶ್ರೀತುಲಸೀಮಾಹಾತ್ಮ್ಯಮ್ - ೩

### ಶೌನಕ ಉವಾಚ

ಮಾಹಾತ್ಮ್ಯಂ ಬ್ರೂಹಿ ಸರ್ವಜ್ಞ ಶೃಣ್ವತಾಂ ಪಾಪನಾಶನಮ್ ।
ಸರ್ವಪ್ರಾಣಿಹಿತಾರ್ಥಾಯ ತುಲಸ್ಯಾ ಅನುಕಂಪಯಾ ॥ ೧ ॥

### ಸೂತ ಉವಾಚ

ತುಲಸ್ಯಾಃ ಪರಿಸರೇ ಯಸ್ಯ ಕಾನನಂ ತಿಷ್ಠತಿ ದ್ವಿಜ ।
ಗೃಹಸ್ಯ ತೀರ್ಥರೂಪತ್ವಾನ್ನಾಯಾಂತಿ ಯಮಕಿಂಕರಾಃ ॥ ೨ ॥

ತುಲಸ್ಯಾಃ ಕಾನನಂ ವಿಪ್ರ ಸರ್ವಪಾಪಹರಂ ಶುಭಮ್ ।
ರೋಪಯಂತಿ ನರಾಃ ಶ್ರೇಷ್ಠಾಸ್ತೇ ನ ಪಶ್ಯಂತಿ ಭಾಸ್ಕರೀಮ್ ॥ ೩ ॥

ರೋಪಣಂ ಪಾಲನಂ ಸೇವಾಂ ದರ್ಶನಂ ಸ್ಪರ್ಶನಂ ತು ಯಃ ।
ಕುರ್ಯ್ಯಾತ್ ತಸ್ಯ ಪ್ರನಷ್ಟಂ ಸ್ಯಾತ್ ಸರ್ವಪಾಪಂ ದ್ವಿಜೋತ್ತಮ ॥ ೪ ॥

ಕೋಮಲೈಸ್ತುಲಸೀಪತ್ರೈರರ್ಚಯಂತಿ ಹರಿಂ ತು ಯೇ ।
ಕಾಲಸ್ಯ ಸದನಂ ವಿಪ್ರ ತೇ ನ ಯಾಂತಿ ಮಹಾಶಯಾಃ ॥ ೫ ॥

ಗಂಗಾದ್ಯಾಃ ಸರಿತಃ ಶ್ರೇಷ್ಠಾ ವಿಷ್ಣುಬ್ರಹ್ಮಮಹೇಶ್ವರಾಃ ।
ದೇವೈಸ್ತೀರ್ಥೈಃ ಪುಷ್ಕರಾದ್ಯೈಸ್ತಿಷ್ಠಂತಿ ತುಲಸೀದಲೇ ॥ ೬ ॥

ಯೋ ಯುಕ್ತಸ್ತುಲಸೀಪತ್ರೈಃ ಪಾಪೀ ಪ್ರಾಣಾನ್ ವಿಮುಂಚತಿ ।
ವಿಷ್ಣೋರ್ನಿಕೇತನಂ ಯಾತಿ ಸತ್ಯಮೇತನ್ಮಯೋದಿತಮ್ ॥ ೭ ॥

ತುಲಸೀಮೃತ್ತಿಕಾಲಿಪ್ತೋ ಯುಕ್ತಃ ಪಾಪಶತೈರಪಿ ।
ವಿಮುಂಚತಿ ನರಃ ಪ್ರಾಣಾನ್ ಸ ಯಾತಿ ಹರಿಮಂದಿರಮ್ ॥ ೮ ॥

ಯೋ ನರೋ ಧಾರಯೇದ್ವಿಪ್ರ ತುಲಸೀಕಾಷ್ಠಚಂದನಮ್ ।
ತಸ್ಯಾಂಗಂ ನ ಸ್ಪೃಶೇತ್ ಪಾಪಂ ಸ ಯಾತಿ ಪರಮಂ ಪದಮ್ ॥ ೯ ॥

ತುಲಸೀಕಾಷ್ಠಮಾಲಾಂ ತು ಕಂಠಸ್ಥಾಂ ವಹತೇ ತು ಯಃ ।
ಅಪ್ಯಶೌಚೋಽಪ್ಯನಾಚಾರೋ ಭಕ್ತ್ಯಾ ಯಾತಿ ಹರೇರ್ಗೃಹಮ್ ॥ ೧೦ ॥

ಧಾತ್ರೀಫಲಕೃತಾ ಮಾಲಾ ತುಲಸೀಕಾಷ್ಠಸಂಭವಾ ।
ದೃಶ್ಯತೇ ಯಸ್ಯ ದೇಹೇ ತು ಸ ವೈ ಭಾಗವತೋ ನರಃ ॥ ೧೧ ॥

ತುಲಸೀದಲಜಾಂ ಮಾಲಾಂ ಕಂಠಸ್ಥಾಂ ವಹತೇ ತು ಯಃ ।
ವಿಷ್ಣೂಚ್ಛಿಷ್ಟಾಂ ವಿಶೇಷೇಣ ಸ ನಮಸ್ಯೋ ದಿವೌಕಸಾಮ್ ॥ ೧೨ ॥

ಯಃ ಪುನಸ್ತುಲಸೀಮಾಲಾಂ ಕಂಠೇ ಕೃತ್ವಾ ಜನಾರ್ದನಮ್ ।
ಪೂಜಯೇತ್ ಪುಣ್ಯಮಾಪ್ನೋತಿ ಪ್ರತಿ ಪುಷ್ಪಂ ಗವಾಯುತಮ್ ॥ ೧೩ ॥

ಧಾರಯಂತಿ ನ ಯೇ ಮಾಲಾಂ ಹೈತುಕಾಃ ಪಾಪಬುದ್ಧಯಃ ।
ನರಕಾನ್ನ ನಿವರ್ತಂತೇ ದಗ್ಧಾಃ ಕೋಪಾಗ್ನಿನಾ ಹರೇಃ ॥ ೧೪ ॥

ನ ಜಹ್ಯಾತ್ ತುಲಸೀಮಾಲಾಂ ಧಾತ್ರೀಮಾಲಾಂ ವಿಶೇಷತಃ ।
ಮಹಾಪಾತಕಸಂಹರ್ತ್ರೀಂ ಧರ್ಮಕಾಮಾರ್ಥದಾಯಿನೀಮ್ ॥ ೧೫ ॥

ಸ್ಪೃಶೇಚ್ಚ ಯಾನಿ ಲೋಮಾನಿ ಧಾತ್ರೀಮಾಲಾ ಕಲೌ ನೃಣಾಮ್ ।
ತಾವದ್ವರ್ಷಸಹಸ್ರಾಣಿ ವಸತೇ ಕೇಶವಾಲಯೇ ॥ ೧೬ ॥

ನಿವೇದ್ಯ ಕೇಶವೇ ಮಾಲಾಂ ತುಲಸೀಕಾಷ್ಠಸಂಭವಾಮ್ ।
ವಹತೇ ಯೋ ನರೋ ಭಕ್ತ್ಯಾ ತಸ್ಯ ವೈ ನಾಸ್ತಿ ಪಾತಕಮ್ ॥ ೧೭ ॥

ತುಲಸೀಕಾಷ್ಠಮಾಲಾಂ ತು ಪ್ರೇತರಾಜಸ್ಯ ದೂತಕಾಃ ।
ದೃಷ್ಟ್ವಾ ನಶ್ಯಂತಿ ದೂರೇಣ ವಾತೋದ್ಧೂತಂ ಯಥಾ ದಲಮ್ ॥ ೧೮ ॥

ತುಲಸ್ಯಾ ವಿಪಿನೇ ಧಾತ್ರ್ಯಾಶ್ಛಾಯಾಸು ಯೋ ನರೋತ್ತಮಃ ।
ಪಿಂಡಂ ದದಾತಿ ಪಿತರೋ ಮುಕ್ತಿಂ ಯಾಂತಿ ದ್ವಿಜೋತ್ತಮ ॥ ೧೯ ॥

**॥ ಇತಿ ಶ್ರೀಪದ್ಮಮಹಾಪುರಾಣೇ ತುಲಸೀಮಾಹಾತ್ಮ್ಯಮ್ (ಅ.೨೧; ಬ್ರಹ್ಮಖಂಡ) ॥**

★ ★ ★

# ೫. ತುಲಸೀಮಾಹಾತ್ಮ್ಯಮ್ -೪

## ಬ್ರಹ್ಮೋವಾಚ

ಶ್ರೀಮತ್ತುಲಸೀಮಾಹಾತ್ಮ್ಯಂ ಯಥಾವದ್ವರ್ಣಯ ಪ್ರಭೋ।
ಯಸ್ಯಾಃ ಸನ್ನಿಧಿಮಾತ್ರೇಣ ಪ್ರೀತಿರ್ಭವತಿ ತೇಽಧಿಕಾ ॥೧॥

## ಶ್ರೀಭಗವಾನುವಾಚ

ಮಣಿಕಾಂಚನಪುಷ್ಪಾಣಿ ತಥಾ ಮುಕ್ತಾಮಯಾನಿ ಚ ।
ತುಲಸೀಪತ್ರದಾನಸ್ಯ ಕಲಾಂ ನಾರ್ಹಂತಿ ಷೋಡಶೀಮ್ ॥೨॥

ತುಲಸೀಮಂಜರೀಭಿರ್ಯಃ ಕುರ್ಯಾದ್ವೈ ಮಮ ಪೂಜನಮ್।
ನ ಸ ಗರ್ಭಗೃಹಂ ಯಾಯಾತ್ ಮುಕ್ತಿಭಾಗೀ ಭವೇನ್ನರಃ ॥೩॥

ಆರೋಪ್ಯ ತುಲಸೀಂ ವತ್ಸ ಪೂಜಯೇತ್ ತದ್ದಲೈಶ್ಚ ಮಾಮ್।
ದಿವಿ ಸಂಮೋದಮಾನಃ ಸ ಶ್ವೇತದ್ವೀಪೇ ಚ ಮೇ ಗೃಹೇ ॥೪॥

ಶ್ರೀಮತ್ತುಲಸ್ಯಾಽರ್ಚಯತೇ ಸಕೃದ್ಧಿ ಮಾಂ ಪತ್ರೈಃ ಸುಗಂಧೈರ್ವಿಮಲೈರಖಂಡಿತೈಃ।
ಯಸ್ತಸ್ಯ ಪಾಪಂ ಪಟಸಂಸ್ಥಿತಂ ತದಾ ನಿರೀಕ್ಷಯಿತ್ವಾ ಪರಿಮಾರ್ಜಯೇದ್ಯಮಃ ॥೫॥

ತುಲಸೀ ನ ಯೇಷಾಂ ಮಮ ಪೂಜನಾರ್ಥಂ ಸಂಪಾದಿತೈಕಾದಶಿಪುಣ್ಯವಾಸರೇ।
ಧಿಗ್ಯೌವನಂ ಜೀವಿತಮರ್ಥಸಂತತಿಸ್ತೇಷಾಂ ಸುಖಂ ನೇಹ ಚ ದೃಶ್ಯತೇ ಪರೇ ॥೬॥

ಲಿಂಗಮಭ್ಯರ್ಚಿತಂ ದೃಷ್ಟ್ವಾ ಸಹೋಮಾಸೇ ಚ ಮಾಮಕಮ್।
ತುಲಸೀಪತ್ರನಿಕರೈರ್ಮುಚ್ಯತೇ ಬ್ರಹ್ಮಹತ್ಯಯಾ ॥೭॥

ನಿತ್ಯಮಭ್ಯರ್ಚಯೇದ್ಯೋ ವೈ ತುಲಸ್ಯಾ ಮಾಂ ರಮೇಶ್ವರಮ್।
ಮಹಾಪಾಪಾನಿ ನಶ್ಯಂತಿ ಕಿಂ ಪುನಶ್ಚೋಪಪಾತಕಮ್ ॥೮॥

ವರ್ಜ್ಯಂ ಪರ್ಯುಷಿತಂ ಪುಷ್ಪಂ ವರ್ಜ್ಯಂ ಪರ್ಯುಷಿತಂ ಜಲಮ್।
ನ ವರ್ಜ್ಯಂ ತುಲಸೀಪತ್ರಂ ನ ವರ್ಜ್ಯಂ ಜಾಹ್ನವೀಜಲಮ್ ॥೯॥

ತಾವದ್ಗರ್ಜಂತಿ ಪುಷ್ಪಾಣಿ ಮಾಲತ್ಯಾದೀನಿ ಭೋಃ ಸುತ।
ಯಾವನ್ನ ಪ್ರಾಪ್ಯತೇ ಪುಣ್ಯಾ ತುಲಸೀ ಮಮ ವಲ್ಲಭಾ ॥೧೦॥

ಸಕೃದಭ್ಯರ್ಚಯೇದ್ಯೋ ಮಾಂ ಬಿಲ್ವಪತ್ರೇಣ ಮಾನವಃ।
ಮುಕ್ತಿಭಾಗೀ ನಿರಾತಂಕೋ ಮಮ ಪಾರ್ಶ್ವಗತೋ ಭವೇತ್ ॥೧೧॥

ಬಿಲ್ವಪತ್ರಾಚ್ಛಮೀಪತ್ರಾಜ್ಜಾತೀಪತ್ರಾತ್ ಸರೋರುಹಾತ್ ।
ವಲ್ಲಭಂ ತುಲಸೀಪತ್ರಂ ಕೌಸ್ತುಭಾದಧಿಕಂ ಮಮ ॥ ೧೨ ॥

ಅಭಿನ್ನಪತ್ರಾ ತುಲಸೀ ಹೃದ್ಯಾ ಮಂಜರಿಸಂಯುತಾ ।
ಕ್ಷೀರೋದಾರ್ಣವಸಂಭೂತಾ ಪದ್ಮೇವೇಯಂ ಸದಾ ಮಮ ॥ ೧೩ ॥

ಅಕೃಷ್ಣಾऽಪ್ಯಥವಾ ಕೃಷ್ಣಾ ತುಲಸೀ ಮಮ ವಲ್ಲಭಾ ।
ಸಿತಾ ವಾऽಪ್ಯಸಿತಾ ವಾऽಪಿ ದ್ವಾದಶೀ ವಲ್ಲಭಾ ಯಥಾ ॥ ೧೪ ॥

ಗೃಹೀತ್ವಾ ತುಲಸೀಪತ್ರಂ ಭಕ್ತ್ಯಾ ಯೋ ಮಾಂ ಸಮರ್ಚಯೇತ್ ।
ಅರ್ಚಿತಂ ತೇನ ಸಕಲಂ ಸದೇವಾಸುರಮಾನುಷಮ್ ॥ ೧೫ ॥

ತಾವದ್ಗರ್ಜಂತಿ ರತ್ನಾನಿ ಕೌಸ್ತುಭಾದೀನ್ಯನಂತಶಃ ।
ಯಾವನ್ನ ಪ್ರಾಪ್ಯತೇ ಕೃಷ್ಣ ತುಲಸೀ ಕೃಷ್ಣಮಂಜರೀ ॥ ೧೬ ॥

ಕೃಷ್ಣಂ ಕೃಷ್ಣತುಲಸ್ಯಾ ಹಿ ಯೋ ಭಕ್ತ್ಯಾ ಪೂಜಯೇನ್ನರಃ ।
ಸ ಯಾತಿ ಭುವನಂ ಶುಭ್ರಂ ಯತ್ರ ವಿಷ್ಣುಃ ಶ್ರಿಯಾ ಸಹ ॥ ೧೭॥

ಮಮಾರ್ಚನಾರ್ಥಂ ಭಿಕ್ಷೂಣಾಂ ಯಚ್ಛಂತಿ ತುಲಸೀದಲಮ್ ।
ಅನ್ಯೇಷಾಮಪಿ ಭಕ್ತಾನಾಂ ಯಾಂತಿ ತೇ ಪದಮವ್ಯಯಮ್ ॥ ೧೮॥

ತುಲಸೀ ಕೃಷ್ಣಗೌರಾ ಯಾ ತಯಾ ಯೋ ಮಾಂ ಸಮರ್ಚಯೇತ್ ।
ನರೋ ಯಾತಿ ತನುಂ ತ್ಯಕ್ತ್ವಾ ವೈಷ್ಣವೀಂ ಶಾಶ್ವತೀಂ ಗತಿಮ್ ॥ ೧೯ ॥

**॥ ಇತಿ ಶ್ರೀಸ್ಕಂದಮಹಾಪುರಾಣೇ ತುಲಸೀಮಾಹಾತ್ಮ್ಯಮ್ (ಖಂ.೨-ಅ.೭) ॥**

★ ★ ★

# ೬. ತುಲಸೀಮಾಹಾತ್ಮ್ಯಮ್ - ೫

## ಶ್ರೀಗೌರ್ಯುವಾಚ

ದೇವ ದೇವ ಮಹಾದೇವ ಮಹಾಭಾಗವತೋತ್ತಮ ।
ತುಲಸ್ಯಾ ವದ ಮಾಹಾತ್ಮ್ಯಂ ಶ್ರೋತುಮಿಚ್ಛಾಮಿ ವಿಸ್ತರಾತ್ ॥ ೧ ॥

## ಶ್ರೀಸದಾಶಿವ ಉವಾಚ

ಶೃಣು ದೇವಿ ಪ್ರವಕ್ಷ್ಯಾಮಿ ಮಾಹಾತ್ಮ್ಯಂ ತುಲಸೀಭವಮ್ ।
ಯಸ್ಯ ಶ್ರವಣಮಾತ್ರೇಣ ಮುಚ್ಯತೇ ಪಾಪಕೋಟಿಭಿಃ ॥ ೨ ॥

ತುಲಸೀ ಶ್ರೀಭಾಗವತಂ ನಾಮ ಧಾಮ ತಥೈವ ಚ ।
ಸಾಧವಶ್ಚ ಮಹೇಶಾನಿ ವಿಷ್ಣೋರಂಗಂ ನ ಸಂಶಯಃ ॥ ೩ ॥

ಯೇ ತು ಶ್ರೀತುಲಸೀಸೇವಾಂ ಕುರ್ವಂತಿ ಗಿರಿಸಂಭವೇ ।
ನಾನೋಪಹಾರೈಸ್ತೇ ಯಾಂತಿ ತದ್ವಿಷ್ಣೋಃ ಪರಮಂ ಪದಮ್ ॥ ೪ ॥

ಯೇ ಕುರ್ವಂತಿ ಮಹಾಭಾಗೇ ತುಲಸೀನಾಮಕೀರ್ತನಮ್ ।
ತದ್ವನಂ ಯೇ ಚ ಪಶ್ಯಂತಿ ವಿಷ್ಣುನೈವ ಸಮಾಹಿತೇ ॥ ೫ ॥

ಶುಕ್ಲಾ ಕೃಷ್ಣೇತಿ ಭೇದಂ ತು ಯಃ ಕರೋತಿ ವಿಮೂಢಧೀಃ ।
ಸ ಯಾತಿ ನರಕಂ ಘೋರಂ ಸತ್ಯಂ ಸತ್ಯಂ ವರಾನನೇ ॥ ೬ ॥

ಕಂಠಸ್ಥಾಂ ತುಲಸೀಮಾಲಾಂ ಧಾರಯೇದ್ಯಃ ಶುಚಿಃ ಸ ಹಿ ।
ತಸ್ಯ ದರ್ಶನಮಾತ್ರೇಣ ದೂರತೋ ಯಾತಿ ಪಾತಕಮ್ ॥ ೭ ॥

ಯಜ್ಞೋಪವೀತವದ್ಧಾರ್ಯಾ ಸದಾ ತುಲಸಿಮಾಲಿಕಾ ।
ನಾಶೌಚಂ ಧಾರಣೇ ತಸ್ಯಾ ಯತಃ ಸಾ ಬ್ರಹ್ಮರೂಪಿಣೀ ॥ ೮ ॥

ತುಲಸೀಕಾಷ್ಠಸಂಭೂತೇ ಮಾಲೇ ವಿಷ್ಣುಜನಪ್ರಿಯೇ ।
ಬಧ್ನಾಮಿ ತ್ವಾಮಹಂ ಕಂಠೇ ಕುರು ಮಾಂ ಕೃಷ್ಣವಲ್ಲಭಮ್ ।
ಇಮಂ ಮಂತ್ರಂ ಸಮುಚ್ಚಾರ್ಯ ಕಂಠೇ ಬಧ್ನೀತ ಮಾಲಿಕಾಮ್ ॥ ೯ ॥

ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಸಂಪ್ರದಾಯಂ ವಿನಾ ಶಿವೇ ।
ಬಿಭೃಯಾತ್ ಕಂಠಮಾಲಾಂ ಚ ಸಂಪ್ರದಾಯೀ ಜಘನ್ಯಜಃ ॥ ೧೦ ॥

ಯಥಾ ಕಥಂಚಿತ್ ತುಲಸೀಧಾರಣಂ ಮೋಕ್ಷದಂ ಯತಃ ।
ತಸ್ಮಾತ್ ಪ್ರಯತ್ನತೋ ಧಾರ್ಯಾ ತುಲಸೀದಲಮಾಲಿಕಾ ॥ ೧೧ ॥

ತುಲಸೀಕಾಷ್ಠಮಾಲಾಭಿಃ ಸಂಯುತೋ ಮ್ರಿಯತೇ ಯದಿ ।
ಅಪಿ ಪಾಪಸಮಾಯುಕ್ತೋ ನೇಕ್ಷತೇ ಯಮಕಿಂಕರೈಃ ॥ ೧೨ ॥

ತುಲಸೀಧಾರಿಣಂ ವಿಪ್ರಂ ಯಃ ಶ್ರಾದ್ಧೇ ಭೋಜಯೇತ್ ಪ್ರಿಯೇ ।
ಪಿತರಸ್ತಸ್ಯ ತುಷ್ಯಂತಿ ಮನ್ವಂತರಶತಾವಧಿ ॥ ೧೩ ॥

ತುಲಸೀಮಾಲಿಕಾಂ ಧೃತ್ವಾ ಯೋ ಭುಂಕ್ತೇ ಗಿರಿನಂದಿನಿ ।
ಸಿಕ್ಥೇ ಸಿಕ್ಥೇ ಸ ಲಭತೇ ವಾಜಪೇಯಫಲಾಧಿಕಮ್ ॥ ೧೪ ॥

ಸ್ನಾನಕಾಲೇ ತು ಯಸ್ಯಾಂಗೇ ದೃಶ್ಯತೇ ತುಲಸೀ ಶುಭಾ ।
ಗಂಗಾದಿಸರ್ವತೀರ್ಥೇಷು ಸ್ನಾತಂ ತೇನ ನ ಸಂಶಯಃ ॥ ೧೫ ॥

ತುಲಸೀಮಾಲಿಕಾಂ ಧೃತ್ವಾ ಯದ್ಯದ್ದಾನಂ ಸಮಾಚರೇತ್ ।
ತತ್ಪುಣ್ಯಂ ಕೋಟಿಗುಣಿತಂ ಭವೇತ್ ಕೃಷ್ಣಪ್ರಸಾದತಃ ॥ ೧೬ ॥

ಅಂತಕಾಲೇಽಪಿ ಯಸ್ಯಾಂಗಂ ತುಲಸೀಮಾಲಿಕಾ ಸ್ಪೃಶೇತ್ ।
ತಸ್ಯ ದೇಹೋದ್ಭವಂ ಪಾಪಂ ತತ್ಕ್ಷಣಾದೇವ ನಶ್ಯತಿ ॥ ೧೭ ॥

ಸ್ತ್ರಿಯಃ ಶೂದ್ರಾದಯಃ ಪಾಪಾ ಅಂತ್ಯಜಾಃ ಪತಿತಾದಯಃ ।
ಬಧ್ನೀಯುಸ್ತುಲಸೀಂ ಕಂಠೇ ದೀಕ್ಷಿತಾಶ್ಚೇದ್ಭವಂತಿ ಹಿ ॥ ೧೮ ॥

ಶೋಭನಾಂ ತುಲಸೀಂ ಕಾಷ್ಠಮಾಲಿಕಾಂ ಸೂತ್ರಗುಂಫಿತಾಮ್ ।
ನಿವೇದ್ಯ ಹರಯೇ ಕಂಠೇ ಧಾರಯೇದ್ವೈಷ್ಣವೋ ಜನಃ ॥ ೧೯ ॥

ದೀಕ್ಷಾನಂತರಮೀಶಾನಿ ಯೋ ಭುಂಕ್ತೇ ತುಲಸೀಂ ವಿನಾ ।
ತದನ್ನಂ ಸೂಕರಮಲಂ ತಜ್ಜಲಂ ಸುರಯಾ ಸಮಮ್ ॥ ೨೦ ॥

ಪ್ರಾಣಾತ್ಯಯೇಽಪಿ ಸಂಪನ್ನೇ ತುಲಸೀಮಾಲಿಕಾಂ ವಿನಾ ।
ನಾಶ್ನೀಯಾದ್ಯೋ ಮಹೇಶಾನಿ ತಂ ವಿದ್ಯಾದ್ವೈಷ್ಣವೋತ್ತಮಮ್ ॥ ೨೧ ॥

ಬಹುನಾ ಕಿಮಿಹೋಕ್ತೇನ ಶೃಣು ತ್ವಂ ವರವರ್ಣಿನಿ ।
ವಿಡುತ್ಸರ್ಗಾದಿಸಮಯೇ ನ ತ್ಯಾಜ್ಯಾ ಕಂಠಮಾಲಿಕಾ ॥ ೨೨ ॥

ನ ದೇಶಕಾಲನಿಯಮೋ ನ ಸ್ಥಾನನಿಯಮಸ್ತಥಾ ।
ವಿದ್ಯತೇ ಪರ್ವತಸುತೇ ತುಲಸೀಮಣಿಧಾರಣೇ ॥ ೨೩ ॥

ಕಂಠೇ ಶಿರಸಿ ಬಾಹ್ವೋಶ್ಚ ಕರ್ಣಯೋಃ ಕರಯೋಸ್ತಥಾ ।
ಬಿಭೃಯಾತ್ ತುಲಸೀಂ ಯಸ್ತು ಸ ಜ್ಞೇಯೋ ವಿಷ್ಣುನಾ ಸಮಃ ॥ ೨೪ ॥

ನ ಧಾರಯಂತಿ ಯೇ ದೇವಿ ತುಲಸೀಕಾಷ್ಠಮಾಲಿಕಾಮ್ ।
ಹೇತುವಾದರತಾಃ ಪಾಪಾಃ ಪತಂತಿ ನರಕೇಽಶುಚೌ ॥ ೨೫ ॥

ತುಲಸೀಕಾಷ್ಠಸಂಭೂತಾಂ ಕಂಠಸ್ಥಾಂ ನ ವಹೇದ್ಯದಿ ।
ಸರ್ವದಾ ಪರ್ವತಸುತೇ ಸ ಕಥಂ ವೈಷ್ಣವೋ ಭವೇತ್ ॥ ೨೬ ॥

ಕರ್ಮವಾದರತಾ ಯೇ ಚ ಯೇ ಚ ದುಃಸಂಗಸಂಗಿನಃ ।
ತೇ ನಿಂದಂತಿ ವರಾರೋಹೇ ತುಲಸೀಂ ಕೃಷ್ಣವಲ್ಲಭಾಮ್ ॥ ೨೭ ॥

ಕುಲೀನಾಶ್ಚ ದ್ವಿಜಾ ಧೀರಾ ವೇದವೇದಾಂಗಸಂಯುತಾಃ ।
ತುಲಸೀನಿಂದನಾದ್ಯಾಂತಿ ನರಕಾನತಿದಾರುಣಾನ್ ॥ ೨೮ ॥

ತುಲಸ್ಯಾರೋಪಣಾತ್ ಸೇಕಾತ್ ಪಾತಕಾನಿ ಮಹಾಂತ್ಯಪಿ।
ಸಂಕ್ಷಯಂ ಯಾಂತಿ ದೇವೇಶಿ ತಮಃ ಸೂರ್ಯೋದಯೇ ಯಥಾ ॥ ೨೯ ॥

ಯೇ ಕುರ್ವಂತಿ ತುಲಸ್ಯಾಶ್ಚ ವಿವಾಹಂ ಸಾಧುಭಿಃ ಸಹ।
ಸತ್ಯಂ ಸತ್ಯಂ ಮಹೇಶಾನಿ ತಸ್ಯ ಪುಣ್ಯಮನಂತಕಮ್ ॥ ೩೦ ॥

ತುಲಸೀಕಾಷ್ಠಸಂಭೂತಂ ಚಂದನಂ ಹರಿವಲ್ಲಭಮ್।
ಯೋ ದದ್ಯಾದ್ವಿಷ್ಣವೇ ಮರ್ತ್ಯಃ ಸ ಯಾತಿ ಹರಿಮಂದಿರಮ್ ॥ ೩೧ ॥

ತುಲಸೀಕಾನನಂ ದೃಷ್ಟ್ವಾ ಯಸ್ತು ಪ್ರಾಣಾನ್ ವಿಮುಂಚತಿ।
ಅಪಿ ಪಾಪಸಮಾಯುಕ್ತಃ ಸ ವೈ ಯಾತಿ ಹರೇಃ ಪದಮ್ ॥ ೩೨ ॥

ತುಲಸೀಪತ್ರಸಹಿತಂ ಜಲಂ ಪಿಬತಿ ಯೋ ನರಃ।
ಸರ್ವಪಾಪವಿನಿರ್ಮುಕ್ತೋ ಮುಕ್ತೋ ಭವತಿ ಭಾಮಿನಿ ॥ ೩೩ ॥

ಇತಿ ತೇ ಕಥಿತಂ ಗೌರಿ ಮಾಹಾತ್ಮ್ಯಂ ತುಲಸೀಭವಮ್।
ವಿಸ್ತಾರಾತ್ ಕಥಯೇತ್ ಕೋ ವಾ ಅಪಿ ವರ್ಷಶತಾಯುತೈಃ ॥ ೩೪ ॥

॥ ಇತಿ ಶ್ರೀಗೌರೀತಂತ್ರೇ ಸದಾಶಿವಗೌರೀಸಂವಾದೇ ಶ್ರೀತುಲಸೀಮಾಹಾತ್ಮ್ಯಮ್ ॥

★ ★ ★

## ೭. ತುಲಸೀಮಾಹಾತ್ಮ್ಯಮ್ - ೬

### ವಾಣ್ಯುವಾಚ

ತುಲಸೀ ರೋಪಿತಾ ಯೇನ ಗೃಹಸ್ಥೇನ ಮಹಾಫಲಾ।
ಗೃಹೇ ತಸ್ಯ ನ ದಾರಿದ್ರ್ಯಂ ಜಾಯತೇ ನಾತ್ರ ಸಂಶಯಃ ॥ ೧ ॥

ತುಲಸ್ಯಾ ದರ್ಶನಾದೇವ ಪಾಪರಾಶಿರ್ನಿವರ್ತತೇ।
ಶ್ರಿಯೋಽಮೃತಕಣೋತ್ಪನ್ನಾ ತುಲಸೀ ಹರಿವಲ್ಲಭಾ ॥ ೨ ॥

ಪಿಬಂತ್ಯಾ ರುಚಿರಂ ಪಾನಂ ಪ್ರಾಣಿನಾಂ ಪಾಪಹಾರಿಣೀ।
ಯಸ್ಯಾ ರೂಪೇ ವಸೇಲ್ಲಕ್ಷ್ಮೀಃ ಸ್ಕಂಧೇ ಸಾಗರಸಂಭವಾ ॥ ೩ ॥

ಪತ್ರೇಷು ಸತತಂ ಶ್ರೀಶ್ಚ ಶಾಖಾಸು ಕಮಲಾ ಸ್ವಯಮ್।
ಇಂದಿರಾ ಪುಷ್ಪಗಾ ನಿತ್ಯಂ ಫಲೇ ಕ್ಷೀರಾಬ್ಧಿಸಂಭವಾ ॥ ೪ ॥

ತುಲಸೀ ಶುಕ್ಲಕಾಷ್ಠೇಷು ಯಾ ರೂಪಾ ವಿಶ್ವವ್ಯಾಪಿನೀ।
ಮಜ್ಜಾಯಾಂ ಪದ್ಮವಾಸಾ ಚ ತ್ವಚಾಸು ಚ ಹರಿಪ್ರಿಯಾ ॥ ೫ ॥

ಸ್ನಾನಕಾಲೇ ತು ಯಸ್ಯಾಂಗೇ ದೃಶ್ಯತೇ ತುಲಸೀ ಶುಭಾ ।
ಗಂಗಾದಿಸರ್ವತೀರ್ಥೇಷು ಸ್ನಾತಂ ತೇನ ನ ಸಂಶಯಃ ॥ ೧೫ ॥

ತುಲಸೀಮಾಲಿಕಾಂ ಧೃತ್ವಾ ಯದ್ಯದ್ದಾನಂ ಸಮಾಚರೇತ್ ।
ತತ್ಪುಣ್ಯಂ ಕೋಟಿಗುಣಿತಂ ಭವೇತ್ ಕೃಷ್ಣಪ್ರಸಾದತಃ ॥ ೧೬ ॥

ಅಂತಕಾಲೇऽಪಿ ಯಸ್ಯಾಂಗಂ ತುಲಸೀಮಾಲಿಕಾ ಸ್ಪೃಶೇತ್ ।
ತಸ್ಯ ದೇಹೋದ್ಭವಂ ಪಾಪಂ ತತ್ಕ್ಷಣಾದೇವ ನಶ್ಯತಿ ॥ ೧೭ ॥

ಸ್ತ್ರಿಯಃ ಶೂದ್ರಾದಯಃ ಪಾಪಾ ಅಂತ್ಯಜಾಃ ಪತಿತಾದಯಃ ।
ಬಧ್ನೀಯುಸ್ತುಲಸೀಂ ಕಂಠೇ ದೀಕ್ಷಿತಾಶ್ಚೇದ್ಭವಂತಿ ಹಿ ॥ ೧೮ ॥

ಶೋಭನಾಂ ತುಲಸೀಂ ಕಾಷ್ಠಮಾಲಿಕಾಂ ಸೂತ್ರಗುಂಫಿತಾಮ್ ।
ನಿವೇದ್ಯ ಹರಯೇ ಕಂಠೇ ಧಾರಯೇದ್ವೈಷ್ಣವೋ ಜನಃ ॥ ೧೯ ॥

ದೀಕ್ಷಾನಂತರಮೀಶಾನಿ ಯೋ ಭುಂಕ್ತೇ ತುಲಸೀಂ ವಿನಾ ।
ತದನ್ನಂ ಸೂಕರಮಲಂ ತಜ್ಜಲಂ ಸುರಯಾ ಸಮಮ್ ॥ ೨೦ ॥

ಪ್ರಾಣಾತ್ಯಯೇऽಪಿ ಸಂಪನ್ನೇ ತುಲಸೀಮಾಲಿಕಾಂ ವಿನಾ ।
ನಾಶ್ನೀಯಾದ್ಯೋ ಮಹೇಶಾನಿ ತಂ ವಿದ್ಯಾದ್ವೈಷ್ಣವೋತ್ತಮಮ್ ॥ ೨೧ ॥

ಬಹುನಾ ಕಿಮಿಹೋಕ್ತೇನ ಶೃಣು ತ್ವಂ ವರವರ್ಣಿನಿ ।
ವಿಡುತ್ಸರ್ಗಾದಿಸಮಯೇ ನ ತ್ಯಾಜ್ಯಾ ಕಂಠಮಾಲಿಕಾ ॥ ೨೨ ॥

ನ ದೇಶಕಾಲನಿಯಮೋ ನ ಸ್ಥಾನನಿಯಮಸ್ತಥಾ ।
ವಿದ್ಯತೇ ಪರ್ವತಸುತೇ ತುಲಸೀಮಣಿಧಾರಣೇ ॥ ೨೩ ॥

ಕಂಠೇ ಶಿರಸಿ ಬಾಹ್ವೋಶ್ಚ ಕರ್ಣಯೋಃ ಕರಯೋಸ್ತಥಾ ।
ಬಿಭೃಯಾತ್ ತುಲಸೀಂ ಯಸ್ತು ಸ ಜ್ಞೇಯೋ ವಿಷ್ಣುನಾ ಸಮಃ ॥ ೨೪ ॥

ನ ಧಾರಯಂತಿ ಯೇ ದೇವಿ ತುಲಸೀಕಾಷ್ಠಮಾಲಿಕಾಮ್ ।
ಹೇತುವಾದರತಾಃ ಪಾಪಾಃ ಪತಂತಿ ನರಕೇऽಶುಚೌ ॥ ೨೫ ॥

ತುಲಸೀಕಾಷ್ಠಸಂಭೂತಾಂ ಕಂಠಸ್ಥಾಂ ನ ವಹೇದ್ಯದಿ ।
ಸರ್ವದಾ ಪರ್ವತಸುತೇ ಸ ಕಥಂ ವೈಷ್ಣವೋ ಭವೇತ್ ॥ ೨೬ ॥

ಕರ್ಮವಾದರತಾ ಯೇ ಚ ಯೇ ಚ ದುಃಸಂಗಸಂಗಿನಃ ।
ತೇ ನಿಂದಂತಿ ವರಾರೋಹೇ ತುಲಸೀಂ ಕೃಷ್ಣವಲ್ಲಭಾಮ್ ॥ ೨೭ ॥

ಕುಲೀನಾಶ್ಚ ದ್ವಿಜಾ ಧೀರಾ ವೇದವೇದಾಂಗಸಂಯುತಾಃ ।
ತುಲಸೀನಿಂದನಾದ್ಯಾಂತಿ ನರಕಾನತಿದಾರುಣಾನ್ ॥ ೨೮ ॥

ತುಲಸ್ಯಾರೋಪಣಾತ್ ಸೇಕಾತ್ ಪಾತಕಾನಿ ಮಹಾಂತ್ಯಪಿ ।
ಸಂಕ್ಷಯಂ ಯಾಂತಿ ದೇವೇಶಿ ತಮಃ ಸೂರ್ಯೋದಯೇ ಯಥಾ ॥ ೨೯ ॥

ಯೇ ಕುರ್ವಂತಿ ತುಲಸ್ಯಾಶ್ಚ ವಿವಾಹಂ ಸಾಧುಭಿಃ ಸಹ ।
ಸತ್ಯಂ ಸತ್ಯಂ ಮಹೇಶಾನಿ ತಸ್ಯ ಪುಣ್ಯಮನಂತಕಮ್ ॥ ೩೦ ॥

ತುಲಸೀಕಾಷ್ಠಸಂಭೂತಂ ಚಂದನಂ ಹರಿವಲ್ಲಭಮ್ ।
ಯೋ ದದ್ಯಾದ್ವಿಷ್ಣವೇ ಮರ್ತ್ಯಃ ಸ ಯಾತಿ ಹರಿಮಂದಿರಮ್ ॥ ೩೧ ॥

ತುಲಸೀಕಾನನಂ ದೃಷ್ಟ್ವಾ ಯಸ್ತು ಪ್ರಾಣಾನ್ ವಿಮುಂಚತಿ ।
ಅಪಿ ಪಾಪಸಮಾಯುಕ್ತಃ ಸ ವೈ ಯಾತಿ ಹರೇಃ ಪದಮ್ ॥ ೩೨ ॥

ತುಲಸೀಪತ್ರಸಹಿತಂ ಜಲಂ ಪಿಬತಿ ಯೋ ನರಃ ।
ಸರ್ವಪಾಪವಿನಿರ್ಮುಕ್ತೋ ಮುಕ್ತೋ ಭವತಿ ಭಾಮಿನಿ ॥ ೩೩ ॥

ಇತಿ ತೇ ಕಥಿತಂ ಗೌರಿ ಮಾಹಾತ್ಮ್ಯಂ ತುಲಸೀಭವಮ್ ।
ವಿಸ್ತಾರಾತ್ ಕಥಯೇತ್ ಕೋ ವಾ ಅಪಿ ವರ್ಷಶತಾಯುತೈಃ ॥ ೩೪ ॥

॥ ಇತಿ ಶ್ರೀಗೌರೀತಂತ್ರೇ ಸದಾಶಿವಗೌರೀಸಂವಾದೇ ಶ್ರೀತುಲಸೀಮಾಹಾತ್ಮ್ಯಮ್ ॥

★ ★ ★

## ೭. ತುಲಸೀಮಾಹಾತ್ಮ್ಯಮ್ - ೬

### ವಾಣ್ಯುವಾಚ

ತುಲಸೀ ರೋಪಿತಾ ಯೇನ ಗೃಹಸ್ಥೇನ ಮಹಾಫಲಾ ।
ಗೃಹೇ ತಸ್ಯ ನ ದಾರಿದ್ರ್ಯಂ ಜಾಯತೇ ನಾತ್ರ ಸಂಶಯಃ ॥ ೧ ॥

ತುಲಸ್ಯಾ ದರ್ಶನಾದೇವ ಪಾಪರಾಶಿರ್ನಿವರ್ತತೇ ।
ಶ್ರಿಯೋಽಮೃತಕಣೋತ್ಪನ್ನಾ ತುಲಸೀ ಹರಿವಲ್ಲಭಾ ॥ ೨ ॥

ಪಿಬಂತ್ಯಾ ರುಚಿರಂ ಪಾನಂ ಪ್ರಾಣಿನಾಂ ಪಾಪಹಾರಿಣೇ ।
ಯಸ್ಯಾ ರೂಪೇ ವಸೇಲ್ಲಕ್ಷ್ಮೀಃ ಸ್ಕಂಧೇ ಸಾಗರಸಂಭವಾ ॥ ೩ ॥

ಪತ್ರೇಷು ಸತತಂ ಶ್ರೀಶ್ಚ ಶಾಖಾಸು ಕಮಲಾ ಸ್ವಯಮ್ ।
ಇಂದಿರಾ ಪುಷ್ಪಗಾ ನಿತ್ಯಂ ಫಲೇ ಕ್ಷೀರಾಬ್ಧಿಸಂಭವಾ ॥ ೪ ॥

ತುಲಸೀ ಶುಕ್ಲಕಾಷ್ಠೇಷು ಯಾ ರೂಪಾ ವಿಶ್ವವ್ಯಾಪಿನೀ ।
ಮಜ್ಜಾಯಾಂ ಪದ್ಮವಾಸಾ ಚ ತ್ವಚಾಸು ಚ ಹರಿಪ್ರಿಯಾ ॥ ೫ ॥

ಸರ್ವರೂಪಾ ಚ ಸರ್ವೇಶಾ ಪರಮಾನಂದದಾಯಿನೀ ।
ತುಲಸೀಪ್ರಾಶಕೋ ಮರ್ತ್ಯೋ ಯಮಲೋಕಂ ನ ಗಚ್ಛತಿ ॥ ೬ ॥

ಶಿರಸ್ಥಾ ತುಲಸೀ ಯಸ್ಯ ನ ಯಾಮ್ಯೈರನುಭೂಯತೇ ।
ಮುಖಸ್ಥಾ ತುಲಸೀ ಯಸ್ಯ ನಿರ್ವಾಣಪದದಾಯಿನೀ ॥ ೭ ॥

ಹಸ್ತಸ್ಥಾ ತುಲಸೀ ಯಸ್ಯ ಸ ತಾಪತ್ರಯವರ್ಜಿತಃ ।
ತುಲಸೀ ಹೃದಯಸ್ಥಾಚ ಪ್ರಾಣಿನಾಂ ಸರ್ವಕಾಮದಾ ॥ ೮ ॥

ಸ್ಕಂಧಸ್ಥಾ ತುಲಸೀ ಯಸ್ಯ ಸ ಪಾಪೈರ್ನ ಚ ಲಿಪ್ಯತೇ ।
ಕಂಠಗಾ ತುಲಸೀ ಯಸ್ಯ ಜೀವನ್ಮುಕ್ತಃ ಸದಾ ಹಿ ಸಃ ॥ ೯ ॥

ತುಲಸೀಸಂಭವಂ ಪತ್ರಂ ಸದಾ ವಹತಿ ಯೋ ನರಃ ।
ಮನಸಾ ಚಿಂತಿತಾಂ ಸಿದ್ಧಿಂ ಸಂಪ್ರಾಪ್ನೋತಿ ನ ಸಂಶಯಃ ॥ ೧೦ ॥

ತುಲಸೀಂ ಸರ್ವಕಾರ್ಯಾರ್ಥಸಾಧಿನೀಂ ದುಷ್ಟವಾರಿಣೀಮ್ ।
ಯೋ ನರಃ ಪ್ರತ್ಯಹಂ ಸಿಂಚೇನ್ನ ಸ ಯಾತಿ ಯಮಾಲಯಮ್ ॥ ೧೧ ॥

ಚಾತುರ್ಮಾಸ್ಯೇ ವಿಶೇಷೇಣ ವಂದಿತಾಽಪಿ ವಿಮುಕ್ತಿದಾ ।
ನಾರಾಯಣಂ ಜಲಗತಂ ಜ್ಞಾತ್ವಾ ವೃಕ್ಷಗತಂ ತಥಾ ॥ ೧೨ ॥

ಪ್ರಾಣಿನಾಂ ಕೃಪಯಾ ಲಕ್ಷ್ಮೀಸ್ತುಲಸೀವೃಕ್ಷಮಾಶ್ರಿತಾ ।
ಚಾತುರ್ಮಾಸ್ಯೇ ಸಮಾಯಾತೇ ತುಲಸೀ ಸೇವಿತಾ ಯದಿ ॥ ೧೩ ॥

ತೇಷಾಂ ಪಾಪಸಹಸ್ರಾಣಿ ಯಾಂತಿ ನಿತ್ಯಂ ಸಹಸ್ರಧಾ ।
ಗೋವಿಂದಸ್ಮರಣಂ ನಿತ್ಯಂ ತುಲಸೀವನಸೇವನಮ್ ॥ ೧೪ ॥

ತುಲಸೀಸೇಚನಂ ದುಗ್ಧೈಶ್ಚಾತುರ್ಮಾಸ್ಯೇಽತಿದುರ್ಲಭಮ್ ।
ತುಲಸೀಂ ವರ್ಧಯೇದ್ಯಸ್ತು ಮಾನವೋ ಯದಿ ಶ್ರದ್ಧಯಾ ॥ ೧೫ ॥

ಆಲವಾಲಾಂಬುದಾನೈಶ್ಚ ಪಾವಿತಂ ಸಕಲಂ ಕುಲಮ್ ।
ಯಥಾ ಶ್ರೀಸ್ತುಲಸೀಸಂಸ್ಥಾ ನಿತ್ಯಮೇವ ಹಿ ವರ್ಧತೇ ॥ ೧೬ ॥

ತಥಾ ತಥಾ ಗೃಹಸ್ಥಸ್ಯ ಕಾಮವೃದ್ಧಿಃ ಪ್ರಜಾಯತೇ ।
ಬ್ರಹ್ಮಚಾರೀ ಗೃಹಸ್ಥಶ್ಚ ವಾನಪ್ರಸ್ಥೋ ಯತಿಸ್ತಥಾ ॥ ೧೭ ॥

ತಥಾ ಪ್ರಕೃತಯಃ ಸರ್ವಾಸ್ತುಲಸೀಸೇವನೇ ರತಾಃ ।
ಶ್ರದ್ಧಯಾ ಯದಿ ಜಾಯಂತೇ ನ ತಾಸಾಂ ದುಃಖದೋ ಹರಿಃ ॥ ೧೮ ॥

ಏಕೋ ಹರಿಃ ಸಕಲವೃಕ್ಷಗತೋ ವಿಭಾತಿ
ನಾನಾರಸೈಸ್ತು ಪರಿಭಾವಿತಮೂರ್ತಿರೇವ।
ವೃಕ್ಷಾಧಿವಾಸಮಗಮತ್ ಕಮಲಾ ಚ ದೇವೀ
ದುಃಖಾದಿನಾಶನಕರೀ ಸತತಂ ಸ್ಮೃತಾಽಪಿ ॥ ೧೯ ॥

॥ ಇತಿ ಶ್ರೀಸ್ಕಂದಮಹಾಪುರಾಣೇ ತುಲಸೀಮಾಹಾತ್ಮ್ಯವರ್ಣನಮ್ (ಖಂ.೬.;ಅ.೨೪೯) ॥

★ ★ ★

## ೮. ತುಲಸೀಮಾಹಾತ್ಮ್ಯಮ್ - ೭

### ಸೂತ ಉವಾಚ

ಶ್ರೃಣ್ವಂತು ಮುನಯಃ ಸರ್ವೇ ಮಾಹಾತ್ಮ್ಯಂ ತುಲಸೀಗತಮ್।
ಯಸ್ಯಾಃ ಕೀರ್ತನಮಾತ್ರೇಣ ಪ್ರೀತೋ ಭವತಿ ಕೇಶವಃ ॥ ೧ ॥

ಸಿತಾ ವಾಽಪ್ಯಸಿತಾ ವಾಽಪಿ ತುಲಸೀ ವಿಷ್ಣುವಲ್ಲಭಾ।
ಲಲಾಟೇ ಧಾರಯೇದ್ಯೋ ವೈ ತುಲಸೀಮೂಲಮೃತ್ತಿಕಾಮ್ ॥ ೨ ॥

ದಶಾಶ್ವಮೇಧಜಂ ಪುಣ್ಯಂ ಸಂಪ್ರಾಪ್ನೋತಿ ನ ಸಂಶಯಃ।
ತುಲಸೀಭಕ್ಷಣಂ ಚೈವ ಚಾಂದ್ರಾಯಣಶತಾಧಿಕಮ್ ॥ ೩ ॥

ತಸ್ಮಾತ್ ಕಾಯವಿಶುದ್ಧ್ಯರ್ಥಂ ಭಕ್ಷಯೇತ್ ತುಲಸೀಂ ಬುಧಃ।
ಧನ್ಯಾಸ್ತೇ ಮಾನವಾ ಲೋಕೇ ಯೇಷಾಂ ಸಂಪತ್ಸ್ಯತೇ ಕಲೌ ॥ ೪ ॥

ಶಾಲಗ್ರಾಮಶಿಲಾತೀರ್ಥಂ ತುಲಸೀದಲಮಿಶ್ರಿತಮ್।
ತುಲಸೀಂ ಯೇ ವಿಚಿನ್ವಂತಿ ಧನ್ಯಾಸ್ತೇ ಕರಪಲ್ಲವಾಃ ॥ ೫ ॥

ಕೇಶವಾರಾಧನಾರ್ಥಂ ತು ರೋಪಯಂತಿ ಕಲೌ ನರಾಃ।
ತೇ ಪುಣ್ಯದೇಹಿನೋ ಲೋಕೇ ಪ್ರಯಾಂತ್ಯಂತೇ ಹರೇಃ ಪದಮ್ ॥ ೬ ॥

ತುಲಸೀವನಸಂಪೃಕ್ತರಜಸಾಽಽಶು ವಿಶುದ್ಧ್ಯತಿ।
ಕಿಂ ಕರಿಷ್ಯತಿ ಸಂಕ್ರುದ್ಧೋ ಯಮೋಽಪಿ ಸಹ ಕಿಂಕರೈಃ ॥ ೭ ॥

ತುಲಸೀದಲೇನ ದೇವೇಶಂ ಪೂಜಯಂತೀಹ ಯೇ ನರಾಃ।
ಗಂಗಾಸ್ನಾನಫಲಂ ತೇಷಾಂ ನಿತ್ಯಂ ಭವತಿ ಚಾಕ್ಷಯಮ್ ॥ ೮ ॥

ಮಾತೃಶುಶ್ರೂಷಣರತಾಃ ಪಿತೃಶುಶ್ರೂಷಣೇ ರತಾಃ।
ತುಲಸೀಸೇವನಪರಾಸ್ತೇ ಯಾಂತಿ ಪರಮಂ ಪದಮ್ ॥ ೯ ॥

ದುರ್ಲಭಾ ಪತಿಶುಶ್ರೂಷಾ ದುರ್ಲಭಂ ವಿಷ್ಣುಪೂಜನಮ್ ।
ದುರ್ಲಭಾ ತುಲಸೀಸೇವಾ ದುರ್ಲಭಾ ಪ್ರಾಣಿನಾಂ ದಯಾ ।
ದುರ್ಲಭಂ ರಾಮಚರಿತಂ ದುರ್ಲಭಾ ಸತ್ಕಥಾರತಿಃ ॥ ೧೦ ॥

ಸ್ನಾನೇ ದಾನೇ ಜಪೇ ಹೋಮೇ ಪ್ರಾಶನೇ ಕೇಶವಾರ್ಚನೇ ।
ತುಲಸೀ ಹರತೇ ಪಾಪಂ ಧೃತಾ ಸಂಕೀರ್ತಿತಾಽಪಿ ವಾ ॥ ೧೧ ॥

ತುಲಸ್ಯಮೃತಸಂಭೂತೇ ಸದಾ ತ್ವಂ ಕೇಶವಪ್ರಿಯೇ ।
ಹರೇರಾರಾಧನಾರ್ಥಂ ತು ಚಿನೋಮಿ ತ್ವಾಂ ಪ್ರಸೀದ ಮೇ ॥ ೧೨ ॥

ಮೋಕ್ಷೈಕಹೇತೋರ್ಧರಣೀಪ್ರಸೂತೇ ವಿಷ್ಣೋಃ ಸಮಸ್ತಸ್ಯ ಭಯೇ ಪ್ರಸೂತೇ ।
ಆರಾಧನಾರ್ಥಂ ಸುದಲಂ ಭವತ್ಯಾ ಲುನಾಮಿ ನಿತ್ಯಂ ತುಲಸಿ ಕ್ಷಮಸ್ವ ॥ ೧೩ ॥

ಮಂತ್ರೇಣಾನೇನ ಸಂಗೃಹ್ಯ ತುಲಸೀದಲಮುತ್ತಮಮ್ ।
ವಾಸುದೇವಂ ಸುಸಂಪೂಜ್ಯ ಲಭತೇ ವೈಷ್ಣವಂ ಪದಮ್ ॥ ೧೪ ॥

ಸಾವಿತ್ರೀ ಚ ಸ್ವರಾ ದೇವೀ ಗಾಯತ್ರೀ ಸುರಸತ್ತಮಾಃ ।
ಮುನಯಃ ಸಿದ್ಧಗಂಧರ್ವಾಃ ಪಾತಾಲೇ ಪನ್ನಗೇಶ್ವರಾಃ ॥ ೧೫ ॥

ನ ತೇ ಪ್ರಭಾವಂ ಜಾನಂತಿ ದೇವೀಂ ಪದ್ಮಾಂಬಿಕಾಮೃತೇ ।
ಗುಣಾನಾಂ ಪರಿಮಾಣಂ ತು ಕಲ್ಪಕೋಟಿಶತೈರಪಿ ।
ನ ಶಕ್ಯೇತ ಪರಿಜ್ಞಾತುಂ ದೇವೇಶಿ ಹರಿವಲ್ಲಭೇ ॥ ೧೬ ॥

ತ್ವದಂಗಸಂಭವೈಃ ಪತ್ರೈಃ ಪೂಜಯಾಮಿ ಯಥಾ ಹರಿಮ್ ।
ತಥಾ ಕುರು ವಿಚಿತ್ರಾಂಗಿ ಕಲೌ ಮಲವಿನಾಶಿನಿ ॥ ೧೭ ॥

ರೋಪಿತಾ ಗೋಮತೀತೀರೇ ಸ್ವಯಂ ಕೃಷ್ಣೇನ ಪಾಲಿತಾ ।
ಜಗದ್ಧಿತಾಯ ತುಲಸೀ ಗೋಪೀನಾಂ ಹಿತಹೇತವೇ ॥ ೧೮ ॥

ಬೃಂದಾವನೇ ವಿಚರತಾ ಸೇವಿತಾ ವಿಷ್ಣುನಾ ಸ್ವಯಮ್ ।
ಗೋಕುಲಸ್ಯ ವಿವೃದ್ಧ್ಯರ್ಥಂ ಕಂಸಸ್ಯ ನಿಧನಾಯ ಚ ॥ ೧೯ ॥

ವಸಿಷ್ಠವಚನಾತ್ ಪೂರ್ವಂ ರಾಮೇಣ ಸರಯೂತಟೇ ।
ರಾಕ್ಷಸಾನಾಂ ವಧಾರ್ಥಾಯ ರೋಪಿತಾ ತ್ವಂ ಜಗತ್ಪ್ರಿಯೇ ॥ ೨೦ ॥

ಪ್ರಯಾಗೇ ವಸತೋ ನಿತ್ಯಂ ಪ್ರಯಾಣೇ ಮಾಧವಸ್ಯ ಚ ।
ಪಾಲಿತಾ ತ್ವಂ ಶ್ರಿಯಾ ದೇವ್ಯಾ ಗಂಗಾಜಲಸಮೀಪತಃ ॥ ೨೧ ॥

ಸರ್ವಾಭಿರ್ದೇವಪತ್ನೀಭಿಃ ಕಿನ್ನರೀಭಿಶ್ಚ ನಂದನೇ।
ಸ್ವರ್ಗೇಽಪಿ ಮಂಗಲಾರ್ಥಾಯ ರೋಪಿತಾ ತ್ವಂ ಹರಿಪ್ರಿಯೇ ॥ ೨೨ ॥

ಧರ್ಮಾರಣ್ಯೇ ಗಯಾಯಾಂ ತು ರೋಪಿತಾ ಪಿತೃಭಿಃ ಸ್ವಯಮ್।
ರೋಪಿತಾ ರಾಮದೇವೇನ ಲಕ್ಷ್ಮಣೇನ ಚ ಸೇವಿತಾ।
ಸೀತಯಾ ಪಾಲಿತಾ ಭಕ್ತ್ಯಾದೇವಿ ತ್ವಂ ದಂಡಕಾವನೇ ॥ ೨೩ ॥

ತ್ರೈಲೋಕ್ಯಪಾವನೀ ಗಂಗಾ ಯಥಾ ಶಾಸ್ತ್ರೇಷು ಗೀಯತೇ।
ತಥೈವ ತುಲಸೀ ದೇವೀ ಗೀಯತೇ ಸಚರಾಚರೇ ॥ ೨೪ ॥

ಋಷ್ಯಮೂಕೇ ನಿವಸತಾ ಫಣಿರಾಜೇನ ಸೇವಿತಾ।
ತುಲಸೀ ವಾಲಿನಾಶಾಯ ತಾರಕಾಸಂಗಹೇತವೇ ॥ ೨೫ ॥

ಪ್ರಣಮ್ಯ ತುಲಸೀಂ ದೇವೀಂ ಉತ್ಪ್ಲುತ್ಯ ಸರಿತಾಂ ಪತಿಮ್।
ಕೃತಕಾರ್ಯಃ ಪ್ರಹೃಷ್ಟಃ ಸನ್ ಹನುಮಾನ್ ಪುನರಾಗತಃ ॥ ೨೬ ॥

ತುಲಸೀಕಾನನಂ ದೃಷ್ಟ್ವಾ ವಿಮುಖೋ ಯಾತಿ ಪಾಪಕೃತ್।
ಸರ್ವಥಾ ಮುನಿಶಾರ್ದೂಲೋ ಬ್ರಹ್ಮಹಾ ಸ ನಿಗದ್ಯತೇ ॥ ೨೭ ॥

ತುಲಸೀಪತ್ರಸಮ್ಮಿಶ್ರಂ ಯಸ್ತೋಯಂ ಶಿರಸಾ ವಹೇತ್।
ಸ ಗಂಗಾಸ್ನಾನಜಂ ಪುಣ್ಯಂ ಶತಧೇನುಫಲಂ ಲಭೇತ್ ॥ ೨೮ ॥

ತುಲಸೀಗ್ರಹಣಂ ಶಸ್ತಂ ವಿಷ್ಣೋರರ್ಚನಹೇತವೇ।
ಆಸುರೀಂ ಯೋನಿಮಾಪ್ನೋತಿ ದ್ವಾದಶ್ಯಾಂ ಗ್ರಹಣೇನ ತು ॥ ೨೯ ॥

ಉತ್ತಮಂ ಸ್ವಾರ್ಜಿತಂ ಪುಣ್ಯಂ ಮಧ್ಯಮಂ ವನ್ಯಮುಚ್ಯತೇ।
ಅಧಮಂ ಕ್ರಯವಿಕ್ರೀತಂ ಪಾರಕ್ಯಂ ತ್ವಧಮಾಧಮಮ್ ॥ ೩೦ ॥

ದೇವಾಲಯೇ ನಿಯುಕ್ತಂ ತು ಹಂತಿ ಪುಣ್ಯಂ ಪುರಾಕೃತಮ್।
ತಸ್ಮಾತ್ಸರ್ವಪ್ರಯತ್ನೇನ ದೇವೋದ್ಯಾನಂ ವಿವರ್ಜಯೇತ್ ॥ ೩೧ ॥

ಹಸ್ತಾನೀತಂ ಪಟಾನೀತಂ ಸ್ವಯಂ ಪತಿತಮೇವ ಚ।
ದೇವಾರಾಮೋದ್ಭವಂ ಪುಷ್ಪಂ ಗೃಹದೇವಾಯ ನಾಹರೇತ್ ॥ ೩೨ ॥

ತುಲಸೀಕಾನನೇ ಯಸ್ತು ಶ್ರಾದ್ಧಂ ತು ಕುರುತೇ ನರಃ।
ಗಯಾಶ್ರಾದ್ಧಂ ಕೃತಂ ತೇನ ವಿಷ್ಣುನಾ ಭಾಷಿತಂ ಪುರಾ ॥ ೩೩ ॥

ಯತ್ಪಾಪಂ ಯೌವನೇ ಬಾಲ್ಯೇ ಕೌಮಾರೇ ವಾರ್ಧಕ್ಯೇ ಕೃತಮ್ ।
ತತ್ಸರ್ವಂ ವಿಲಯಂ ಯಾತಿ ತುಲಸೀಲಕ್ಷಪೂಜನಾತ್ ।
ಪ್ರೀತಿಮಾಯಾತಿ ದೇವೇಶಸ್ತುಷ್ಟೋ ಲಕ್ಷ್ಮೀಂ ಪ್ರಯಚ್ಛತಿ ॥ ೩೪ ॥

ಕುರುತೇ ಶತ್ರುನಾಶಂ ಚ ಸುಖಂ ವಿದ್ಯಾಂ ಪ್ರಯಚ್ಛತಿ ।
ತುಲಸೀಸ್ತೋತ್ರಸಂತುಷ್ಟಸ್ತ್ವಂತೇ ಮೋಕ್ಷಂ ಪ್ರಯಚ್ಛತಿ ॥ ೩೫ ॥

ಶುಷ್ಕಂ ಪರ್ಯುಷಿತಂ ವಾಽಪಿ ಕಾಷ್ಠಂ ವಾ ತುಲಸೀದಲಮ್ ।
ಅರ್ಚನೇ ವಾಸುದೇವಸ್ಯ ಶುದ್ಧಂ ಭವತಿ ಸರ್ವದಾ ॥ ೩೬ ॥

ತುಲಸೀಗ್ರಹಣಂ ಕೃತ್ವಾ ಯತ್ರ ಯತ್ರ ವ್ರಜಂತಿ ಹಿ ।
ತತ್ರ ತತ್ರ ಹರಿರ್ಯಾತಿ ಗೌರ್ಯಥಾ ಸುತವತ್ಸಲಾ ॥ ೩೭ ॥

ಪಾಪಾನಿ ಯಾನಿ ರವಿಸೂನುಪಟಸ್ಥಿತಾನಿ
ಬ್ರಹ್ಮಘ್ನಮಾತೃಪಿತೃಬಾಲವಧಾದಿಕಾನಿ ।
ನಶ್ಯಂತಿ ತಾನಿ ತುಲಸೀವನದರ್ಶನೇನ
ಗೋಕೋಟಿದಾನಸದೃಶಂ ಫಲಮಾಪ್ನುವಂತಿ ॥ ೩೮ ॥

ರಾಜದ್ವಾರೇ ಸಭಾಮಧ್ಯೇ ಸಂಗ್ರಾಮೇ ಶತ್ರುಪೀಡಿತೇ ।
ತುಲಸೀಸ್ಮರಣಂ ಕೃತ್ವಾ ಸರ್ವತ್ರ ವಿಜಯೀ ಭವೇತ್ ॥ ೩೯ ॥

ವಿಷ್ಣುಗಾತ್ರೇಣ ಸಂಸ್ಪೃಷ್ಟಾ ಅಹೋರಾತ್ರೋಷಿತಾ ಶುಭಾ ।
ತುಲಸೀ ವಿಧೃತಾ ಯೇನ ತಸ್ಯ ಪುಣ್ಯಮನಂತಕಮ್ ॥ ೪೦ ॥

ತುಲಸೀಕಾನನಂ ಯತ್ರ ಯತ್ರ ಪದ್ಮವನಾನಿ ಚ ।
ವಸಂತಿ ವೈಷ್ಣವಾ ಯತ್ರ ತತ್ರ ಸನ್ನಿಹಿತೋ ಹರಿಃ ॥ ೪೧ ॥

ಏತತ್ಸರ್ವಂ ಮಯಾಽಽಖ್ಯಾತಂ ಶ್ರೋತೄಣಾಂ ಪುಣ್ಯವರ್ಧನಮ್ ।
ಯಃ ಪಠೇಚ್ಛ್ರಾವಯೇದ್ವಾಽಪಿ ಸ ಗಚ್ಛೇದ್ವೈಷ್ಣವಂ ಪದಮ್ ॥ ೪೨ ॥

ಯಾ ದೃಷ್ಟಾ ನಿಖಿಲಾಘಸಂಘಶಮನೀ ಸ್ಪೃಷ್ಟಾ ವಪುಃಪಾವನೀ
ರೋಗಾಣಾಮಭಿವಂದಿತಾ ನಿರಸನೀ ಸಿಕ್ತಾಽಽಂತಕತ್ರಾಸಿನೀ ।
ಪ್ರತ್ಯಾಸತ್ತಿವಿಧಾಯಿನೀ ಭಗವತಃ ಕೃಷ್ಣಸ್ಯ ಸಂರೋಪಿತಾ
ನ್ಯಸ್ತಾ ತಚ್ಚರಣೇ ವಿಮುಕ್ತಿಫಲದಾ ತಸ್ಯೈ ತುಲಸ್ಯೈ ನಮಃ ॥ ೪೩ ॥

**॥ ಇತಿ ಪದ್ಮಪುರಾಣೇ ತುಲಸೀಮಾಹಾತ್ಮ್ಯೇ ಷಟ್‌ತ್ರಿಂಶೋಽಧ್ಯಾಯಃ ॥**

★ ★ ★

ಉದಯದೊಳಗೆದ್ದು ನೀರೆರೆದು ಮಜ್ಜನಗೈದು
ತುದಿಬೆರಳಿನಿಂದ ಮೃತ್ತಿಕೆಯ ಫಣೆಯೊಳಗಿಟ್ಟು
ಮುದದಿಂದಲೊಂದು ಪ್ರದಕ್ಷಿಣೆ ನಮಸ್ಕಾರ ತದನಂತರದಲಿ ಭಜನೆ
ವದನದೊಳು ಗೈಯೆ ಧರೆಯೊಳಗಿದ್ದ ಸರ್ವನದ-
ನದಿಗಳಿಗೆ ನೂರ್ಮಡಿಯಾತ್ರೆಮಾಡಿದ ಫಲ
ಒದಗುವುದು ಹಿಂದಣಾನಂತ ಜನ್ಮಗಳಘವ ತುದಿಮೊದಲು ದಹಿಪುದಯ್ಯ ॥ ೩ ॥

ಆವವನ ಮನೆಯಲ್ಲಿ ತುಲಸಿ ಸಾಲಿಗ್ರಾಮ
ಆವವನ ಮನೆಯಲ್ಲಿ ಹರಿದಾಸರಾ ಕೂಟ
ಆವವನ ಭುಜದಲ್ಲಿ ತಪ್ತಮುದ್ರಾಂಕಿತವು ಪಾವಮಾನಿಯ ಮತದೊಳು
ಆವವನು ಕಾಲತ್ರಯವ ಕಳೆವನಾವಲ್ಲಿ
ಶ್ರೀವಾಸುದೇವ ಮುನಿದೇವಾದಿಗಣಸಹಿತ
ಕಾವುತ್ತಲಿಪ್ಪ ಬಲಿಗೊಲಿದಂತೆ ತೊಲಗದಲೆ ಭಾವಿಸಿರಿ ಭಾವಜ್ಞರು ॥ ೪ ॥

ಕಂಡರೆ ದುರಿತಕ್ಕೆ ಕೆಂಡವನು ಬೀರುವುದು
ಕೊಂಡಾಡಿದರೆ ಪುಣ್ಯವಪರಿಮಿತವುಂಟು ಮೈ-
ದಿಂಡುಗೆಡಹಿದರೆ ಪುನರಪಿ ಜನನವಿಲ್ಲ ಸಲೆ ದಂಡವಿಟ್ಟವ ಮುಕ್ತನೋ।
ಚಂಡಾಲಕೇರಿಯೊಳು ಇರಲು ಹೀನಯವಲ್ಲ
ಪಾಂಡುರಂಗಕ್ಷೇತ್ರ ಸರಿಮಿಗಿಲು ಎನಿಸುವುದು
ತಂಡತಂಡದ ಕುಲಕೆ ಅವರವರ ಯೋಗ್ಯಫಲ ಕಂಡವರಿಗುಂಟೆ ಅಯ್ಯ ॥ ೫ ॥

ಚಿತ್ತಶುದ್ಧನು ಆಗಿ ಮುಂಜಾನೆಯೊಳು ತುಲಸಿ
ಸ್ತೋತ್ರವನೆ ಮಾಡುತ್ತ ದಿವ್ಯವಾಗಿಹ ತ್ರಿದಳ
ಪ್ರತ್ಯೇಕ ಪಾತ್ರೆಯಲಿ ತೆಗೆದು ಶೋಧಿಸಿ ತುಂಬಿ ವಿತ್ತಾದಿಯಲಿ ತಾರದೆ
ಮತ್ತೆ ವಸ್ತ್ರಧಿ ಹಸ್ತ ಶಿಲೆಯರ್ಕ ಏರಂಡ-
ಪತ್ರದಲಿ ತಾರದಲೆ ಭೂಮಿಯೊಳಗಿಡದೆ ಪೂ-
ರ್ವೋತ್ತರಭಿಮುಖನಾಗಿ ಭಕ್ತಿಯಿಂ ತರಬೇಕು ಹೊತ್ತು ಮೀರಿಸಲಾಗದೊ ॥ ೬ ॥

ಕವಿಮಂಗಳವಾರ ವೈಧೃತಿ ವ್ಯತೀಪಾತ
ರವಿಶಶಿಯ ಸಂಗಮ ಪರ್ವಣಿ ಪುಣ್ಯಕಾಲ-
ದಿವಸ ದ್ವಾದಶಿ ಶ್ರೇಷ್ಠ ಉಪರಾಗ ಪಿತೃಶಾದ್ಧ ಇವುಗಳಲಿ ತೆಗೆಯಾದಿರಿ
ನವವಸನ ಪೊದ್ದು ಊಟವಮಾಡಿ ತಾಂಬೂಲ
ಸವಿಯುತ್ತ ಮುಟ್ಟದಿರಿ ಯುವತಿ ಶೂದ್ರರಿಂ ತರಿ-
ಸುವುದುಚಿತವಲ್ಲೆಂದು ತಿಳಿದು ಕೊಂಡಾಡುತಿರಿ ದಿವಸ ದಿವಸಗಳೊಳಯ್ಯ ॥ ೭ ॥

ದಳವಿದ್ದರೆ ಒಳಿತು ಇಲ್ಲದಿದ್ದರೆ ಕಾಷ್ಠ
ಎಲೆ ಮೃತ್ತಿಕೆಗಳಿಂದ ಪೂಜೆ ಮಾಡಲಿಬಹುದು
ತುಲಸಿ ನಿರ್ಮಾಲ್ಯವಾದರು ತ್ರಿವಾರದಲಿ ತೊಳೆತೊಳೆದು ಏರಿಸಲಿಬಹುದು
ತುಲಸಿ ಒಣಗಿದ್ದರೂ ಲೇಶದೋಷಗಳಿಲ್ಲ
ತುಲಸಿ ವಿರಹಿತವಾದ ಪೂಜೆಯದು ಸಲ್ಲದು
ತುಲಸಿ ತುಲಸಿ ಎಂದು ಸ್ಮರಣೆಯಾದರು ಮಾಡಿ ಜಲಜಾಕ್ಷನರ್ಚಿಸಿರೈಯ್ಯ ॥ ೮ ॥

ತುಲಸಿ ಇಲ್ಲದ ಸದನ ಹೊಲೆಮಾದಿಗರ ಸದನ
ತುಲಸಿ ಇಲ್ಲದ ಬೀದಿ ನರಕಕೆಳಸುವ ಹಾದಿ
ತುಲಸಿ ಇಲ್ಲದ ತೀರ್ಥವೆಂದಿಗಿದ್ದರು ವ್ಯರ್ಥ ತುಲಸಿ ಬಲು ಪ್ರಾಧಾನ್ಯವೊ
ತುಲಸಿಮಿಶ್ರಿತವಾದ ನೈವೇದ್ಯ ಗತಿಸಾಧ್ಯ
ತುಲಸಿ ಧರಿಸಿದ ದೇಹ ಪರಮಸಾರ್ಥಕವಯ್ಯ
ತುಲಸಿದಳ ಹರಿಗೆ ಅರ್ಪಿಸಿದವನ ಪುಣ್ಯಕ್ಕೆ ನೆಲೆಯ ನಾ ಕಾಣೆನಯ್ಯ ॥ ೯ ॥

ಶಿವನಸತಿ ಪ್ರಹ್ಲಾದ ನಾರದ ವಿಭೀಷಣನು
ಧ್ರುವ ಅಂಬರೀಷ ಶಶಿಬಿಂದು ರುಕ್ಮಾಂಗದನು
ಇವರೆ ಮೊದಲಾದವರು ಭಕ್ತಿಪೂರ್ವಕದಲಿ ವಿವರವನು ತಿಳಿದರ್ಚಿಸಿ
ತವಕದಿಂ ತಂತಮ್ಮ ಘನಪದವನೈದಿದರು
ಭುವನದೊಳಗುಳ್ಳ ನಿರ್ಮಲಜನರು ಭಜಿಸಿದರು
ಜವಭಟರನೋಡಿಸಿ ಜಡದೇಹವನು ನೀಗಿ ಭವದೂರರಾದರೈಯ ॥ ೧೦ ॥

ಉದಯಕಾಲದೊಳೆದ್ದು ಆವನಾದರು ತನ್ನ
ಹೃದಯನಿರ್ಮಲನಾಗಿ ಭಕುತಿಪೂರ್ವಕದಿಂದ
ಸದಮಲ ತುಲಸಿಯನು ಸ್ತೋತ್ರಮಾಡಿದ ಕ್ಷಣಕೆ ಮದಗರ್ವಪರಿಹಾರವೊ
ಇದೆ ತುಲಸಿ ಸೇವಿಸಲು ಪೂರ್ವದಲಿ ಕಾವೇರಿ
ನದಿಯತೀರದಲೊಬ್ಬ ಭೂಸುರ ಪದಕೆ ಪೋದ
ಪದಪದೆಗೆ ಸಿರಿವಿಜಯವಿಠ್ಠಲಗೆ ಪ್ರಿಯಳಾದ ಮದನತೇಜಳ ಭಜಿಸಿರೈಯ ॥ ೧೧ ॥

★ ★ ★

## ೧೪. ಶ್ರೀಪ್ರಸನ್ನವೇಂಕಟದಾಸರ ಕೃತಿ[೮೨]

[೮೩] ಶ್ರೀತುಲಸಿ ಮಹಿಮೆಯನು ಪೊಗಳಲಳವಲ್ಲ
ಶ್ರೀನಾಥ ನಾರಾಯಣನ ಅರ್ಚನೆಗೆ ಸರ್ವದಾ
ಪ್ರೀತಿಕರಳಾಗಿ ರಾಜಿಪಳು ಕಲಿಯುಗದಲ್ಲಿ ನೋಂತವರ ಭಾಗ್ಯವೆಂತೊ ॥ ಪ ॥

ಶ್ರೀಮದಾರ್ಜಿತ ಕ್ಷೀರವಾರಿಧಿಯ ಮಥಿಸುತಿರೆ
ಆ ಮಹಾವಿಷ್ಣುವಿನ ನೇತ್ರದಿಂದಲಿ ಹೊರಟ
ಪ್ರೇಮಜಲದುದ್ಭವಿಸಿ ನಳನಳಿಸಿ ದಿವ್ಯ ಆಮೋದ ಪೂರ್ಣಳಾಗಿ
ಭೂಮಿ ಪಾವನವ ಮಾಡುತಲಿ ಭೂನಿರ್ಜರರ
ಧಾಮ ಧಾಮಗಳಲ್ಲಿ ವೃಂದಾವನದಿ ನೆಲಸಿ
ಕಾಮಿತ ಫಲವನೀವ ಕಲ್ಯಾಣಿ ಕೃಷ್ಣನಿಗೆ ನೇಮದಿಂ ಪ್ರೀಯಳಾದ ॥ ೧ ॥

ಈ ಮನುಜ ದೇಹದಲಿ ದಾವ ಪ್ರಾಣಿಯು ಪಿತೃ
ಸ್ತೋಮವನ್ನುದ್ಧರಿಪೆನೆಂದರೆ ಸುಲಭ ಸಾಧ್ಯ
ಕೋಮಲದಳವನೊಂದು ತಂದು ಮಾಧವನ ಚರಣತಾಮರಸಕರ್ಪಿಸುವದು
ತಾ ಮುನ್ನ ಮಾಡಿದಘಪಂಚಕಗಳೋಡಿದವು
ಸಾಮಾನ್ಯವಲ್ಲ ತುಲಸಿಯ ವನವ ಸೋಂಕಿ ಬಂ
ದಾ ಮರುತದಿಂದ ದೇಶಗ್ರಾಮಗಳು ಪಾವನವು ಧೀಮಂತ ಮಾನ್ಯಳಾದ ॥ ೨ ॥

ತುಲಸಿ ನೆಳಲಲ್ಲಿ ಅಂಕುರಗಳಿದ್ದಲ್ಲಿ ಪಿತೃ-
ಗಳಿಗನ್ನವಿತ್ತರಕ್ಷಯಫಲವು ಊರ್ಧ್ವಪುಂಡ್ರ
ತಳದ ಮೃತ್ತಿಕೆಯಲಿಟ್ಟರೆ ಕೋಟಿ ತೀರ್ಥಗಳ ಮುಳುಗೆದ್ದ ಫಲ ಸಿದ್ಧವು
ನಿಲಯದಲಿ ಪತ್ರ ಮೃತ್ತಿಕೆ ಕಾಷ್ಠವಿರಲಲ್ಲಿ
ಕಲಿ ಮುಟ್ಟಲಂಜಿ ತೊಲಗುವನು ಮಣಿಸರಗಳನು
ಗಳದೊಳಾಂತರಾ ಕಲುಷ ಸಂಹರವು ಸಹ ಸಲೆ ವಿಷ್ಣುಪದವಿಯನೀವ ॥ ೩ ॥

---

೮೨ ತುಲಸಿಯಿಂದಲೇ ಪಿತೃಗಳ ಉದ್ಧಾರ. ಪಂಚಮಹಾಪಾತಕಗಳು ಸಹ ತುಲಸಿಯ ಸೇವನೆಯಿಂದಲೇ ಪರಿಹಾರವಾಗುವುದು. ತುಲಸಿಯ ಕಾಷ್ಠ ಮೃತ್ತಿಕೆಯಿರುವ ಸ್ಥಳದಲ್ಲೂ ಸಹ ಕಲಿಯು ನೆಲೆಸಲಾರ. ತುಲಸಿಯ ಮಾಲೆಯ ಧಾರಣೆಯಿಂದ ಮನಸ್ಸಿನ ದೋಷವು ಪರಿಹಾರವಾಗುವುದು. ತುಲಸಿಯಿಂದ ವಿಘ್ನಗಳು ನಾಶ ಹೊಂದುವುವು, ದುಷ್ಟಗ್ರಹಗಳ ಪೀಡೆ ಇಲ್ಲವಾಗುವುದು. ತುಲಸಿಯ ಸೇವನೆಯು ಪರಮಮಂಗಲಕರ. ಸಹಸ್ರನಾಮವನ್ನು ಪಠಿಸುತ್ತಾ ತುಲಸಿಯಿಂದ ಪೂಜಿಸುವುದು ಶ್ರೀಹರಿಗೆ ಅತ್ಯಂತ ಪ್ರಿಯ. ತುಲಸಿಯ ಸೇವನೆಯಿಂದ ನೂರೊಂದು ಕುಲದವರೂ ಸಹ ನರಕದಿಂದ ಪಾರಾಗುವರು.

೮೩. ಉದಯರಾಗ - ತಾಳ : ಅಟ್ಟ

ಶತಸಾಸಿರಪರಾಧವಿರಲಿನ್ನು ಮೃತ್ತಿಕೆ ಲೇ-
ಪಿತ ಕಾಯದನಿಗೆ ಬಹುಜನ ನೋಡೆ ವಿಘ್ನಗಳ
ಗತಿಯುಡುಗಿ ದುಷ್ಟಗ್ರಹಗಳೆಲ್ಲನುಕೂಲಗತಿಯಾದ ಫಲವೀವವು
ಪ್ರತಿದಿನದಿ ನಾಭಿಕರ್ಣದಲಿ ಶಿರದಲ್ಲಿ ಶ್ರೀ
ಪತಿಯ ನಿರ್ಮಾಲ್ಯದಳ ಧರಿಸಿ ಹರಿಪಾದ ತೀ
ರಥವೊಮ್ಮೆ ಸೇವಿಸಿದವರ ಮುಕ್ತಿ ಕರತಳವು ಪತಿತಪಾವನಿ ಎನಿಸುವಾ ॥ ೪ ॥

ದರುಶನದಿ ಸ್ಪರುಶನದಿ ಧ್ಯಾನದಿಂ ಕೀರ್ತನೆಯು
ನಿರುತ ಪ್ರಣಾಮಗಳು ಸ್ತೋತ್ರದಾರೋಪಣಂ
ಪರಮಜಲ ಸೇಚನಾರ್ಚನ ನಿಷ್ಠೆಯಿಂದ ನವಪರೀಕ್ಷೆಯನು ಮಾಡಲು
ಹರಿಚರಣಕಮಲರತಿ ದೊರಕಿ ಯುಗ ಕೋಟಿ ಸಾ
ಸಿರ ಕಾಲ ತಿರುಗಿ ಬಂದರೆ ಸತತ ಮಾಂಗಲ್ಯ
ಹರಿಯ ಮನೆಯಲ್ಲಿ ನಿಜ ಹರುಷವನ್ನುಂಬುವರು ಮುರಾರಿ ವರದಂತೆ ಪದವ ॥ ೫ ॥

ಒಂದೊಂದು ದಳ ಕೋಟಿಸ್ವರ್ಣಭಾರಕೆ ಮಿಗಿಲು
ಎಂದು ವಿಶ್ವಾಸದಲಿ ತಂದು ಸಾಸಿರನಾಮ
ದಿಂದ ಗೋವಿಂದಗರ್ಪಿಸಿದರಿಲ್ಲಿಹ ಭವದಂದುಗವು ಮಾನಿಸರ್ಗೆ
ಸುಂದರ ತುಲಸಿ ಮೂಲವನ್ನು ತೊಡಕಿರ್ದ ಕಳೆ
ಯಂದೆಗೆದು ಶಾಖೋಪಶಾಖದಿಂ ವೃದ್ಧಿಸಾ
ನಂದವಿತ್ತರಾ ನೂರೊಂದು ಕುಲ ನರಕವನು ಹೊಂದಲೀಸರು ಪುಣ್ಯದಾ ॥ ೬ ॥

ಶ್ರೀ ವಿಷ್ಣುವಲ್ಲಭೆಯ ಮೂಲದಲಿ ತೀರ್ಥಗಳು
ಬಾವನ್ನಗಂಧಿಯಳ ಮಧ್ಯದಲಿ ಸುರನಿಕರ
ಪಾವನಿಯಳಾ ಹರಿಯ ಕೊನೆಯಲಿ ಶ್ರುತಿ ಸಮೂಹ ಲಾವಣ್ಯ ಗುಣರಾಶಿಯು
ಭಾವಶುದ್ಧಿಯಲಿ ಉದಯದಿ ಸ್ಮರಿಸಿ ನಿರುತದಿ
ನಾವ ಕಾರ್ಯಕೆ ಗೆಲುವು ಇಹಪರದ ಸೌಖ್ಯವಿ
ತ್ತಾವ ಕಾಲಕ್ಕೆ ಹೊರೆವ ಪ್ರಸನ್ನವೆಂಕಟ ದೇವನಂಗದೊಳೊಪ್ಪುವಾ ॥ ೭ ॥

★ ★ ★

## ೧೫. ಶ್ರೀಜಗನ್ನಾಥದಾಸರ ಕೃತಿ[೮೪]

ಜಲಜಾಕ್ಷನಮಲಕಂಜಲಬಿಂದು ಪೀಯೂಷ-
ಕಲಶದೊಳು ಬೀಳೆ ಜನಿಸೀದಿ – ಜನಿಸೀದಿ ಹರಿಯಿಂದ ಶ್ರೀ
ತುಲಸಿ ನೀನೆಂದು ಕರೆಸೀದಿ ॥ ೧ ॥

ಶ್ರೀತರುಣಿವಲ್ಲಭನ ಪ್ರೀತಿವಿಷಯಳೆ ನಿನ್ನ
ನಾ ತುತಿಸಿ ಕೈಯ ಮುಗಿವೆನು –ಕೈಮುಗಿವೆ ಮಹ
ಪಾತಕವ ಕಳೆದು ಪೊರೆಯಮ್ಮ ॥ ೨ ॥

ತುಲಸಿ ನಿನ್ನಡಿಗೆ ನಾ ತಲೆಬಾಗಿ ಬಿನ್ನೈಪೆ
ಕಲುಷಕರ್ಮಗಳ ಎಣಿಸದೆ – ಎಣಿಸದೆ ಸಂಸಾರ
ಬಲೆಯಿಂದ ಕಡೆಗೆತ್ತು ಎನ್ನ ॥ ೩ ॥

ನೋಡಿದವ ದುರಿತ ವೀಡ್ಯಾಡಿದವ ನಿನ್ನ ಕೊಂ-
ಡಾಡಿದವ ನಿತ್ಯ ಹರಿಪಾದ – ಹರಿಪಾದಕಮಲಗಳ
ಕೂಡಿದವ ಸತ್ಯ ಎಂದೆಂದು ॥ ೪ ॥

ನಿಂದಿಸಿದವರೆಲ್ಲ ನಿಂದ್ಯರಾಗುವರು ಅಭಿ-
ವಂದಿಸಿದ ಜನರು ಜಗದೊಳು – ಜಗದೋಳು ಜನರಿಂದ
ವಂದ್ಯರಾಗುವರು ಎಂದೆಂದು ॥ ೫ ॥

ಕಲುಷವರ್ಜಿತೆ ನಿನ್ನ ದಳಗಳಿಂದಲಿ ಲಕ್ಷ್ಮೀ-
ನಿಲಯಂಘ್ರಿಗಳನ್ನು ಭಜಿಪರಿಗೆ – ಭಜಿಪರಿಗೇ ಪರಮಮಂ-
ಗಳದ ಪದವಿತ್ತು ಸಲಹೂವಿ ॥ ೬ ॥

ಶ್ರೀ ತುಲಸಿದೇವಿ ಮನ್ಮಾತ ಲಾಲಿಸು ಜಗ-
ನ್ನಾಥವಿಠಲನ್ನ ಚರಣಾಬ್ಜ – ಚರಣಾಬ್ಜ ಮನದಲ್ಲಿ
ನೀ ತೋರಿಸೆನಗೆ ನಿರುತದಿ ॥ ೭ ॥

★ ★ ★

---

೮೪ ಶ್ರೀಜಗನ್ನಾಥದಾಸರ ಈ ಕೃತಿ ಅವರ ತತ್ತ್ವಸುವ್ವಾಲಿಯಲ್ಲಿ ಕಂಡುಬರುವುದು. ಶ್ರೀಹರಿಯ ಆನಂದಬಾಷ್ಪದಿಂದ ತುಲಸಿಯ ಪ್ರಾದುರ್ಭಾವ. ತುಲಸಿಯು ಶ್ರೀಹರಿಗೆ ಅತ್ಯಂತ ಪ್ರಿಯಳು. ತುಲಸಿಯ ದರ್ಶನ ಮೊದಲಾದವುಗಳೂ ಸಹ ದುರಿತರಾಶಿಯನ್ನು ಪರಿಹರಿಸುವುವು. ತುಲಸಿಯನ್ನು ನಿಂದಿಸಿದವರು ನಿಂದ್ಯರಾಗುವರು. ವಂದಿಸಿದವರು ವಂದ್ಯರಾಗುವರು ಎಂಬುದು ಇದರಲ್ಲಿ ಪ್ರತಿಪಾದಿತವಾಗಿದೆ. ಹರಿಕಥಾಮೃತಸಾರದಂತಹ ಕೃತಿರತ್ನ ಬರೆದವರ ಕೃತಿ ಎಂಬುದು ಈ ಕೃತಿಯ ವಿಶೇಷ

## ೧೬. ಶ್ರೀಪ್ರಾಣೇಶವಿಠಲದಾಸರ ಕೃತಿ[೮೫]

ನಮೋ ನಮೋ ಶ್ರೀತುಲಸೀ ।
ಪಾಹಿ ಪಾಹಿ ಕುಮತಿಯ ಪರಿಹರಿಸೀ ನೀ ॥ ಪ ॥

ಅಮಿತಮಹಿಮೆ ಸದ್ಗುಣಗಣಪೂರ್ಣೇ
ಕಮಲೇಕ್ಷಣ ಮಧುಸೂದನನರಸಿ ॥ ಅ.ಪ ॥

ಅಂದಿನ ಕಾಲದಲಿ ಹರಿಪದ
ವಂದಿಸಿ ಭಕುತಿಯಲಿ
ಅಂದದಿ ವರ ಪಡೆದಿಂದಿಗು ಸರ್ವರ
ಮಂದಿರದೊಳಗಿಹೆ ಪೂಜೆಯ ಕೊಳುತಲಿ ॥ ೧ ॥

ಧನ್ವಂತರಿ ನಯನಾದಿಂದಿಳಿ
ದೊಸಜೆ ಜಲಂಧರನಾ ಲ-
ಲನೆಯ ಉದ್ಧರಿಸಿದ ಪಾವನತರೆ
ಎನಗಸದಳ ವರ್ಣಿಸೆ ನಿನ್ನ ಗುಣಾ ॥ ೨ ॥

ನಾ ನಂಬಿದೆ ನಿನ್ನಾ ದೇವತೆ
ಮಾನಿನಿಮಣಿ ಎನ್ನಾ
ಹೀನತೆ ಎಣಿಸದೆ ಕರುಣಿಸಿ ಸರ್ವದ
ಪ್ರಾಣೇಶವಿಠಲನ ಧ್ಯಾನದೊಳಿರಿಸೆ ॥ ೩ ॥

★ ★ ★

## ೧೭. ಶ್ರೀಮಹಿಪತಿದಾಸರ ಕೃತಿ[೮೬]

ಏನೆಂದು ಬಣ್ಣಿಸುವೆನೊ ನಾನು
ಶ್ರೀನಾಥ ಪ್ರಿಯಳಾದ ಶ್ರೀತುಲಸಿ ಮಹಿಮೆಯನು ॥ ಪ ॥

---

೮೫ ತುಲಸಿಯು ಕುಮತಿಯನ್ನು ಪರಿಹರಿಸಿ ಸನ್ಮತಿಯನ್ನು ನೀಡುವಳು. ತುಲಸಿಯು ಶ್ರೀಹರಿಯ ರಾಣಿ. ಸಕಲಜನರ ಮನೆಯಲ್ಲೂ ಸಹ ತುಲಸೀ ಪೂಜೆ ವಿಹಿತ ಎಂಬುದು ಇಲ್ಲಿಯ ಭಾವ.

೮೬ ತುಲಸಿಯ ಮಹಿಮೆ ವರ್ಣನಾತೀತ. ಶ್ರೀಹರಿಯು ಧರಿಸಿದ ಇದನ್ನು ಸಕಲ ದೇವತೆಗಳೂ ಹರ್ಷದಿಂದ ಧರಿಸಿದರು. ಸರಸ್ವತೀ ಮೊದಲಾದವರು ಇದನ್ನು ಧರಿಸುವರು. ತುಲಸಿಯಲ್ಲಿ ಭಕ್ತಿ ಮಾಡಿದವನು ಕಲಿಯ ವಂಶಕ್ಕೆ ಸೇರಿದವನು. ತುಲಸಿಯನ್ನು ಬೆಳೆಸಿರುವ ಮನೆ ಪುಣ್ಯದ ಬೀಡು. ತುಲಸಿಯಲ್ಲಿ ಸಕಲ ದೇವತೆಗಳ ಸನ್ನಿಧಾನ ಎಂಬುದು ಇದರ ಸಾರ.

ಜಲಧಿಮಥನದಿ ಅಮೃತಕಲಶ ಬರೆ ಕಂಡು ಅತಿ
ಜಲಜಾಂಬಕನ ಪ್ರೇಮಾಂಜಲ ಉದರಲು
ಇಳಯೊಳದರಿಂದುದಿಸಿ ಬೆಳೆದು ನಿಂದಿರೆ ನೋಡಿ
ಒಲಿದು ಕೋಮಲ ಮುಗುಳು ತಳೆದ ಶ್ರೀಹರಿ ತಾನು ॥ ೧ ॥

ಹರಿಯು ಧರಿಸಿದ ಕಂಡು ಸುರರೆಲ್ಲ ವಂದಿಸುತ
ಶಿರದಲಾಂತರು ಪರಮ ಹರುಷದಿಂದ
ಸಿರಿಸರಸ್ವತಿ ಗಿರಿಜೆ ನಿರುತ ನಿನ್ನಯ ವ್ರತದಿ
ಧರೆಯೊಳಗೆ ತಮ್ಮ ತಮ್ಮ ಅರಸರೊಲಿಸಿದರೆಂದು ॥ ೨ ॥

ನೋಡಿದರೆ ದುರಿತ ಕುಲ ಓಡುವವು ತನುವ ನೀ
ಡಾಡಿ ಜಲ ನೀಡೆ ಕೊಂಡಾಡಿ ನಿಂದು
ಕೂಡೆ ಮೃತ್ತಿಕೆ ಪಣೆಗೆ ತೀಡಿದರೆ ಭಕುತಿಯಲಿ
ಬೇಡಿದಿಷ್ಟಾರ್ಥ ಕೈಗೂಡಬಹುದಿಳೆಯೊಳಗೆ ॥ ೩ ॥

ತುಲಸಿ ಭಕುತಿಲ್ಲದವ ಕಲಿವಂಶದನುಜನವ
ತುಲಸಿ ಧರಿಸಿದ ತನುವು ಸಲೆ ಮುಕ್ತಿ ಮಂಟಪವು
ತುಲಸಿ ಬೆಳೆದಿಹ ಮನೆಯು ಬಲಿದ ಪುಣ್ಯದ ಖಣಿಯು
ತುಲಸಿ ಇಲ್ಲದ ಗೇಹ ನಕುಲಾಲಯ ॥ ೪ ॥

ಮೂಲದಲಿ ಬ್ರಹ್ಮ ತಾ ನೀಲಕಂಠನು ನಡುವೆ
ಮೇಲುತುದಿಯಲಿ ವಿಷ್ಣು ಲೋಲಾಡುವಾ
ಸಾಲಕೊಂಬೆಗಳಲಿ ವಿಶಾಲದೇವತೆಗಳಿಹರು
ತಾಳಿ ಪ್ರೇಮವನು ಮಹಿಪತಿನಂದನಾಜ್ಞೆಯಲಿ ॥ ೫ ॥

★ ★ ★

## ೧೮. ಕಾಖಂಡಕಿ ಶ್ರೀಕೃಷ್ಣದಾಸರ ಕೃತಿ[೮೭]

ವೃಂದಾವನಿ ದೇವಿ ತಂದೆ ಮಹಿಪತಿ ಪಾದ-
ದ್ವಂದ್ವವೆನಗೆ ತೋರಮ್ಮಾ ॥ ಪ ॥

೮೭ ಚಾತಕಪಕ್ಷಿಗೆ ಮಳೆಯಂತೆ, ಚಕೋರಕ್ಕೆ ಚಂದ್ರನಂತೆ, ಪತಿವ್ರತೆಗೆ ಪತಿಯಂತೆ, ಹರಿಭಕ್ತರಿಗೆ ತುಲಸಿಯು ಶ್ರೀಹರಿಪೂಜೆಗೆ ಸಾಧನವಾದ ಅತ್ಯಂತ ಶ್ರೇಷ್ಠವಾದ ಪೂಜಾದ್ರವ್ಯ. ಶ್ರೀಹರಿಯ ದರ್ಶನಕ್ಕೆ ತುಲಸಿಯ ಸೇವೆ ಸಾಧನ.

ತಪ್ಪಿ ತನ್ನವರಗಲಿಪ್ಪ ಶಿಶುವ ತಾಯಿ
ಗೊಪ್ಪಿಸುವಂದದಲೀಗ
ಸಪ್ಪಳಾಗದೆ ನಿನ್ನೊಳಿಪ್ಪ ಸದ್ಗುರುವಿನಾ
ಒಪ್ಪುವಂಘ್ರಿಯಾ ಬಿಗಿದಪ್ಪುವೆ ಮನದಿಂದೆ ॥ ೧ ॥

ಚಾತಕ ನಲಿದು ಜೀಮೂತ ಬಯಸುವಂತೆ
ಶೀತಾಂಶುವಿಗೆ ಚಕೋರಾ
ಆತುರಗಡ ನಿಜನಾಥನ ಗಮನಕೆ ಪಾತಿವ್ರತೆಯ
ಪರಿಧಾತುವಾಗಿದೆ ಎನ್ನ ॥ ೨ ॥

ಸುರನರೋರಗರೆಲ್ಲಾ ನಿರುತ ಭಜಿಸಿ ನಿನ್ನಾ
ಹರಿದಯ ಪಡೆದರಂತೆ
ಮರೆಯದೆ ಹೃದಯ ಮಂದಿರದಿ ಚಿದ್ಘನ ಗೋ-
ಚರಿಸುವಾ ಪರಿಯಲಿ ಕರುಣಿಸೆನಗೆ ತಾಯೆ ॥ ೩ ॥

★ ★ ★

## ೧೯. ಶ್ರೀವೇಣುಗೋಪಾಲವಿಠಲದಾಸರ ಕೃತಿ[೮೮]

(ಉದಯರಾಗ)

[೮೯] ಶ್ರೀತುಲಸಿಯನು ಸೇವಿಸಿ ॥ ಪ ॥

ಶ್ರೀತುಲಸಿಯನು ಸತತ ಸೇವಿಸುವ ಸುಜನರಿಗೆ
ಯಾತನೆಗಳಿಲ್ಲ ಯಮದೂತರಾ ಭಯವಿಲ್ಲ
ಭೂತಜನುಮಗಳಿಲ್ಲ ವಾತಜನ ಮತಜನರು ಪ್ರೀತಿಯಿಂದಿದನಾಲಿಸಿ ॥ ಅ.ಪ. ॥

---

೮೮ ಶ್ರೀವೇಣುಗೋಪಾಲದಾಸರ ಈ ಕೃತಿಯು ಶ್ರೀವಿಜಯದಾಸರ ಕೃತಿಯಂತೆ ತುಲಸಿಯ ಬಗ್ಗೆ ಅಪೂರ್ವ ಮಾಹಿತಿಗಳನ್ನು ಸಂಕಲಿಸಿಕೊಡುವ ಕೃತಿ. ತುಲಸಿಯಿಲ್ಲದ ಮನೆಯಲ್ಲಿ ಶ್ರೀಹರಿಯು ಕ್ಷಣಕಾಲವೂ ನೆಲೆಸನು. ತುಲಸಿಯ ಮಹಿಮೆಯನ್ನು ಹಾಡುವವನನ್ನು ಶ್ರೀಹರಿಯು ಸದಾ ಪಾಲಿಸುವನು. ಶ್ರೀಹರಿಯ ವಿಶೇಷ ವರದಿಂದಾಗಿ ತುಲಸಿಗೆ ಹೆಚ್ಚಿನ ಮಾನ್ಯತೆ ಲಭಿಸಿದೆ. ಗಂಡಕಿಯೆಂಬ ವೇಶ್ಯೆಗೆ ಶ್ರೀಹರಿಯು ವೃದ್ಧರೂಪದಿಂದ ಅನುಗ್ರಹಿಸಿದ. ಶ್ರೀಹರಿಯು ಅವಳನ್ನು ಬಗೆಬಗೆಯಲ್ಲಿ ಪರೀಕ್ಷಿಸಿ ಅನುಗ್ರಹಿಸಿದ. ಅವಳ ಪ್ರಾರ್ಥನೆಯಂತೆ ಶ್ರೀಹರಿ ನದಿಯಾಗಿ ಹರಿದ ಅವಳ ಒಡಲಲ್ಲಿ ಸಾಲಿಗ್ರಾಮದ ರೂಪದಲ್ಲಿ ನೆಲೆಸಿದ. ಬೃಂದೆ ಎಂಬುವಳ ಭಕ್ತಿಗೆ ಮೆಚ್ಚಿ ಅವಳನ್ನು ಬೃಂದಾವನವಾಗುವಂತೆ ಅನುಗ್ರಹಿಸಿದ. ತುಲಸಿಯನ್ನು ವೃಂದಾವನದಲ್ಲಿ ಬೆಳೆಸಿ ಪೂಜಿಸುವುದು ಶ್ರೀಹರಿಗೆ ಅತ್ಯಂತ ಪ್ರಿಯಕರವಾದ ಕಾರ್ಯ. ಹೀಗೆ ಅನೇಕ ಪುರಾಣಗಳಲ್ಲಿನ ವಿಚಾರವನ್ನು ಸಂಗ್ರಹಿಸಿಕೊಡುವ ಅಪೂರ್ವ ಕೃತಿ ಇದಾಗಿದೆ.

೮೯ ರಾಗ : ಭೂಪಾಳಿ (ವಾರ್ಧಿಕಷಟ್ಪದಿ)

ಜಲಜನಾಭನು ದೇವದಾನವರ ಸಹಿತದಲಿ
ಜಲಧಿಯನು ಮಥಿಸುತಿರೆ ಅಮೃತಪೂರಿತವಾದ
ಕಲಶವನು ಕರದಲ್ಲಿ ಧರಿಸಿ ಬರಲಾಕ್ಷಣದಿ ಜಲಸುರಿದವಕ್ಷಿಯಲ್ಲಿ
ಥಳಥಳಿಸುತಿಹ ಬಾಷ್ಪ ಕಲಶದಲಿ ತಾ ಸೇರಿ
ನೆಲಕೆ ಬಿಂದುಗಳುದುರಿ ತುಲಸಿರೂಪದಿ ಜನಿಸೆ
ತಲೆದೂಗಿದರು ಅಮರಗಣವೆಲ್ಲ ಹರಿಮಹಿಮೆ ತಿಳಿಯಲೊಶವಲ್ಲವೆಂದು ॥ ೧ ॥

ನದಿಜನಕ ತಾನು ನಾರಿಯ ಮದುವೆಯನು ಗೈದು
ತ್ರಿದಶರಿಂದಲಿ ಸ್ತೋತ್ರ ಕೈಗೊಳುತಲೊಪ್ಪತಿರೆ
ವಿಧ ಪೇಳಲಳವಲ್ಲ ವಿಧಿ ಶಿವಾದಿಗಳಿಂದ ವಿಬುಧಮುನಿಗಣಗಳಿಂದ
ಪದುಮನಾಭನೆ ಎನ್ನ ಕರಪಿಡಿದ ತರುವಾಯ
ಒದಗಲೆನ್ನಯ ಕೀರ್ತಿ ವಿಸ್ತಾರದೊಳಗೆಂದು
ಚದುರೆ ಬಿನ್ನೈಸಲ್ಕೆ ಆ ವಚನವನು ಕೇಳಿ ಮುದದಿಂದ ನುಡಿದನಾಗ ॥ ೨ ॥

ಸಖಿಯೆ ನೀ ಕೇಳುವುದು ವರವೀವೆ ನಿನಗೆ ಈ
ಸಕಲದೇವತೆಗಳೂ ಸರ್ವನದನದಿಗಳೂ
ಅಕಳಂಕ ಮುನಿಗಳೂ ಆ ಮುಕುತ ಜನರಿಂದ ಯುಕುತವಾಗಿದ್ದು ಅಲ್ಲಿ
ಪ್ರಕಟದಲಿ ಸೇವೆಯನು ಕೈಗೊಳುತ ನಿಂದಿರುವೆ
ಅಕುಟಿಲಾತ್ಮಕರಾಗಿ ನಿನ್ನ ಸೇವಿಪ ನರರ
ಅಖಿಳಾಘರಾಶಿಯನು ಕಳೆಯುತವರನು ಎನ್ನ ಭಕುತರೊಳು ಎಣಿಪೆನೆಂದ ॥ ೩ ॥

ಎನ್ನ ಪೂಜೆಯನು ಏನೇನು ಬಗೆ ದ್ರವ್ಯದಲಿ
ಮನ್ನಿಸುತ ಮಾಡಿದರು ಫಲವೀಯೆನವರಿಂಗೆ
ನಿನ್ನ ಸಹಿತದಿ ಸರ್ವಬಗೆಯಲ್ಲಿ ಪೂಜಿಸಲು ಮುನ್ನ ಕೈಗೊಂಬೆ ನಾನು
ಇನ್ನು ಈ ಬಗೆಯಲ್ಲಿ ಇದಕೆ ಸಂಶಯವಿಲ್ಲ
ಅನ್ಯಥಾವಾಗಲರಿಯದು ವರವು ಶತಸಿದ್ಧ
ವೆನ್ನುತಲಿ ತಿಳಿಯುವುದು ಸರ್ವಸಜ್ಜನರೆಂದು ಘನ್ನಮಹಿಮನು ನುಡಿದನು ॥ ೪ ॥

ಆವ ಮನೆಯಲಿ ನಿನ್ನ ಚಿಹ್ನೆ ತಾನಿಲ್ಲದಿರೆ
ಆವ ಜನವಾದರೇ ನಿನ್ನ ಪೂಜಿಸದಲಿರೆ
ನಾ ಒಂದುಕ್ಷಣ ನಿಲ್ಲೆನವನ ಮನೆ ತನುವಿನೊಳು ನೋವ ಬಡಿಸುವೆ ವಿಶೇಷ
ಪಾವನೆಯೆ ನಿನ್ನ ಸತ್ಕೀರ್ತಿ ಕೊಂಡಾಡಿದವ-
ಗೀವೆ ಕೈವಲ್ಯವನು ಇಹಲೋಕದೊಳಗವನ
ಕೇವಲಾಧಿಕವಾಗಿ ಕಾಪಾಡುವೆನು ಸಕಲದೇವಮುನಿಸಹಿತವೆಂದು ॥ ೫ ॥

ಎಂದು ವರವಿತ್ತ ಬಳಿಕಂದಿನಿಂದಲಿ ಸಕಲ
ಮಂದಿರಾಂಗಣದೊಳಗೆ ಹೊಂದಿ ಲೋಕಂಗಳಲಿ
ಅಂದದಿಂದಿರುತಿಹುಳು ಅಭಿಮಾನಿ ತಾನಾಗಿ ವಂದಿಪರನುದ್ಧರಿಸುತ
ಒಂದು ದಳವಾದರೆಯು ಭಕುತಿಯಲಿ ಹರಿಚರಣ-
ದ್ವಂದ್ವಗಳಿಗರ್ಪಿಸಿದ ನರರಿಗೆಣೆಯಿಲ್ಲ ಭವ-
ಬಂಧ ಲಂಘಿಸಿ ದೇವವೃಂದದೊಳು ಸೇರಿ ಸುಖ ಪೊಂದಿ ನಲಿದಾಡುತಿಹರು ॥ ೬ ॥

ಧರೆಯೊಳಗೆ ಒಬ್ಬ ಗಂಡಕಿಯೆಂಬ ವೇಶ್ಯೆ ತಾ
ಪರಿಮಿತವ ಮೀರದಲೆ ಚರಿಸುತಿರೆ ಒಂದು ದಿನ
ಪುರುಷರೊಬ್ಬರು ಬಾರದಿರಲು ಸಿರಿಹರಿ ತಾನು ವರವೃದ್ಧ ರೂಪತಾಳಿ
ಥರಥರನೆ ನಡುಗುತ್ತ ನಿಂದಿರಲು ದ್ವಾರದಲಿ
ಪರಿಚರ್ಯ ಮಾಡುವರು ಪೇಳೆ ಕರೆಯೆಂದಟ್ಟಿ
ಪುರುಷನನು ಕುಳ್ಳಿರಿಸಿ ಪರಿತೋಷ ಮಾಡಿದಳು ಹರಿಮಹಿಮೆಯನು ಸ್ಮರಿಸುತ ॥ ೭ ॥

ಸೆರಗಿನೊಳಗಿದ್ದ ಶತದ್ರವ್ಯವಾಕೆಗೆ ಕೊಟ್ಟು
ವರಶಯ್ಯೆಯಲಿ ತಾನು ಪವಳಿಸಿದ ಸುಮ್ಮನೆಯೆ
ಜರೆಯ ಚಿಹ್ನೆಯ ಮಾಡಿ ಕೆಡಿಸಲಾ ಗೃಹವನ್ನು ಸ್ಮರಿಸಲತಿದೂರವಾಗಿ
ಅರಿಯುತಲಿದೆಲ್ಲವನಸಹ್ಯವನು ಪಡದಲೇ
ಇರುಳು ಈತಗೆ ಎನ್ನ ತನುವೊಪ್ಪಿಸಿಹೆನಾಗೀ-
ಪರಿಯದೆನಗೀ ಋಣವು ಎಂದು ನಿಶ್ಚಯ ಮಾಡಿ ಪರಿಶುದ್ಧಿಯನು ಗೈದಳು ॥ ೮ ॥

ಸುದತಿಯಳ ಮನದೃಢವ ನೋಡಬೇಕೆನುತ ಹರಿ
ಯೊದರಿ ಕೈಕಾಲುಗಳ ಮೃತಿಯೈದ ಪರಿ ತೋರ-
ಲದ ಕಂಡು ಆ ನಾರಿ ಯೋಚಿಸುತ ಸಹಗಮನವಿಧಿ ಮಾಡಿದಳು ಹರುಷದಿ
ಮುದದಿಂದ ತನ್ನ ಮನೆಯೊಳಗಿದ್ದ ಬದುಕು ಧನ-
ವೊದಗಿ ವಿಪ್ರರಿಗಿತ್ತು ತ್ರಿದಶಮೋಹನ ಕರದಿ
ಹುದುಗಿ ನಡೆದಳು ಚಿತೆಗೆ ಹೃದಯ ನಿರ್ಮಲದಿ ಪರಪದಕೆ ಗತಿಯನ್ನು ಸ್ಮರಿಸಿ ॥ ೯ ॥

ಸಿದ್ಧವಾಗಲು ಪತನ ಸಮಯದಲಿ ಸಹಗಮದಿ
ಪೊದ್ದಿ ಚೇಷ್ಟೆಯನು ದೇಹದಿ ತೋರಿ ವದನದಲಿ
ಗದ್ಗದಾ ಮಾತುಗಳ ನುಡಿಯೆ ಸರ್ವರು ಕೇಳಿ ಶುದ್ಧಾತ್ಮಳಹುದೆನ್ನುತ
ಇದ್ದ ಚಿತಿ ಸಂತ್ಯಸೆ ಬಹಳ ಸಂತೋಷದಲಿ
ಹೃದ್ವನಜವರಳಿ ಕೊಂಡಾಡಿದಳು ಪುರುಷನ್ನ
ಮದ್ಧರ್ಮ ಫಲಿಸಿತೆಂದೆನುತಲಾತನ ಸಹಿತ ಸದ್ಮ ಸೇರಿದಳು ಬಂದು ॥ ೧೦ ॥

ಬಲು ವಿಧದಿ ಪೂಜೆಯನು ಮಾಡುತಾತಗೆ ತನ್ನ
ಸುಲಲಿತಾಂಗವ ಸಮರ್ಪಿಸಿ ತನ್ನ ಕುಲಕೋಟಿ-
ಗಳ ಸಹಿತವೀ ಜಗದಿ ಕೀರ್ತಿವಂತಳು ಮತ್ತು ಬಲು ಪುಣ್ಯವಂತಳೆಂದು
ಲಲನೆ ಕೈಮುಗಿದು ನಿಂದಿರಲಾಗ ಹರಿ ತಾನು
ಸುಲಭದಿಂದಲಿ ತನ್ನ ನಿಜರೂಪವನು ತೋರಿ
ಹಲವು ಬಗೆಯಲಿ ನಿನ್ನ ಭಕ್ತಿಗೆ ತೃಪ್ತನಾಗ್ಯೊಲಿದೆ ವರ ಬೇಡೆಂದನು ॥ ೧೧ ॥

ಧನ್ಯಳಾದೆನು ನಾನು ನಿನ್ನ ಕಾಣುತ ಮತ್ತೆ
ಅನ್ಯವರವೇಕೆನಗೆ ಸಿರಿಯರಸ ಸುಖಪೂರ್ಣ
ನಿನ್ನಾಜ್ಞೆ ಮೀರಲಳವಲ್ಲವೊಳಿತೆಲೊ ದೇವ ಮನ್ನಿಸುವುದೀ ಮಾತನು
ವನ್ನಜೋದ್ಭವ ಶಂಭು ನಿನ್ನಿಂದ ಸಹಿತ ಬಂ-
ದೆನ್ನ ಉದರದಿ ಜನಿಸಬೇಕೆಂದು ಪ್ರಾರ್ಥಿಸಲು
ಪನ್ನಂಗಶಯನ ಕೇಳುತಲಾಗಲಾ ವಚನವನ್ನು ಪತಿಕರಿಸಿ ನುಡಿದ ॥ ೧೨ ॥

ಮುಗುಳುನಗೆಯಿಂದಲ್ಲಿ ಮುಂಭಾಗದೊಳಗಿದ್ದ
ಸುಗುಣೆಯನು ನೋಡುತೀ ಬಗೆಯಲ್ಲಿ ನೀನಿರಲು
ಸೊಗಯಿಸದು ಅದರಿಂದ ವಿಗಡದೇಹವ ಬಿಟ್ಟು ಮಗುಳೆ ನೀ ನದಿಯಾಗಲು
ಗಗನಕೇಶನು ಬ್ರಹ್ಮ ಸಹಿತ ನಿನ್ನುದರದಲಿ
ಜಗದೊಳಗೆ ಉದುಭವಿಸಿ ಬಗೆಬಗೆಯಲಿ ನಿನ್ನ
ಮಿಗೆ ಕೀರ್ತಿ ವಿಸ್ತರಿಪೆನಗಣಿತ ಸುಕಾಲದಲಿ ಮೃಗನೇತ್ರೆ ಕೇಳೆಂದನು ॥ ೧೩ ॥

ಪರಮ ನಿರ್ಮಲವಾದ ಗಂಡಕೀನಾಮದಲಿ
ಸರಿಚ್ಛ್ರೇಷ್ಠವೆಂದೆನಿಸೆ ತ್ವರಿತ ತಾನದರೊಳಗೆ
ಕರುಣದಿಂದಲಿ ಉಭಯರಿಂದ ಕೂಡಿಯೆ ಹರಿಯು ಕುರುಹು ಮಾಡಿಟ್ಟುಕೊಂಡ
ಸಿರಿಯ ಸಾಲಿಗ್ರಾಮ ಸ್ವರ್ಣಗರ್ಭವು ಮತ್ತೆ
ಅರಿವುದೈ ಶಿವನಾಭಿಯೆನಿಪ ಪೆಸರುಗಳುಳ್ಳ
ಪರಿಯನ್ನು ತಿಳಿದು ಪೂಜೆಯ ಮಾಡುತಿಹ ನರರ ಸರಿಯಿಲ್ಲವಾವಲ್ಲಿಯು ॥ ೧೪ ॥

ದನುಜ ಜಲಧರ ತಾನು ಘನವಾಗಿ ತಪಗೈದು
ವನಜಪೀಠನ ತೃಪ್ತಿಯನು ಪಡಿಸಿ ಬಲುವಿಧದಿ
ತನಗೆ ಮಾರಕರೊಬ್ಬರಾಗದಿರಲೆಂದೆನುತಲನುನಯದಿ ಕೇಳಲಾಗಿ
ವನಜಸಂಭವನೊಲಿದು ವರವಿತ್ತನಾ ಖಳಗೆ
ತನುವಿನರ್ಧಾಳ ದೋಷ ವಿನಹ ಮತ್ತೊಂದರಿಂ
ಜನುಮಕ್ಕೆ ಎಂದೆಂದು ಹಾನಿತಟ್ಟದು ಪೋಗು ಸನುಮತದಲಿರು ಎಂದನು ॥ ೧೫ ॥

ವರ ಪಡೆದು ಆ ಖಳನು ಇರುತಿದ್ದು ಕ್ರಮದಿಂದ
ಸುರಮನುಜಮುನಿಗಳಿಗೆ ಪರಮಬಾಧೆಗಳ ವಿ-
ಸ್ತರವಾಗಿ ಕೊಡುತಿರಲು ಅಮರಗಣವೆಲ್ಲವಾ ಸರಸಿಜಾಸನಗೊರೆಯಲು
ಸರುವರಿಂದಲಿ ಕೂಡಿ ಹರಿಯ ತಾಣಕೆ ಪೋಗಿ
ಮೊರೆಯಿಡಲು ಕೇಳಿ ಕೇಶವನಿವಗೆ ತಕ್ಕಂಥ
ಪರಿಯ ಚಿಂತಿಸಿ ಇಹೆನು ಕಾಲ ಬಂದಿದೆ ಈಗ ಹರುಷದಲಿ ಪೋಗಿರೆಂದ ॥ ೧೬ ॥

ಇಂದಿರಾರಮಣ ಯದುಬೃಂದದೊಳಗವತರಿಸಿ
ಚಂದಚಂದದಿ ಜಗದ ಮಂದಿಯನು ಮೋಹಿಸುತ
ಮಂದಹಾಸದ ವದನ ಮನ್ಮಥನ ಜನಕ ತಾ ಬಂದು ದನುಜನ್ನ ಸೆಣಸಿ
ಪೊಂದಿ ಯುದ್ಧವ ಮಾಡಿ ಸಾಗದಿರಲಾಗವನ
ಮಂದಿರಕೆ ತಾ ಪೋಗಿ ಅವನ ರೂಪವ ಧರಿಸಿ
ವೃಂದಾವನಿಯ ಕೂಡಿ ವ್ರತಭಂಗ ಮಾಡೆ ಮತ್ತೊಂದು ಪರಿಯಲಿ ತಿಳಿದಳು ॥ ೧೭ ॥

ಕಪಟವೇಷದವ ನೀನಾವನೋ ಪೇಳುವುದು
ಗುಪಿತರೂಪದಲೆನ್ನ ಕೂಡಿದವನೆಂದೆನಲು
ಚಪಲತೆಯ ಮಾತುಗಳ ಪೇಳಿ ಆಮೇಲೆ ನಿಜರೂಪವನೆ ಧರಿಸಿ ನಿಂದ
ಅಪಹಾಸ್ಯವನು ಮಾಡಿ ಎನ್ನ ವ್ರತ ಕೆಡಿಸಿದ್ಯೆ
ಸುಪತಿಯನು ನೀಗುವೋ ತೆರನ ಮಾಡಿದೆಯಾಗಿ
ಶಪಿಸುವೆನು ನಾ ನಿನ್ನ ಪಾಷಾಣವಾಗೆಂದು ಶಪಥಪೂರ್ವಕ ನುಡಿದಳು ॥ ೧೮ ॥

ಸತಿಯು ಈ ಪರಿ ನುಡಿದು ನತಳಾಗಿ ಹರಿಸಮುಖ
ತುತಿಗೈದು ಎನಗೇನು ಗತಿಯೆಂದು ಬಿನ್ನೈಸೆ
ರತಿಪತಿಯ ಪಿತನಾಡಿದತಿಹರುಷದಿಂದ ಮನಖಿತಿಯು ದೂರವಾಗುವಂತೆ
ಪತಿವ್ರತೆಯ ಕೇಳು ನಿನಗತಿಶಯದ ಪದವೀವೆ
ಕ್ಷಿತಿಯೊಳಗೆ ನೀನು ಶ್ರೀತುಲಸಿಪೀಠಳು ಆಗಿ
ಮತವಿಹಿತವಾದ ಪೂಜೆಯಗೈಸಿಗೊಳ್ಳುತಲಿ ಅತಿಶಯದಲಿರು ಎಂದನು ॥ ೧೯ ॥

ಈ ವಿಧದಿ ವರವಿತ್ತ ದೇವದೇವೇಶನಿಗೆ
ದೇವಿ ಬಹುಭಕ್ತಿಯಲಿ ಸಾಷ್ಟಾಂಗವೆರಗುತಲಿ
ದೇವಪಥವನು ಸೇರಿ ಸರ್ವಸ್ಥಳಂಗಳಲಿ ತಾ ಪ್ರಾಪ್ತಳಾಗಿ ನಿಂದು
ಶ್ರೀವಲ್ಲಭನ ದಿವ್ಯನಾಮವನು ನೆನೆನೆನೆದು
ಪಾವನವ ಮಾಡುವಳು ತುಲಸಿಸಹಿತದಿ ಜಗವ
ಕೋವಿದರು ಇಂತೆರೆಡು ಭಾವವನು ತಿಳಿದು ಹರಿಸೇವೆ ಮಾಳ್ಪರೆ ಧನ್ಯರು ॥ ೨೦ ॥

ಇನಿತು ಬಗೆಯಲಿ ಹರಿಯ ಮಹಾಮಹಿಮೆ ಕೊಂಡಾಡಿ
ತನುವುಬ್ಬಿ ತುಲಸಿದಳಗಳ ತಂದು ಅರ್ಚಿಸುವ
ಮನುಜರಿಗೆ ಎಣೆಯಿಲ್ಲ ಮಹಿಯೊಳಗೆ ಆವಲ್ಲಿ ಸನುಮತವು ಹರಿಯ ಪುರಕೆ
ಅನಿಮಿಷರು ಅನುದಿನವು ಇವರ ಕರವನು ಪಿಡಿದು
ಘನಭವಾಬ್ಧಿಯಲಿಂದ ಕಡೆಗೆ ತೆಗೆವೆವು ಎನುತ-
ಲೆನೆಗೆ ತನಗೆಂದು ನಲಿನಲಿಯುತಿಚ್ಚೈಸುವರು ತೊಲಗದಲೆ ಕೂಡೆ ಇಹರು ॥ ೨೧ ॥

ತಾಮಸಾಗ್ರಣಿಯುಗದಲೀ ಮಹಾಸಂಸಾರ
ಧೀಮಂತ ಜನರಿಗೆ ಪ್ರೇಮದಿಂ ಹರಿಯಿತ್ತ
ಕಾಮಿಸುವರಿಗೆ ದೇವಸ್ತೋಮ ತಲೆದೂಗುತಲಿ ಭೂಮಿಯಲಿ ಜನನವನ್ನು
ನೇಮವಿದು ಇದರೊಳಗೆ ಅಲ್ಪ ಮಾತ್ರದ ಪುಣ್ಯ
ವಾ ಮಹಾಫಲವಕ್ಕು ಪಾಪವಲ್ಪಹುದೆಂದು
ಸೀಮಾಧಿಪತಿ ಕಲಿಯ ಬಿಟ್ಟಪರಿ ತಿಳಿದು ಸುಖಧಾಮ ಹರಿಯನು ಭಜಿಪರು॥ ೨೨ ॥

ತನುಮನವು ಮನೆಧನವು ಅನವೃಷ್ಟಿ ಅತಿವೃಷ್ಟಿ
ಅನಲವಾಯುವು ಮಿಕ್ಕದೇನೇನು ಕ್ಲೇಶಗಳು
ಎನಿತೆನಿತು ಬಂದರೂ ತಪವೆನುತಲರ್ಪಿಸುತಲನುಸರಿಸಿ ವಿಷಯಗಳನು
ದಿನದಿನದಿ ನೆನೆನೆನೆದು ತನ್ನೊಳಗೆ ಇಪ್ಪಂಥ
ಅನಿಮಿಷರ ಒಡೆಯನಿಂಗೆನುತ ಕೊಡುತಾದರದಿ
ಕನಸಿನಾ ತೆರನಂತೆ ಸಂಸಾರವೆಂದೆನುತ ಸನುಮತದಿ ಚರಿಸಬೇಕು ॥ ೨೩ ॥

ಹೀಗೆ ಸುಖದೊಳಗಿದ್ದು ಹೇಗೆಂದು ಒಬ್ಬರಿಗೆ
ಬಾಗಿ ಬೇಡದೆ ದುಷ್ಟ ಭೋಗಗಳ ಬಯಸದಲೆ
ನಾಗಾರಿವಾಹನನ ನೇಮದಲಿ ಪೂಜಿಸುತ ಭಾಗವತಜನರೊಳಿದ್ದು
ಶ್ರೀಗುರುಗಳಲಿ ಸರ್ವಪೌರಾಣಗಳ ಕೇಳಿ
ಜಾಗರೂಕತನಾಗಿ ಜಡಚೇತನಂಗಳಲಿ
ಭಾಗೀರಥೀಪಿತನ ಪಾದಯುಗ್ಮವ ಸ್ಮರಿಸಿ ನೀಗಿ ಗತಿ ಪಡೆಯಬೇಕು ॥ ೨೪ ॥

ವಾಣಿಯರಸನ ಪಿಡಿದು ಸ್ಥಾಣ್ವಂತ ಸರ್ವಜಗ
ಶ್ರೀನಿವಾಸನ ಕ್ರೀಡೆಸ್ಥಾನ ಕೇವಲ ಮತ್ತೆ
ಆ ನಿರ್ಜರರ ಕೂಡೆ ಆಡುತಿಹನನುದಿನವು ಮಾನಿನಿಗೆ ಮುದವೀಯುತ
ಜ್ಞಾನಿಗಳು ಇದ ತಿಳಿದು ಏನಾದರೂ ಹರಿಯ
ಧೀನವೆಂದಿರುತಿಹರು ಸಾನುಕೂಲನು ಸರ್ವ
ಜ್ಞಾನಾಂಬುನಿಧಿ ವೇಣುಗೋಪಾಲವಿಟ್ಠಲನು ತಾನೊಲಿವ ತವಕದಿಂದ ॥ ೨೫ ॥

*****

## ೨೦. ಶ್ರೀವರಾಹ ತಿಮ್ಮಪ್ಪದಾಸರ ಕೃತಿ[೯೦]

ಮಂಗಳ ಜಯ ಜಯ ಮಂಗಳ ತುಲಸಿಗೆ
ಮಂಗಳ ಜಯ ಜಯ ರಂಗನಾಯಕಗೆ ॥ ಪ ॥

ವಾರಿಧಿಮಥನದಿ ವಾರಿಜನಾಭನ
ವಾರಿಜನೇತ್ರನ ವಾರಿಗಳಿಂದ
ತೋರಿದ ತುಲಸಿಯು ಸೇರಿದಳೆಲ್ಲ
ಶರೀರವ ಪಾವನ ಮಾಡಬೇಕೆನುತ ॥ ೧ ॥

ತುಲಸಿಯ ನಾಮವ ಬೆಳೆಸಿಯೆ ಲೋಕವ
ಬಳಸಿಕೊಂಡಿರುವೆನು ಎನುತಲೆ ಬಂದು
ಕಳಿಸಿದ ಮನುಜರ ಉಳಿಸಬೇಕೆನುತಲೆ
ಕಳಸದ ತೆರನಂತೆ ಉದಿಸಿದಳು ತುಲಸಿ ॥ ೨ ॥

ಸಾಲಿಗ್ರಾಮವು ಇಲ್ಲದಾತನ ಮನೆಯೊಳು
ಕಾಲೂರಿ ನಿಲ್ಲಳು ಹರುಷದೊಳಿವಳು
ಪಾಲಿಪ ಹರಿಶಿಲೆಯಿರುವಂಥ ಸ್ಥಳದೊಳು
ಓಲಗವಾಗಿಯೆ ತೋರುತ್ತಲಿಹಳು ॥ ೩ ॥

ಎಲ್ಲಿಯು ತುಲಸಿಯು ಅಲ್ಲಿಯೆ ಶ್ರೀಹರಿ
ವಲ್ಲಭೆ ಸಹವಾಗಿ ಇರುತಿಪ್ಪ ಬಿಡದೆ
ಫುಲ್ಲನಾಭನು ಕೃಷ್ಣ ಆಡಿದ ಪರಿಯನು
ಗೊಲ್ಲತಿಯರು ಕಂಡು ನಾಚಿ ಹಿಗ್ಗಿದರು ॥ ೪ ॥

ಬಂದಳು ಭಕ್ತರ ಮಂದಿರದೆಡೆಗೆ ಗೋ-
ವಿಂದನ ಕಂಡಿರೆ ಎಂದು ಕೇಳಿದಳು
ವೃಂದಾವನದೊಳು ನಿಂದಳು ತುಲಸಿಯು
ಚಂದವು ನಿಮ್ಮಯ ಭವನದೊಳೆನುತ ॥ ೫ ॥

---

೯೦ ತುಲಸಿಯಿರುವಲ್ಲಿ ಶ್ರೀಹರಿಯು ನೆಲೆಸಿರುವನು. ತುಲಸಿಯ ಮೃತ್ತಿಕೆಯಿಂದ ಸ್ನಾನಮಾಡುವುದು ಸಕಲ ದುರಿತನಾಶಕ. ಕಾರ್ತಿಕಮಾಸದಲ್ಲಿ ತುಲಸಿಯಿಂದ ಶ್ರೀಹರಿಯನ್ನು ಪೂಜಿಸುವುದು ಅತ್ಯಂತ ಶ್ರೇಷ್ಠ. ಯಾವುದೇ ದಾನ, ಪೂಜೆ, ತರ್ಪಣ ಮೊದಲಾದವುಗಳಲ್ಲೂ ತುಲಸಿಯು ಅಗತ್ಯವಾಗಿ ಇರಲೇಬೇಕು.

ಗೋವಿನ ತುಪ್ಪದಿ ದೀವಿಗೆಯಿರಿಸಿಯೆ
ಭಾವ ಶುದ್ಧತ್ವದಿ ಬಲವಂದರವಳು
ಕಾವಲು ಪೋಗಿಯೆ ಕರ್ಣದ ಒಳಗಿದ್ದು
ಜೀವಿತ ಮುಕ್ತಿಯ ತೋರುವೆನೆನುತ ॥ ೬ ॥

ಸರ್ವತೀರ್ಥಗಳನ್ನು ಮೂಲದಿ ಧರಿಸಿಯೆ
ಸರ್ವದೇವರ್ಕಳ ಮಧ್ಯದೊಳಿರಿಸಿ
ಸರ್ವವೇದಂಗಳ ಶಿರದೊಳು ಧರಿಸಿಯೆ
ಸರ್ವಕಾಲಕೆ ನಿರ್ವಹಿಸುತಿಹಳು ॥ ೭ ॥

ಅಂಗಳದೊಳಗಿಹ ಮಂಗಳಮಹಿಮಗೆ
ರಂಗುವಲ್ಲಿಯನಿಕ್ಕಿ ಶೃಂಗಾರವಾಗಿ
ಸಾಂಗದೊಳಿಹ ಒಂದು ಮಂಗಳ ಬರೆದರೆ
ಬಂಗಾರ ಮನೆಯನ್ನು ತೋರುವಳಿವಳು ॥ ೮ ॥

ಮೂಲದ ಮೃತ್ತಿಕೆ ಮೂಲ ಪಣೆಯೊಳಿಟ್ಟು
ಕಾಲದಿ ಸ್ನಾನವ ಮಾಡಿದ ನರರು
ಭಾಳವಾಗಿಹ ಅಘರಾಶಿಯನೆಲ್ಲವ
ಚಾಳಿಸಿ ಕಳೆವರು ಕಾಲನ ಗೆಲಿದು ॥ ೯ ॥

ತನ್ನ ಕಾಷ್ಟವ ತಂದು ಚಿನ್ನದಿ ಸುತ್ತಿಸಿ
ಕರ್ಣದಿ ಧರಿಸಿದ ಮನುಜರಿಗೆಲ್ಲ
ಉನ್ನತ ಪದವಿಯ ತೋರುವೆನೆನುತಲೆ
ಪನ್ನಗಶಯನಗೆ ಪ್ರೀತಿಯಾಗಿಹಳು ॥ ೧೦ ॥

ಉತ್ತಮವಾಗಿಹ ಕಾರ್ತಿಕ ಮಾಸದಿ
ಸುತ್ತ ದೀವಿಗೆಯಿಟ್ಟು ಪೂಜಿಸಲಿವಳು
ಅರ್ತಿಯಿಂದಲೆ ನಲಿನಲಿಯುತ್ತ ದೇವಿಯ
ಕರ್ತನ ಕೀರ್ತನೆ ರಚಿಸುವ ಮನದಿ ॥ ೧೧ ॥

ಬ್ರಾಹ್ಮಮುಹೂರ್ತದಿ ಸ್ನಾನ ತರ್ಪಣವನ್ನು
ನಿರ್ಮಲತೀರದಿ ತಿದ್ದಿಯೆ ಕೊಂಡು
ಧರ್ಮಕ್ಕೆ ಯೋಗ್ಯಳ ಪೂಜೆಯ ಮಾಡಲು
ಕರ್ಮಬಂಧಗಳೆಲ್ಲ ಕಡಿದುಕೊಳುವುದು ॥ ೧೨ ॥

ಸಾಯಂಕಾಲದಿ ದೀವಿಗೆ ಹಚ್ಚಲು
ಮಾಯಗಳೆಲ್ಲವು ಮರುಗಿ ಪೋಗುವುವು
ದಾಯವಾಗಿಯೆ ಸುರರಾಯನೊಳರ್ಥವ
ಬೇವಿನವರು ಕಂಡು ಹೊರಸಾರುತಿಹರು ॥ ೧೩ ॥

ಸರ್ವದಾನಗಳನ್ನು ಸರ್ವಪೂಜೆಗಳನ್ನು
ಸರ್ವರು ಋಷಿಪಿತೃತರ್ಪಣಗಳನು
ಸರ್ವಥಾ ತುಲಸಿಯ ತಪ್ಪಿಸಬೇಡೆಂದು
ನಿರ್ವಾಹವಾಗಿಯೆ ಶ್ರುತಿಯು ಪೇಳಿದುದು ॥ ೧೪ ॥

ಅಂಗದೊಳಗಿಹ ಮಂಗಳಮಹಿಮಗೆ
ಸಾಂಗದೊಳಿದನು ಪಠಿಸಿ ಪೇಳಿದರೆ
ಗಂಗೆ ಗೋದಾವರಿ ತುಂಗಭದ್ರೆಯ ಮಿಂದು
ರಂಗನ ಕ್ಷೇತ್ರವ ನೋಡಿದ ಫಲವು ॥ ೧೫ ॥

ಅಂಗಳ ತುಲಸಿಯ ದಿನ ದಿನದಿ ತಾವೆದ್ದು
ಹಿಂಗದೆ ನೋಳ್ಪ ಶ್ರೀರಂಗನ ಭಕ್ತರಿಗೆ
ಬಂಗಾರಗಿರಿವಾಸ ವರಾಹತಿಮ್ಮಪ್ಪನ
ಮಂಗಳಮೂರ್ತಿಯ ನೋಡಿದ ಫಲವು ॥ ೧೬ ॥

* * *

## ೨೧. ಶ್ರೀಶ್ರೀದವಿಠಲದಾಸರ ಕೃತಿ[೯೧]

### ಶ್ರೀತುಲಸೀಪಾರಿಜಾತ

ಶ್ರೀತುಲಸಿಯ ಸೇವಿಸುವಾ ಬಾರೆ ಬ್ಯಾಗನೆ ನೀರೇ ನಮ್ಮಾ ಸಾಕುವರಾರೇ ॥ ಪ ॥

ಇದೇ ಸಮಯದಿ ವೈಷ್ಣವಾ ಜನ್ಮ ಬಂದು
ಸದಾ ಸೇವಿಸು ತುಲಸೀ ದೊರಕುವಳಲ್ಲವೆಂದು

---

೯೧ ತುಲಸಿಯ ಮಹಿಮೆಯನ್ನು ಪಾರಿಜಾತದ ರೂಪದಲ್ಲಿ ಬಗೆಬಗೆಯಾಗಿ ವರ್ಣಿಸಿ, ಪ್ರಾಣಾಹುತಿಗಳಿಗೆ, ತೀರ್ಥಸೇವನೆಗೆ ಒಂದೊಂದು ತುಲಸಿಯ ದಳಗಳು ಅತ್ಯಗತ್ಯ. ತುಲಸಿಯ ಬಳಿಗೆ ಪಾದರಕ್ಷೆಯನ್ನು ಧರಿಸಿ ಹೋಗಕೂಡದು. ಹಾಗೆ ನಡೆದಲ್ಲಿ ಮ್ಲೇಚ್ಛ ಜನ್ಮ ನಿಶ್ಚಿತ. ತುಲಸಿಯು ಪುಂಡರೀಕಾಕ್ಷನಾದ ಶ್ರೀಹರಿಯ ವಲ್ಲಭೆ. ಈ ಭಾವನೆಯಿಂದ ಆರಾಧಿಸುವವರಿಗೆ ಶ್ರೀದವಿಠ್ಠಲನಾದ ಶ್ರೀಹರಿಯು ಅಪಾರ ಸಂಪತ್ತನ್ನು ನೀಡಿ ಕಲಿಮನವನ್ನು ಪರಿಹರಿಸಿ ಅನುಗ್ರಹಿಸುವನು.

ಪದೆ ಪದೇ ನಮೊ ಎಂದು ಸ್ತೋತ್ರವನು ಮಾಡೆ
ಗೈದೋಣು ಜರಾದಿಗಳ ಚನ್ನಾಗಿ ನೋಡೆ ॥ ೧ ॥

ಬೃಂದಾವನೊಳು ಮೆರೆವೋಳು ಹತ್ತೆ ಗರಿಯೋಳು ಸಜ್ಜನರಾ ಪೊರೆವೋಳು
ಮಂದಭಾಗ್ಯರಿಗೆ ದೊರೆಯಾಳು ಮುದ್ದು ಸುರಿಯಾಳು ಹೊಂದಿದವರ ಮರೆಯಾಳು
ಕುಂದುಕೊರತೆಗಳನೆಣಿಸಾಳು ನಮ್ಮಾ ದಣಿಸಾಳು ದೂಷಕರ ಗಣಿಸಾಳು
ಗಂಧಕುಸುಮದನುಲೇಪಾಳು ಸುಪ್ರತಾಪಾಳು ಪಾವನ್ನಸ್ವರೂಪಾಳು ॥ ೨ ॥

ನಿರಾಲಸ್ಯದಿಂದಿವಳ ಮಾಹಾತ್ಮ್ಯಶ್ರವಣಾ
ಗುರುಹಿರಿಯರಾ ಮುಖದಿ ನೀ ಮಾಡೋ ಧ್ಯಾನಾ
ಪರಂಪರಾ ಸದಾಚಾರಸಂಪನ್ನಳಾಗಿ
ನೆರೆನೀತಗಂಡನೂ ನಿತ್ಯಾವಿಯೋಗಿ ॥ ೩ ॥

ಕಾಮಧೇನು ಕಲ್ಪತರೂವಿಂತಾ ಮಣಿಗಳಾಕಿಂತಾ ಕಾಮಿತಾ ಕೊಡುವಂಥಾ
ಸಾಮರ್ಥ್ಯ ದಾರಿಗೊಬ್ಬಾರ್ಗಿಲ್ಲಾ ಕುಬೇರನೂ ಬಲ್ಲಾ ಕರ್ಣ ನಾಚೀದನಲ್ಲಾ
ಸಾಮಾನ್ಯೇರೇ ಸುರಸತಿಯಾರು ಪತಿವ್ರತೆಯಾರು ಪೂಜಿಸಿ ಪ್ರಮಥಿಯಾರು
ಕ್ಷೇಮಕಲ್ಯಾಣವ ಪಡೆವಾರು ಪೆಸರ್ಬಡವೋರು ತಾಪತ್ರಯ ತಡೆವೋರು ॥ ೪ ॥

ಪ್ರಾತಃಕಾಲದಿ ತನ್ನ ನೋಡಲ್ಕೇ ತಿಳಿದು
ಮಾತಾಪಿತೃಮುಂತಾದ ದ್ರೋಹಂಗಳಳಿದೂ
ಆತಂಕಭಯವಾ ಕೇಳು ಕೊಟ್ಟು ಕೈವಿಡಿದಲ್ ಯಮನಾ
ದೂತರ್ಭೀತಿ ಯಾಕವಗೆ ದುರಿತೋಪಶಮನಾ ॥ ೫ ॥

ಕಂಡಾರೆ ಕುಲಕೋಟಿಪಾವನಾ ವೃಂದಾವನಾ ದಿವಿಯೋಳಿಂದ್ರಭವನಾ
ಪಾಂಡುರಂಗ ಕುರುಕಾಶೀಗೆ ವಾರಣಾಸೀಗೆ ಹೆಚ್ಚು ಪುಣ್ಯರಾಶೀಗೆ
ಅಂಡೋಲಿಂದಭರಾರಾ ಹೆಂಗಾಳಾ ಸಹಿತಂಗಾಳಾ ಸೇರಿಕೊಂಡು ಮಂಗಾಳಾ
ಪುಂಡರೀಕಾಕ್ಷ ಭಜಿಸೋರು ನಿತ್ಯಸ್ತುತಿಸೋರು ಎಂದೆಂದು ತ್ಯಜಿಸಾರೂ ॥ ೬ ॥

ಕ್ರಮಾಂಗಾರಕಾದಿತ್ಯ ಶುಕ್ರವಾರಾ ಅಮಾ ಪೌ-
ರ್ಣಿಮಾ ದ್ವಾದಶೀ ನಿರ್ವಿಕಾರಾ
ರಮಾವಿಷ್ಣಳಾ ದಿನದೊಳಕ್ಷರಳು ಕಂಡ್ಯಾ
ಕ್ಷಮಾರಹಿತನೆ ಛೇದಿಸಿ ಕೆಡುವಿ ದಿಂಡ್ಯಾ ॥ ೭ ॥

ತುಲಸಿಯಿಲ್ಲದ ಪೂಜಿಗೆ ನಿಚ್ಚಾ ಶ್ರೀಹರೀ ಮೆಚ್ಚಾ ಮಾಡಿ ದಣಿವೋನು ಹುಚ್ಚಾ
ಥಳಥಳಿಸುವ ಕೌಸ್ತುಭಾಗಿಂತ ಶ್ರೇಷ್ಠಾಳು ಎಂದು ಒಡಂಬಟ್ಟೀಹನಂದು
ದಳ ಪತ್ರ ಕಾಷ್ಠ ಮೃತ್ತಿಕಿ ಮೂಲಾ ಪಾವನಶೀಲಾ ಅರ್ಚಿಸೆ ಲಕ್ಷ್ಮೀಲೋಲಾ
ಒಲಿದಾತನಾ ಪೂಜೆಗೊಳುವಾನೂ ಕಲಿಮಲವಾನೂ ಖಂಡಿಸಿ ನಲಿವೋನು ॥ ೮ ॥

ಮೂಲಾಧಾರದಿ ಮೂರುವರೆ ಕೋಟಿತೀರ್ಥಾ
ಮ್ಯಾಲೆ ವಪ್ಪುವಾ ಶ್ರುತಿಗಳ ಯಥಾರ್ಥಾ
ಕೇಳಾ ಮಧ್ಯದೊಳಖಿಳ ನಿರ್ಜರರು ಎಲ್ಲೀ
ನೀಲೋತ್ಪಳದಳಶ್ಯಾಮ ಸನ್ನಿಹಿತನಲ್ಲೀ ॥ ೯ ॥

ಸ್ನಾನಾವ್ಯಾತಕೆ ಸಂಧ್ಯಾವ್ಯಾತಕೆ ಜಪತಪಾವ್ಯಾಕೆ ದಾನಾಧರ್ಮಂಗಳ್ಯಾಕೆ
ನಾನಾಜನ್ಮಂಗಳು ಯಾಕಿನ್ನು ಸಾಕು ಸಾಕಿನ್ನು ಮುಕ್ತಿಯೆ ಬೇಕಿನ್ನು
ಜ್ಞಾನಭಕ್ತಿವೈರಾಗ್ಯಾವಾ ಸೌಭಾಗ್ಯಾವಾ ಶರಣರ್ಗೆ ಯೋಗ್ಯಾವಾ
ತಾನಾಗಿ ಕರದು ಕೊಡುವಳಲ್ಲೇ ಎಂಬೋದು ಬಲ್ಲೇ ಎನ್ನ ಕರದಾರಾ ಕೊಳ್ಳೆ ॥ ೧೦ ॥

ತುಲಸೀ ಇಲ್ಲದಾ ವನವು ಕಾನನವು ನಿತ್ಯಾ
ತುಲಸೀ ಇಲ್ಲದಾ ಮನಿಯು ಸ್ಮಶಾನ ಸತ್ಯಾ
ತುಲಸೀ ಎನ್ನದಾ ನರನು ವಾನರನು ನೋಡೋ
ತುಲಸೀ ತುಲಸೀ ಶ್ರೀತುಲಸೀ ಎಂದವನೆ ಪ್ರೌಢಾ ॥ ೧೧ ॥

ಕಳೆಯ ಕಿತ್ತುವರ ಕಲ್ಮಷಾ ಕಿತ್ತಿ ಹಾಕುವಾಳೆತ್ತಿ ಕೈಯಾ ಮುಗಿಯೇ ಬೆನ್ಹತ್ತಿ
ಸುಳಿಯೊಳು ಸುತ್ತಾ ಸಂಚಿತಾ ವೃಂದಾ ಪ್ರದಕ್ಷಿಣೇಯಿಂದಾ ಆಗಾಮಿಯಾಲಿಂದಾ
ತಿಳಿ ನೀರೆರದ ತಂಪಿಗೆ ಎಷ್ಟು ಪಿತೃಗಳಿಗಿಷ್ಟು ಸಂತೃಪ್ತಿಯ ಕೊಟ್ಟು
ಕಳೆವಳಜ್ಞಾನಾಂಧಕಾರಾ ದೀಪ ಉಜ್ವಾಲಾ ಹಚ್ಚಲು ವಾರಂವಾರಾ ॥ ೧೨ ॥

ನಮೋ ನಮೋ ಭಾರ್ಗವಿ ಭೂರಿ ಭಕ್ತೇಷ್ಟವರದೇ
ನಮೋ ವೈಷ್ಣವೇ ವಿಮಲಮಾಂಗಲ್ಯಶರಧೇ
ನಮೋ ಷಡ್ಗುಣೈಶ್ವರ್ಯಸಂಪೂರ್ಣಸದನೆ
ನಮೋ ಎಂದರೆ ಒಲಿಯಳೇನಬ್ಜವದನೆ ॥ ೧೩ ॥

ಧನಧಾನ್ಯಂಗಳಭಿವೃದ್ಧಿಯಾ ವಿದ್ಯಾಬುದ್ಧಿಯಾ ಭೂತಳದಿ ಪ್ರಸಿದ್ಧಿಯಾ
ಧನಭೂಷಣವಾಹನಾವಸ್ತ್ರಾ ಚಾಮರಾಛತ್ರಾ ಆಲಯ ಸುವಿಚಿತ್ರಾ

ಅನುಕೂಲವಾದಂಥಾ ಮಿತ್ರಾರಾ ಸತ್ಪುತ್ರರಾ ಪರಿಜನಾಗೋತ್ರರಾ
ತನು ದಾರಧ್ಯಾದಿಗಳಿನ್ನು ಸಂಪಾದವನು ನೀಡುವಾಳಿನ್ನು ಮುನ್ನು ॥ ೧೪ ॥

ಪ್ರಾಣಾಹುತಿಗಳಿಂದ್ಯೆದು ತೀರ್ಥದೋಳು ಮೂರಾ
ಜಾಣೇ ಮೆಲಲು ಒಂದೊಂದುಂಡು ಮೇಲಾಗಿ ಮೂರಾ
ಶ್ರೀನಿರ್ಮಾಲ್ಯ ಶ್ರೀತುಲಸಿದಳ ಆರು ಬೇಗಾ
ಆನಾಭಿಯೊಳಿಡು ಕಿವಿಯೊಳಿಡು ಶಿರದೊಳೀಗಾ ॥ ೧೫ ॥

ಎಲ್ಲಿದ್ದಾರು ಪೊಂಗಳಸೀಗೆ ಪುಣ್ಯಬೆಳಸೀಗೆ ಕುಂದೇನು ತುಲಸೀಗೆ
ಅಲ್ಲಿಗೆ ಪಾದತ್ರಾಣಾವ ಮೆಟ್ಟೀ ಪೋಗಾದಿರು ಕೆಟ್ಟೀ ಮ್ಲೇಂಛಜನ್ಮ ಬೆನ್ನಟ್ಟೀ
ನಿಲ್ಲೀಸುವಾದು ಹೆಜ್ಜೇ ಹೆಜ್ಜೀಗೆ ನಿರ್ಲಜ್ಜಿಗೇ ತುರಸಿದಂತೆ ಖಜ್ಜಿಗೇ
ಪಲ್ಲವಿಪುದು ಪಾಪದ ಬೇರು ಕೀಳುವರಾರು ಮತ್ತೊಬ್ಬಾರ ತೋರು ॥ ೧೬ ॥

ಒಂದೇ ರೂಪಳಲ್ಲಾಕಿ ಧನ್ವವಂತರೀಯಾ-
ನಂದಾಬಾಷ್ಪದಿ ಜನಿಸಲಾ ಸುಂದರೀಯಾ
ಒಂದೇ ನಿಮಿಷ ನಿನ್ನಗಲಿ ಇರಲಾರೆನೆನಲು
ಅಂದೇ ನೆರದನು ಶ್ರೀಕೃಷ್ಣ ಕಾರುಣ್ಯಸಿಂಧು ॥ ೧೭ ॥

ಅನಿರುದ್ಧಾದಿ ಮೂರುತಿಗಳು ಮಂಜರಿಯೊಳು ಜಡಜೀವಿ ಮಾನಿಯಳು
ವನಜಾಕ್ಷನ ವಲ್ಲಭಿ ಎಂದೂ ಮುನಿಜನರಿಂದೂ ಪೇಳುವರು ಎಂದೆಂದೂ
ತನಗೆ ತಕ್ಕವಳೆನುತಲಿ ಶ್ರೀದಾವಿಠಲನು ಪಾದಾ ಮತ್ತೆ ಕೊಟ್ಟು ಬೇಕಾದಾ
ಘನಸಂಪದವನ್ನು ಕೊಡುವಾನು ಕಲಿಮಲವನ್ನು ಖಂಡಿಸಿ ನಲಿವೋನು ॥ ೧೮ ॥

★ ★ ★

## ಪರಿಶಿಷ್ಟ - ೦೫

# ತುಲಸೀ ವ್ರತ

ಪದ್ಮಪುರಾಣದಲ್ಲಿ ತುಲಸೀ ವ್ರತ ಎಂಬುದಾಗಿ ತುಲಸೀ ಆರಾಧನೆಗಾಗಿ ವಿಶೇಷ ವ್ರತವೊಂದು ವಿಹಿತವಾಗಿದೆ. ಹಿಂದೆ ವ್ರತಂತರ ಕಲ್ಪದಲ್ಲಿ ರಾಜನಾದ ಪ್ರಜಾಪತಿಗೆ ಚಂದ್ರಾ ಎಂಬ ಹೆಸರಿನ ಮಹಾಸಾಧ್ವಿಯಾದ ಪತ್ನಿಯಿದ್ದಳು. ಸಕಲ ಕಾಮನೆಗಳನ್ನು ಈಡೇರುಸುವಂತಹ ಈ ತುಲಸೀ ವ್ರತವನ್ನು ಅವಳು ಆಚರಿಸಿದಳು. ಧರ್ಮ, ಕಾಮ, ಅರ್ಥ ಹಾಗೂ ಮೋಕ್ಷಗಳನ್ನು ನೀಡುವಂತಹ ಈ ವ್ರತವು ತ್ರಿರಾತ್ರವ್ರತವಾಗಿದೆ. ಈ ತುಲಸೀ ವ್ರತವನ್ನು ಶ್ರವಣಮಾಡುವವರ ಜೀವನವು ಸಹ ಸಾರ್ಥಕವೆನ್ನಿಸುವುದು. ಕಾರ್ತೀಕಮಾಸಕ ಶುಕ್ಲ ಪಕ್ಷದಲ್ಲಿ ನವಮೀಯಂದು ವಿದ್ಯುಕ್ತವಾಗಿ ಈ ವ್ರತವನ್ನು ಸಂಕಲ್ಪಿಸಬೇಕು. ಮೂರು ದಿನವೂ ಜಿತೇಂದ್ರಿಯನಾಗಿ ನೆಲದ ಮೇಲೆಯೇ ಮಲಗಬೇಕು. ಮೂರು ದಿವಸ ತುಲಸೀ ವನದ ಬಳಿಯಲ್ಲಿಯೇ ಮಲಗಬೇಕು. ಪ್ರತಿನಿತ್ಯ ಮಧ್ಯಾಹ್ನದ ಸಮಯದಲ್ಲಿ ನದಿ ಮೊದಲಾದ ನಿರ್ಮಲ ಜಲದಲ್ಲಿ ಸ್ನಾನವನ್ನು ಮಾಡಿ ವಿದ್ಯುಕ್ತವಾಗಿ ದೇವತೆಗಳಿಗೂ, ಪಿತೃಗಳಿಗೂ ತರ್ಪಣವನ್ನು ನೀಡಬೇಕು. ಲಕ್ಷ್ಮೀ ಸಮೇತನಾದ ನಾರಾಯಣನ ಸುವರ್ಣ ಪ್ರತಿಮೆಯನ್ನು ಮಾಡಿಸಬೇಕು. ಲೋಭವನ್ನು ಬಿಟ್ಟು ಮುಕ್ತ ಹಸ್ತದಿಂದ ಹಣವನ್ನು ವೆಚ್ಚ ಮಾಡಬೇಕು. ಶುಭ್ರ ವರ್ಣದ ಎರಡು ಪಿತಾಂಬರಗಳನ್ನು ಸಮರ್ಪಿಸಬೇಕು. ಪುಣ್ಯಾಹವಾಚನ, ನವಗ್ರಹ ಪೂಜೆಯನ್ನು ವಿದ್ಯುಕ್ತವಾಗಿ ಮಾಡಿ ಚರುವನ್ನು ಸಿದ್ಧಪಡಿಸಿಕೊಂಡು ಹೋಮವನ್ನು ಮಾಡಬೇಕು. ದ್ವಾದಶೀಯಂದು ದೇವದೇವನಾದ ಶ್ರೀಹರಿಯನ್ನು ವಿಶೇಷವಾಗಿ ಪೂಜಿಸಬೇಕು. ಶುದ್ಧವಾಗಿ ಕಲಶವನ್ನು ವಿದ್ಯುಕ್ತವಾಗಿ ಸ್ಥಾಪಿಸಿ ಅದರಲ್ಲಿ ಪಂಚರತ್ನಗಳನ್ನು, ಪಲ್ಲವಗಳನ್ನು, ಓಷಧಿ ಗಳನ್ನು ಇರಿಸಬೇಕು. ಅದರ ಮೇಲೆ ಲಕ್ಷ್ಮೀಸಮೇತನಾದ ನಾರಾಯಣನನ್ನು ಆವಾಹಿಸಿದ ಕಲಶವನ್ನು ತುಲಸೀ ವೃಕ್ಷದ ಬುಡದಲ್ಲಿ ವೇದಮಂತ್ರ, ಪುರಾಣಮಂತ್ರಗಳನ್ನು ಉಚ್ಚರಿಸುತ್ತಾ ಇರಿಸಬೇಕು. ಶುದ್ಧ ಹಾಲಿನಿಂದ ತುಲಸೀ ವನವನ್ನು ಪ್ರೋಕ್ಷಿಸಬೇಕು. ಜಗದ್ಗುರುವಾದ ಶ್ರೀಹರಿಗೆ ಪಂಚಾಮೃತಸ್ನಾನವನ್ನು ಮಾಡಿಸಬೇಕು. ಆ ಬಳಿಕ ಪ್ರಾರ್ಥನೆ, ಆವಾಹನೆ, ಅಭಿಷೇಕ, ಗಂಧಸಮರ್ಪಣೆ, ವಸ್ತ್ರಸಮರ್ಪಣೆ, ಯಜ್ಞೋಪವೀತ ಸಮರ್ಪಣೆಯನ್ನು ಮಾಡಿ ನೈವೇದ್ಯವನ್ನು ಸಮರ್ಪಿಸಬೇಕು. ದಕ್ಷಿಣೆ ಸಮೇತವಾಗಿ ತಾಂಬೂಲವನ್ನು ಅರ್ಪಿಸಿ ಧೂಪ, ದೀಪಗಳನ್ನು ಸಮರ್ಪಿಸಿ ಮಂಗಲ ನೀರಾಜನವನ್ನು ಮಾಡಬೇಕು. ಪ್ರತಿನಿತ್ಯ ಅರ್ಘ್ಯವನ್ನು ನೀಡಬೇಕು. ಸಪ್ತಧಾನ್ಯಗಳಿಂದ ಕೂಡಿದ ಬಿದರಿನ ಪಾತ್ರೆಯಲ್ಲಿ ಏಳು ಬಗೆಯ ಹಣ್ಣುಗಳನ್ನು ವೀಳ್ಯದೆಲೆ, ಅಡಿಕೆಯನ್ನು ಇರಿಸಿ ವಸ್ತ್ರದಿಂದ

ಮುಚ್ಚಿ ದೇವರ ಮುಂದೆ ಇಡಬೇಕು. ಬಳಿಕ ಶ್ರೀಹರಿಯನ್ನು ಪ್ರಾರ್ಥಿಸಿ ಏಕಾದಶಿಯಂದು ಸಂಪೂರ್ಣ ಉಪವಾಸದಿಂದಿದ್ದು ದ್ವಾದಶಿಯಂದು ರಾತ್ರಿ ತುಲಸೀ ಸನ್ನಿಧಿಯಲ್ಲಿ ಲಕ್ಷ್ಮೀನಾರಾಯಣರನ್ನು ಪೂಜಿಸಬೇಕು. ಬ್ರಾಹ್ಮಣರಿಗೆ ಪಾಯಸ, ಘೃತಗಳ ಭೋಜನವನ್ನು ಮಾಡಿಸಬೇಕು. ಉಪವೀತ, ವಸ್ತ್ರ ಮಾಲೆ, ಗಂಧಗಳನ್ನು ಅರ್ಪಿಸಬೇಕು. ಕನಿಷ್ಟ ಮೂವರು ದಂಪತಿಗಳಿಗೆ ಭೋಜನ ಮಾಡಿಸಿ ವಸ್ತ್ರ ಭೂಷಣ, ಕುಂಕುಮ, ಬಾಗೀನಗಳನ್ನು ನೀಡಬೇಕು. ತೆಂಗಿನಕಾಯಿ ಮೊದಲಾದ ಬಗೆಬಗೆಯ ಫಲಗಳನ್ನು ಅರ್ಪಿಸಿ ಗುರು ಹಾಗೂ ಗುರುಪತ್ನಿಯರನ್ನು ಪೂಜಿಸಬೇಕು. ಸಕಲ ಸಾಮಗ್ರಿಗಳಿಂದ ಕೂಡಿದ ಹಾಲು ಕರೆಯುವ ಹಸುವನ್ನು ದಾನವಾಗಿ ನೀಡಬೇಕು. ಇಂತಹ ವ್ರತವನ್ನು ಮಾಡುವವನು ಸಕಲ ತೀರ್ಥಯಾತ್ರೆಯ ಪುಣ್ಯ, ಸಕಲ ತೀರ್ಥಸ್ನಾನದ ಪುಣ್ಯವನ್ನು ಶ್ರೀಹರಿಯ ಅನುಗ್ರಹದಿಂದ ಪಡೆಯುವನು. ಆ ಬಳಿಕ ತಾನೂ ಸಹ ಭೋಜನವನ್ನು ಮಾಡಬೇಕು. ಈ ವ್ರತದ ಅನುಷ್ಠಾನದಿಂದ ಸಕಲ ಕಾಮನೆಗಳನ್ನು ಪಡೆಯುವದರೊಂದಿಗೆ ಕೊನೆಗೆ ಶ್ರೀಹರಿಯ ಅನುಗ್ರಹದಿಂದ ವಿಷ್ಣುಲೋಕವನ್ನೂ ಪಡೆಯುವನು.

ಪುರಾ ರಥಂತರೇ ಕಲ್ಪೇ ರಾಜಾ ಹ್ಯಾಸೀತ್ ಪ್ರಜಾಪತಿಃ ।
ತಸ್ಯ ಭಾರ್ಯಾ ತು ವಿಖ್ಯಾತಾ ಚಂದ್ರರೂಪಾ ಮಹಾಸತೀ ॥

ಸಾ ವೈ ವ್ರತಮಿದಂ ಚಕ್ರೇ ಸರ್ವಕಾಮಫಲಪ್ರದಮ್ ।
ತ್ರಿರಾತ್ರಂ ತು ವ್ರತಂ ತಸ್ಯಾ ಧರ್ಮಕಾಮಾರ್ಥಮೋಕ್ಷದಮ್ ॥

ಸಫಲಂ ಜೀವಿತಂ ತೇಷಾಂ ಯೈಃ ಶ್ರುತಂ ತುಲಸೀವ್ರತಮ್ ।
ಕಾರ್ತಿಕೇ ಶುಕ್ಲಪಕ್ಷೇ ತು ನವಮ್ಯಾಂ ಚೈವ ನಾರದ ॥

ನಿಯಮಸ್ಥೋ ವ್ರತೀ ತಿಷ್ಠೇದ್ಭೂಮಿಶಾಯೀ ಜಿತೇಂದ್ರಿಯಃ ।
ವ್ರತಂ ತ್ರಿರಾತ್ರಮುದ್ದಿಶ್ಯ ಶುಚಿಃ ಸಂಯತಮಾನಸಃ ॥

ಸ್ವಪೇನ್ನಿಯಮಪೂರ್ವಂ ತು ತುಲಸೀವನಸನ್ನಿಧೌ ।
ತತೋ ಮಧ್ಯಾಹ್ನಸಮಯೇ ನದ್ಯಾದೌ ವಿಮಲೇ ಜಲೇ ॥

ಸ್ನಾನಂ ಕೃತ್ವಾ ಪಿತೄನ್ ದೇವಾಂಸ್ತರ್ಪಯೇದ್ವಿಧಿಪೂರ್ವಕಮ್ ।
ಸೌವರ್ಣಂ ಕಾರಯೇದ್ದೇವಂ ಲಕ್ಷ್ಮ್ಯಾ ಸಹ ಜನಾರ್ದನಮ್ ॥

ವಿತ್ತಶಾಠ್ಯಂ ನ ಕರ್ತವ್ಯಮಾತ್ಮನಃ ಶ್ರೇಯಮಿಚ್ಛತಾ ।
ವಸ್ತ್ರಯುಗ್ಮಂ ತತಃ ಕಾರ್ಯಂ ಪೀತೇ ಶುಕ್ಲೇ ಚ ವಾಸಸೀ ॥

ನವಗ್ರಹಾಣಾಮಾರಂಭಂ ಶಾಂತಿಕಂ ವಿಧಿಪೂರ್ವಕಮ್ ।
ಶ್ರಾಪಯಿತ್ವಾ ಚರುಂ ತತ್ರ ವೈಷ್ಣವಂ ಹೋಮಮಾಚರೇತ್ ।
ದ್ವಾದಶ್ಯಾಂ ದೇವದೇವೇಶಂ ಪೂಜಯಿತ್ವಾ ಪ್ರಯತ್ನತಃ ॥

ಅವ್ರಣಂ ಶುದ್ಧಕಲಶಂ ಸ್ಥಾಪಯೇದ್ವಿಧಿಪೂರ್ವಕಮ್ ।
ಪಂಚರತ್ನಸಮೋಪೇತಂ ಪಲ್ಲವೈಶ್ಚೌಷಧೀಯುತಮ್ ॥

ತಸ್ಯೋಪರಿ ನ್ಯಸೇತ್ ಪಾತ್ರಂ ಲಕ್ಷ್ಮ್ಯಾ ಸಹ ಜನಾರ್ದನಮ್ ।
ಸ್ಥಾಪಯೇತ್ ತುಲಸೀಮೂಲೇ ಮಂತ್ರೈರ್ವೇದಪುರಾಣಕೈಃ ॥

ಪಯಸಾ ಕೇವಲೇನೈವ ಸಿಂಚೇತ್ ತು ತುಲಸೀವನಮ್ ।
ಪಂಚಾಮೃತೇನ ಸಂಸ್ನಾಪ್ಯ ದೇವದೇವಂ ಜಗದ್ಗುರುಮ್ ॥

ಪ್ರಾರ್ಥನಾಮಂತ್ರಃ :-

ಯೋಽನಂತರೂಪೋಽಖಿಲವಿಶ್ವರೂಪೋ ಗರ್ಭೋದಕೇ ಲೋಕವಿಧಿಂ ಬಿಭರ್ತಿ ।
ಪ್ರಸೀದತಾಮೇಷ ಸ ದೇವದೇವೋ ಯೋ ಮಾಯಯಾ ವಿಶ್ವಕೃದೇವ ರೂಪೀ ॥

ಆವಾಹನಮಂತ್ರಃ : -

ಆಗಚ್ಛಾಚ್ಯುತ ದೇವೇಶ ತೇಜೋರಾಶೇ ಜಗತ್ಪತೇ ।
ಸದ್ಯೈವ ತಿಮಿರಧ್ವಂಸಿನ್ ತ್ರಾಹಿ ಮಾಂ ಭಯಸಾಗರಾತ್ ॥

ಸ್ನಾನಮಂತ್ರಃ :-

ಪಂಚಾಮೃತೇನ ಸುಸ್ನಾತಸ್ತಥಾ ಗಂಧೋದಕೇನ ಚ ।
ಗಂಗಾದೀನಾಂ ಚ ತೋಯೇನ ಸ್ನಾತೋಽನಂತಃ ಪ್ರಸೀದತು ॥

ವಿಲೇಪನಮಂತ್ರಃ :

ಶ್ರೀಖಂಡಾಗುರುಕರ್ಪೂರಕಕುಂಕುಮಾದಿವಿಲೇಪನಮ್ ।
ಭಕ್ತ್ಯಾ ದತ್ತಂ ಮಯಾಽಽಘ್ರೇಯಂ ಲಕ್ಷ್ಮ್ಯಾ ಸಹ ಗೃಹಾಣ ವೈ ॥

ವಸ್ತ್ರಮಂತ್ರಃ :

ನಾರಾಯಣ ನಮಸ್ತೇಽಸ್ತು ನರಕಾರ್ಣವತಾರಣ ।
ತ್ರೈಲೋಕ್ಯಾಧಿಪತೇ ತುಭ್ಯಂ ದದಾಮಿ ವಸನಂ ಶುಚಿ ॥

ಉಪವೀತಮಂತ್ರಃ :

ದಾಮೋದರ ನಮಸ್ತೇಽಸ್ತು ತ್ರಾಹಿ ಮಾಂ ಭವಸಾಗರಾತ್ ।
ಬ್ರಹ್ಮಸೂತ್ರಂ ಮಯಾ ದತ್ತಂ ಗೃಹಾಣ ಪುರುಷೋತ್ತಮ ॥

ಪೂಜಾ(ಪುಷ್ಪ)ಮಂತ್ರಃ :

ಪುಷ್ಪಾಣಿ ಚ ಸುಗಂಧೀನಿ ಮಾಲತ್ಯಾದೀನಿ ವೈ ಪ್ರಭೋ।
ಮಯಾ ದತ್ತಾನಿ ದೇವೇಶ ಪ್ರೀತಿತಃ ಪ್ರತಿಗೃಹ್ಯತಾಮ್ ।

ನೈವೇದ್ಯಮಂತ್ರಃ :

ನೈವೇದ್ಯಂ ಗೃಹ್ಯತಾಂ ನಾಥ ಭಕ್ಷ ಭೋಜ್ಯೈಃ ಸಮನ್ವಿತಮ್ ।
ಸರ್ವರಸೈಃ ಸುಸಂಪನ್ನಂ ಗೃಹಾಣ ಪರಮೇಶ್ವರ।

ತಾಂಬೂಲಮಂತ್ರಃ :

ಪೂಗಾನಿ ನಾಗಪತ್ರಾಣಿ ಕರ್ಪೂರಸಹಿತಾನಿ ಚ।
ಮಯಾ ದತ್ತಾನಿ ದೇವೇಶ ತಾಂಬೂಲಂ ಪ್ರತಿಗೃಹ್ಯತಾಮ್ ।

ಧೂಪಮಂತ್ರಃ :-

ಧೂಪಂ ದತ್ತ್ವಾಽಗುರುಂ ಭಕ್ತ್ಯಾಗುಗ್ಗುಲುಂ ಘೃತಮಿಶ್ರಿತಮ್ ।
ಏವಂ ಪೂಜಾ ಪ್ರಕರ್ತವ್ಯಾ ಘೃತೇನ ದೀಪಮಾಚರೇತ್ ।
ವಿವಿಧಂ ಮುನಿಶಾರ್ದೂಲ ಧೂಪಂ ಕೃತ್ವಾ ಸಮಾಹಿತಃ।
ಲಕ್ಷ್ಮೀನಾರಾಯಣಸ್ಯಾಗ್ರೇ ತುಲಸೀವನಸನ್ನಿಧೌ।
ಅರ್ಘ್ಯಂ ತತ್ರ ಪ್ರದಾತವ್ಯಂ ದೇವದೇವಾಯ ಚಕ್ರಿಣೇ।
ನವಮ್ಯಾಂ ನಾಲಿಕೇರೇಣ ಪುತ್ರಾರ್ಥಮರ್ಘ್ಯಮುತ್ತಮಮ್ ।
ದಶಮ್ಯಾಂ ಬೀಜಪೂರಂ ತು ಧರ್ಮಕಾಮಾರ್ಥಸಿದ್ಧಯೇ।
ಏಕಾದಶ್ಯಾಂ ದಾಡಿಮೇನ ದಾರಿದ್ರ್ಯಂ ನಾಶಯೇತ್ ಸದಾ।
ಸಪ್ತಧಾನ್ಯೇನ ಸಂಯುಕ್ತಂ ವಂಶಪಾತ್ರೇಣ ನಾರದ।
ಫಲಸಪ್ತಕಸಂಯುಕ್ತಂ ಪತ್ರಂ ಪೂಗಸಮನ್ವಿತಮ್ ।
ವಸ್ತ್ರೇಣಾಚ್ಛಾದಿತಂ ಕೃತ್ವಾ ದೇವಸ್ಯಾಗ್ರೇ ನಿವೇದಯೇತ್ ।
ಮಂತ್ರೇಣಾನೇನ ವಿಪ್ರೇಂದ್ರ ಶೃಣುಷ್ವೈಕಾಗ್ರಮಾನಸಃ।

ಅರ್ಘ್ಯಮಂತ್ರ :

ತುಲಸೀಸಹಿತೋ ದೇವ ಸದಾ ಶಂಖೇನ ಸಂಯುತಮ್ ।
ಗೃಹಾಣಾರ್ಘ್ಯಂ ಮಯಾ ದತ್ತಂ ದೇವದೇವ ನಮೋಽಸ್ತು ತೇ।
ಏವಂ ಸಂಪೂಜ್ಯ ದೇವೇಶಂ ಲಕ್ಷ್ಮ್ಯಾ ಸಹ ಜನಾರ್ದನಮ್ ।
ಪ್ರಾರ್ಥಯೇದ್ದೇವದೇವೇಶಂ ವ್ರತಸಂಪೂರ್ಣಸಿದ್ಧಯೇ।
ಉಪೋಷಿತೋಽಹಂ ದೇವೇಶ ಕಾಮಕ್ರೋಧವಿವರ್ಜಿತಃ।

ವ್ರತೇನಾನೇನ ದೇವೇಶ ತ್ವಮೇವ ಶರಣಂ ಮಮ ।
ಗೃಹೀತೇಽಸ್ಮಿನ್ ವ್ರತೇ ದೇವ ಯದಪೂರ್ಣಂ ಕೃತಂ ಮಯಾ ।
ಸರ್ವಂ ತದಸ್ತು ಸಂಪೂರ್ಣಂ ತ್ವತ್ಪ್ರಸಾದಾಜ್ಜನಾರ್ದನ ।
ನಮಃ ಕಮಲಪತ್ರಾಕ್ಷ ನಮಸ್ತೇ ಜಲಶಾಯಿನೇ ।
ಇದಂ ವ್ರತಂ ಮಯಾಽಽಚೀರ್ಣಂ ಪ್ರಸಾದಾತ್ ತವ ಕೇಶವ ।
ಅಜ್ಞಾನತಿಮಿರಧ್ವಂಸಿನ್ ವ್ರತೇನಾನೇನ ಕೇಶವ ।
ಪ್ರಸಾದಸುಮುಖೋ ಭೂತ್ವಾ ಜ್ಞಾನದೃಷ್ಟಿಪ್ರದೋ ಭವ ।
ತತೋ ಜಾಗರಣಂ ರಾತ್ರೌ ಗೀತಂ ಪುಸ್ತಕವಾಚನಮ್ ।
ವಾದ್ಯನೃತ್ಯಕಲಾಭಿಜ್ಞೈಃ ಪುಣ್ಯಾಖ್ಯಾನೈಃ ಸುಶೋಭನೈಃ ॥
ವಿಭಾತಾಯಾಂ ತು ಶರ್ವರ್ಯಾಮುದಿತೇ ವಿಮಲೇ ರವೌ ।
ನಿಮಂತ್ರ್ಯ ಬ್ರಾಹ್ಮಣಾನ್ ಭಕ್ತ್ಯಾ ಶ್ರಾದ್ಧಂ ಕುರ್ಯಾಚ್ಚ ವೈಷ್ಣವಮ್ ।
ಭೋಜಯಿತ್ವಾ ಯಥಾ ಕಾಮಂ ಪಾಯಸೇನ ಘೃತೇನ ಚ ।
ತಾಂಬೂಲಪುಷ್ಪಗಂಧಾದಿದಕ್ಷಿಣಾಭಿಃ ಸಮನ್ವಿತಮ್ ।
ಉಪವೀತಾನಿ ವಾಸಾಂಸಿ ದತ್ತ್ವಾ ಮಾಲಾಂ ಚ ಚಂದನಮ್ ।
ದಾಂಪತ್ಯತ್ರಿತಯಂ ಭೋಜ್ಯಂ ವಸ್ತ್ರಭೂಷಣಕುಂಕುಮೈಃ ।
ವಂಶಪಾತ್ರಾಣಿ ಶಕ್ತ್ಯಾ ಚ ವಿರೂಢೈಃ ಪರಿಪೂರಯೇತ್ ।
ನಾಲಿಕೇರೈಶ್ಚ ಪಕ್ವಾನ್ನೈರ್ವಸ್ತ್ರೈಶ್ಚ ವಿವಿಧೈಃ ಫಲೈಃ ।
ಸಪತ್ನೀಕಂ ಗುರುಂ ತತ್ರ ವಸ್ತ್ರಾಣಿ ಪರಿಧಾಪಯೇತ್ ।
ವಿಭೂಷಣಾನಿ ದಿವ್ಯಾನಿ ಗಂಧಮಾಲ್ಯೈಃ ಪ್ರಪೂಜಯೇತ್ ।
ಸರ್ವೋಪಸ್ಕರಸಂಯುಕ್ತಾಂ ಗಾಂ ದದ್ಯಾಚ್ಚ ಪಯಸ್ವಿನೀಮ್ ।
ಸದಕ್ಷಿಣಾಂ ಸವಸ್ತ್ರಾಂ ಚ ವಸ್ತ್ರಾಲಂಕಾರಭೂಷಿತಾಮ್ ।
ಸಕುಂಭಾಂ ಸೋಪಸ್ಕರಾಂ ಚ ಲಕ್ಷ್ಮೀನಾರಾಯಣಂ ಶುಭಮ್ ।
ಕರ್ತಾ ಯತ್ಫಲಮಾಪ್ನೋತಿ ತನ್ಮೇ ನಿಗದತಃ ಶೃಣು ।
ಸರ್ವತೀರ್ಥೇಷು ಯತ್ಪುಣ್ಯಂ ಸ್ನಾತಾನಾಂ ಜಾಯತೇ ನೃಣಾಮ್ ।
ತತ್ಫಲಂ ಲಭತೇ ಸರ್ವಂ ದೇವದೇವಪ್ರಸಾದತಃ ।
ಭುಕ್ತ್ವಾ ಚ ವಿಪುಲಾನ್ ಭೋಗಾನ್ ಸರ್ವಕಾಮಾನ್ ಮನೋರಮಾನ್ ।
ವೈಷ್ಣವಂ ಪದಮಾಪ್ನೋತಿ ಅಂತೇ ವಿಷ್ಣುಪ್ರಸಾದತಃ ॥

– ಪದ್ಮಪುರಾಣ (೬/೨೬/೩-೪೪)

ಅಥೋರ್ಜವ್ರತಿನಃ ಸಮ್ಯಗುದ್ಯಾಪನವಿಧಿಂ ನೃಪ ।
ತ್ವಂ ಶೃಣುಷ್ವ ಮಯಾಽಽಖ್ಯಾತಂ ಸವಿಧಾನಂ ಸಮಾಸತಃ ॥

ಊರ್ಜಶುಕ್ಲಚತುರ್ದಶ್ಯಾಂ ಕುರ್ಯಾದುದ್ಯಾಪನಂ ವ್ರತೀ।
ವ್ರತಸಂಪೂರಣಾರ್ಥಾಯ ವಿಷ್ಣುಪ್ರೀತ್ಯರ್ಥಮೇವ ಚ॥

ತುಲಸ್ಯಾ ಉಪರಿಷ್ಟಾತ್ ತು ಕುರ್ಯಾನ್ಮಂಡಪಿಕಾಂ ಶುಭಾಮ್।
ಸುತೋರಣಾಂ ಚತುರ್ದ್ವಾರಾಂ ಪುಷ್ಪಚಾಮರಶೋಭಿತಾಮ್॥

ದ್ವಾರೇಷು ದ್ವಾರಪಾಲಾಂಶ್ಚ ಪೂಜಯೇನ್ಮನ್ಮಯಾನ್ ಪೃಥಕ್।
ಪುಣ್ಯಶೀಲಂ ಸುಶೀಲಂ ಚ ಜಯಂ ವಿಜಯಮೇವ ಚ॥

ತುಲಸೀಮೂಲದೇಶೇ ವೈ ಸರ್ವತೋಭದ್ರಮಾಲಿಖೇತ್।
ಚತುರ್ಭಿರ್ವರ್ಣಕೈಃ ಸಮ್ಯಕ್ ಶೋಭಾಢ್ಯಂ ಸುಮನೋಹರಮ್॥

ತಸ್ಯೋಪರಿಷ್ಟಾತ್ ಕಲಶಂ ಪಂಚರತ್ನಸಮನ್ವಿತಮ್।
ಮಹಾಫಲೇನ ಸಂಯುಕ್ತಂ ಶುಭಂ ತತ್ರ ನಿಧಾಯ ಚ॥

ಪೂಜಯೇತ್ ತತ್ರ ದೇವೇಶಂ ಶಂಖಚಕ್ರಗದಾಧರಮ್।
ಕೌಶೇಯಪೀತವಸನಂ ಯುತಂ ಜಲಧಿಕನ್ಯಯಾ॥

ಇಂದ್ರಾದಿಲೋಕಪಾಲಾಂಶ್ಚ ಪೂಜಯೇನ್ಮಂಡಲೇ ವ್ರತೀ।
ದ್ವಾದಶ್ಯಾಂ ಪ್ರತಿಬುದ್ಧೋಽಸೌ ತ್ರಯೋದಶ್ಯಾಂ ತತಃ ಸುರೈಃ॥

ದೃಷ್ಟೋಽರ್ಚಿತಶ್ಚತುರ್ದಶ್ಯಾಂ ತಸ್ಮಾತ್ ಪೂಜ್ಯಸ್ತ್ವಿಹಾಪಿ ಹ।
ತಸ್ಯಾಮುಪವಸೇದ್ ಭಕ್ತ್ಯಾ ಶಾಂತಃ ಪ್ರಯತಮಾನಸಃ॥

ಪೂಜಯೇದ್ದೇವದೇವೇಶಂ ಸೌವರ್ಣಂ ಗುರ್ವನುಜ್ಞಯಾ।
ಉಪಚಾರೈಃ ಷೋಡಶಭಿರ್ನಾನಾಭಕ್ಷ್ಯಸಮನ್ವಿತೈಃ॥

ರಾತ್ರೌ ಜಾಗರಣಂ ಕುರ್ಯಾದ್ ಗೀತವಾದ್ಯಾದಿಮಂಗಲೈಃ।
ಗೀತಂ ಕುರ್ವಂತಿ ಯೇ ಭಕ್ತ್ಯಾ ಜಾಗರೇ ಚಕ್ರಪಾಣಿನಃ॥

ಜನ್ಮಾಂತರಶತೋದ್ಭೂತೈರ್ಮುಕ್ತಾಸ್ತೇ ಪಾಪಸಂಚಯೈಃ।
ನರಾಣಾಂ ಜಾಗರೇ ವಿಷ್ಣೋರ್ಗೀತವಾದ್ಯಂ ಪ್ರಕುರ್ವತಾಮ್॥

ಗೋಸಹಸ್ರಂ ಚ ದದತಾಂ ಸಮಂ ಫಲಮುದಾಹೃತಮ್।
ಗೀತನೃತ್ಯಾದಿಕಂ ಕುರ್ವನ್ ದರ್ಶಯನ್ ಕೌತುಕಾನಿ ಚ॥

ಪುರತೋ ವಾಸುದೇವಸ್ಯ ರಾತ್ರೌ ಚ ಹರಿಜಾಗರೇ।
ಪಠನ್ ವಿಷ್ಣುಚರಿತ್ರಾಣಿ ಯೋ ರಂಜಯತಿ ವೈಷ್ಣವಾನ್॥

ಮುಖೇನ ಕುರುತೇ ವಾದ್ಯಂ ಸ್ವೇಚ್ಛಾಲಾಪಾಂಶ್ಚ ವರ್ಜಯೇತ್ ।
ಭಾವೈರೇತೈರ್ನರೋ ಯಸ್ತು ಕುರುತೇ ಹರಿಜಾಗರಮ್ ॥

ದಿನೇ ದಿನೇ ತಸ್ಯ ಪುಣ್ಯಂ ತೀರ್ಥಕೋಟಿಸಮಂ ಸ್ಮೃತಮ್ ।
ತತಸ್ತು ಪೌರ್ಣಮಾಸ್ಯಾಂ ವೈ ಸಪತ್ನೀಕಾನ್ ದ್ವಿಜೋತ್ತಮಾನ್ ॥

ತ್ರಿಂಶನ್ಮಿತಾನಥೈಕಂ ವಾ ಸ್ವಶಕ್ತ್ಯಾವಾ ನಿಮಂತ್ರಯೇತ್ ।
ವರಾನ್ ದತ್ತ್ವಾ ಯತೋ ವಿಷ್ಣುರ್ಮರ್ತ್ಯರೂಪ್ಯಭವತ್ ತತಃ ॥

ಅಸ್ಯಾಂ ದತ್ತಂ ಹುತಂ ಜಪ್ತಂ ತದಕ್ಷಯಫಲಂ ಸ್ಮೃತಮ್ ।
ಅತಸ್ತಾನ್ ಭೋಜಯೇದ್ ವಿಪ್ರಾನ್ ಪಾಯಸಾನ್ನಾದಿನಾ ವ್ರತೀ ॥

ಅತೋ ದೇವಾ ಇತಿ ದ್ವಾಭ್ಯಾಂ ಜುಹುಯಾತ್ ತಿಲಪಾಯಸಮ್ ।
ಪ್ರೀತ್ಯರ್ಥಂ ದೇವದೇವಸ್ಯ ದೇವಾನಾಂ ಚ ಪೃಥಕ್ ಪೃಥಕ್ ॥

ದಕ್ಷಿಣಾಂ ಚ ಯಥಾಶಕ್ತಿ ಪ್ರದದ್ಯಾತ್ ಪ್ರಣಮೇಚ್ಚ ತಾನ್ ।
ಪುನರ್ದೇವಂ ಸಮಭ್ಯರ್ಚ್ಯ ದೇವಾಂಶ್ಚ ತುಲಸೀಂ ತಥಾ ॥

ತತೋ ಗಾಂ ಕಪಿಲಾಂ ತತ್ರ ಪೂಜಯೇದ್ವಿಧಿವದ್ ವ್ರತೀ ।
ಗುರುಂ ವ್ರತೋಪದೇಷ್ಟಾರಂ ವಸ್ತ್ರಾಲಂಕರಣಾದಿಭಿಃ ॥

ಸಪತ್ನೀಕಂ ಸಮಭ್ಯರ್ಚ್ಯ ತಾಂಶ್ಚ ವಿಪ್ರಾನ್ ಕ್ಷಮಾಪಯೇತ್ ।
ಯುಷ್ಮತ್ಪ್ರಸಾದಾದ್ದೇವೇಶಃ ಪ್ರಸನ್ನೋಽಸ್ತು ಸದಾ ಮಮ ॥

ವ್ರತಾದಸ್ಮಾಚ್ಚ ಯತ್ಪಾಪಂ ಸಪ್ತಜನ್ಮಕೃತಂ ಮಯಾ ।
ತತ್ಸರ್ವಂ ನಾಶಮಾಯಾತು ಸ್ಥಿರಾ ಮೇ ಚಾಸ್ತು ಸಂತತಿಃ ॥

ಮನೋರಥಾಸ್ತು ಸಫಲಾಃ ಸಂತು ನಿತ್ಯಂ ಸಮರ್ಚನಾತ್ ।
ದೇಹಾಂತೇ ವೈಷ್ಣವಂ ಸ್ಥಾನಮಾಪ್ನುಯಾಮತಿದುರ್ಲಭಮ್ ॥

ಇತಿ ಕ್ಷಮಾಪ್ಯ ತಾನ್ ವಿಪ್ರಾನ್ ಪ್ರಸಾದ್ಯ ಚ ವಿಸರ್ಜಯೇತ್ ।
ತಾಮರ್ಚಾಂ ಗುರವೇ ದದ್ಯಾದ್ ಗವಾ ಯುಕ್ತಾಂ ತದಾ ವ್ರತೀ ॥

ತತಃ ಸುಹೃದ್ಗುರುಯುತಃ ಸ್ವಯಂ ಭುಂಜೀತ ಭಕ್ತಿಮಾನ್ ।
ಕಾರ್ತಿಕೇ ವಾಽಥ ತಪಸಿ ವಿಧಿರೇವಂವಿಧಃ ಸ್ಮೃತಃ ॥

ಏವಂ ಯಃ ಕುರುತೇ ಸಮ್ಯಕ್ ಕಾರ್ತಿಕಸ್ಯ ವ್ರತಂ ನರಃ ।
ನಿಷ್ಪಾಪಃ ಸ ವಿನಿರ್ಮುಕ್ತೋ ವಿಷ್ಣುಸಾನ್ನಿಧ್ಯಮಾಪ್ನುಯಾತ್ ॥

ಸರ್ವವ್ರತೈಃ ಸರ್ವತೀರ್ಥೈಃ ಸರ್ವದಾನೈಶ್ಚ ಯತ್ಫಲಮ್ ।
ತತ್ಕೋಟಿಗುಣಿತಂ ಜ್ಞೇಯಂ ಸಮ್ಯಗಸ್ಯ ವಿಧಾನತಃ ॥

ತೇ ಧನ್ಯಾಸ್ತೇ ಸದಾ ಪೂಜ್ಯಾಸ್ತೇಷಾಂ ಸರ್ವಫಲೋದಯಃ ।
ವಿಷ್ಣುಭಕ್ತಿಪರಾ ಯೇ ಸ್ಯುಃ ಕಾರ್ತಿಕವ್ರತಚಾರಿಣಃ ॥

ದೇಹಸ್ಥಿತಾನಿ ಪಾಪಾನಿ ವಿತರ್ಕಂ ಯಾಂತಿ ತದ್ಭಯಾತ್ ।
ಕ್ವ ಯಾಸ್ಯಾಮೋ ವದಂತ್ಯೇಷ ಯದೂರ್ಜವ್ರತಕೃನ್ನರಃ ॥

ಇತ್ಯೂರ್ಜವ್ರತನಿಯಮಾನ್ ಶೃಣೋತಿ ಭಕ್ತ್ಯಾ ।
ಯೋ ವೈ ತತ್ ಕಥಯತಿ ವೈಷ್ಣವಾಗ್ರತೋ ಯಃ ॥

ತೌ ಸಮ್ಯಗ್ವ್ರತಕರಣಾತ್ ಫಲಂ ಲಭೇತಾಂ ।
ದೃಷ್ಟ್ವಾ ತೌ ಕಲುಷವಿನಾಶನಂ ಲಭಂತೇ ॥

– ಪದ್ಮಪುರಾಣ (೬/೯೭)

ಪೌರಾಣಿಕಸ್ಯ ಪೂಜಾಂ ತು ತುಲಸೀಪೂಜನಂ ತಥಾ ।
ಕೃತ್ವಾ ಮಾಧ್ಯಾಹ್ನಿಕಂ ಕರ್ಮ ಭುಂಜೀತ ದ್ವಿದಲೋಜ್ಝಿತಮ್ ॥

– ಸ್ಕಂದಪುರಾಣ (೨/೪/೫/೨೫)

ತತೋ ಹರಿಪ್ರಿಯಾಂ ದೇವೀಂ ತುಲಸೀಮರ್ಚಯೇದ್ ವ್ರತೀ । (ಪು.೧೪)

॥ ಶ್ರೀಕೃಷ್ಣಾರ್ಪಣಮಸ್ತು ॥

ಸಮರ್ಪಿತಂ ಮಯಾ ಭವೇತ್ ಸುಮಧ್ವನುತ್ತವಾಣಿನಾ ।
ರಮಾರಮೇಶಪಾದಯೋಃ ಪ್ರಭಂಜನಾಭಿಧಾಯುಜಾ ॥

★★★★★

ಪರಿಶಿಷ್ಠ - ೦೬

# ಪ್ರಬೋಧೋತ್ಸವ್[೨] : ತುಲಸೀಪೂಜಾವಿಧಿ

## [೩]ಆಚಮ್ಯ ಪ್ರಾಣಾನಾಯಮ್ಯ ।

### ಸಂಕಲ್ಪ

ಶುಭೇ ಶೋಭನೇ ಮುಹೂರ್ತೇ ಶ್ರೀಮಹಾವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಅದ್ಯ ಬ್ರಹ್ಮಣಃ ದ್ವಿತೀಯಪರಾರ್ಧೇ ಶ್ರೀಶ್ವೇತವರಾಹಕಲ್ಪೇ ವೈವಸ್ವತಮನ್ವಂತರೇ ಅಷ್ಟಾವಿಂಶತಿತಮೇ ಕಲಿಯುಗೇ ಪ್ರಥಮಪಾದೇ ಭರತವರ್ಷೇ ಭರತಖಂಡೇ ಜಂಬೂದ್ವೀಪೇ ದಂಡಕಾರಣ್ಯೇ ಗೋದಾವರ್ಯಾಃ ದಕ್ಷಿಣೇ ತೀರೇ ಶಾಲಿವಾಹನಶಕೇ ಬೌದ್ಧಾವತಾರೇ ರಾಮಕ್ಷೇತ್ರೇ ಅಸ್ಮಿನ್‌ವರ್ತಮಾನೇ ಚಾಂದ್ರಮಾನೇನ ....... ಸಂವತ್ಸರಸ್ಯ ದಕ್ಷಿಣಾಯನೇ ಶರದೃತೌ ಕಾರ್ತೀಕಮಾಸೇ ಶುಕ್ಲಪಕ್ಷೇ ದ್ವಾದಶ್ಯಾಂ ತಿಥೌ ........ವಾಸರೇ ಭಾರತೀರಮಣಮುಖ್ಯ- ಪ್ರಾಣಾಂತರ್ಗತ ಶ್ರೀಕಾರ್ತಿಕದಾಮೋದರಪ್ರೇರಣಯಾ ಶ್ರೀದಾಮೋದರ- ಪ್ರೀತ್ಯರ್ಥಂ ಪ್ರಬೋಧೋತ್ಸವಂ, ಸಂಕ್ಷೇಪತಸ್ತುಲಸೀವಿವಾಹವಿಧಿಂ ಚ ಕರಿಷ್ಯೇ । ತದಂಗತಯಾ ಶ್ರೀದಾಮೋದರಸ್ಯ ಪುರುಷಸೂಕ್ತವಿಧಿನಾ ಷೋಡಶೋಪಚಾರ- ಪೂಜಾಂ, ತುಲಸ್ಯಾಃ ಷೋಡಶೋಪಚಾರಪೂಜಾಂ ಚ ಕರಿಷ್ಯೇ । ತತಃ ದೇವಸ್ಯ ಕಲಶಪೂಜಾದಿ ಮಧುಪರ್ಕಪೂಜಾಂತಂ ಕೃತ್ವಾ, ಸುಗಂಧಿತೈಲಾದಿನಾ ಪಂಚಾಮೃತಸ್ನಾನಾದಿ ರಮಾನೈವೇದ್ಯಾಂತಂ ಕೃತ್ವಾ ತುಲಸೀಂ ಪ್ರಪೂಜಯೇತ್ ।

## ಅಥ ತುಲಸೀಪೂಜಾ ।

### ಧ್ಯಾನಮ್

ಧ್ಯಾಯಾಮಿ ತುಲಸೀಂ ದೇವೀಂ ಶ್ಯಾಮಾಂ ಕಮಲಲೋಚನಾಮ್ ।
ಪ್ರಸನ್ನಾಂ ಪದ್ಮಕಲ್ಹಾರವರಾಭಯಚತುರ್ಭುಜಾಮ್ ॥
ಕಿರೀಟಹಾರಕೇಯೂರಕುಂಡಲಾದಿವಿಭೂಷಿತಾಮ್ ।
ಧವಲಾಂಶುಕಸಂಯುಕ್ತಾಂ ಪದ್ಮಾಸನನಿಷೇದುಷೀಮ್ ॥
.....ಓಂ ಶ್ರೀ ತುಲಸ್ಯೈ ನಮಃ, ಧ್ಯಾನಂ ಸಮರ್ಪಯಾಮಿ ।

---

೯೨ ಶಯನೈಕಾದಶಿಯಂದು ಯೋಗನಿದ್ರೆಗೆ ತೊಡಗುವ ಶ್ರೀಹರಿಯು ಉತ್ಥಾನದ್ವಾದಶಿಯಂದು ಯೋಗನಿದ್ರೆಯಿಂದ ಮೇಲೇಳುವನು. ಪ್ರಬೋಧವೆಂದರೆ ಇದೇ. ಈ ಸಂಭ್ರಮದ ಆಚರಣೆಯೇ ಪ್ರಬೋಧೋತ್ಸವ.

೯೩. ಆಚಮನ, ಪ್ರಾಣಾಯಾಮಗಳನ್ನು ಪೂರೈಸಿ ಈ ರೀತಿಯಾಗಿ ಸಂಕಲ್ಪ ಮಾಡಿ, ಅದರ ಅಂಗವಾಗಿ ಪುರುಷಸೂಕ್ತದಲ್ಲಿ ಹೇಳಿದ ವಿಧಿಗನುಗುಣವಾಗಿ ಶ್ರೀದಾಮೋದರ ರೂಪದ ಶ್ರೀಹರಿಗೆ ಷೋಡಷೋಪಚಾರ ಪೂಜೆಯನ್ನು ಮಾಡಬೇಕು. ಮೊದಲಿಗೆ ಶ್ರೀಹರಿಗೆ ಪಂಚಾಮೃತಸ್ನಾನಾದಿಗಳನ್ನು ರಮಾನೈವೇದ್ಯದವರೆಗೆ ಸಮರ್ಪಿಸಬೇಕು.

ಕೃಷ್ಣಾನಂದಾಶ್ರುಸಂಭೂತೇ ವರದೇ ತುಲಸಿ ಸ್ವಯಮ್ ।
ತ್ವಾಮದ್ಯಾಹಂ ಭಜಾಮೀಹ ಕಮಲಾಪತಿವಲ್ಲಭೇ ॥
.....ಓಂ ಶ್ರೀ ತುಲಸ್ಯೈ ನಮಃ, ತುಲಸೀಂ ಆವಾಹಯಾಮಿ ।

ಪದ್ಮನಾಭಪ್ರಿಯೇ ದೇವಿ ಪದ್ಮಮೇತನ್ಮಯಾಽರ್ಪಿತಮ್ ।
ಸಂಗೃಹಾಣಾಸನಂ ಶ್ಯಾಮೇ ವರದೇ ವರವರ್ಣಿನಿ ॥
..... ಓಂ ಶ್ರೀ ತುಲಸ್ಯೈ ನಮಃ, ಆಸನಂ ಸಮರ್ಪಯಾಮಿ ।

ಬೃಂದಾವನಸ್ಥಿತೇ ದೇವಿ ಬೃಂದಾರಕಸುಪೂಜಿತೇ ।
ಇದಂ ಪಾದ್ಯಂ ಗೃಹಾಣ ತ್ವಂ ದೇವಿ ದೈತ್ಯಾಂತಕಪ್ರಿಯೇ ॥
..... ಓಂ ಶ್ರೀ ತುಲಸ್ಯೈ ನಮಃ, ಪಾದ್ಯಂ ಸಮರ್ಪಯಾಮಿ ।

ಕ್ಷೀರೋದಧಿಸಮುತ್ಪನ್ನೇ ದೇವಾದಿಮುನಿಪೂಜಿತೇ ।
ವಿಷ್ಣುಪ್ರಿಯೇ ಮಯಾ ದತ್ತಂ ಗೃಹಾಣಾರ್ಘ್ಯಂ ನಮೋಽಸ್ತು ತೇ ॥
..... ಓಂ ಶ್ರೀ ತುಲಸ್ಯೈ ನಮಃ, ಅರ್ಘ್ಯಂ ಸಮರ್ಪಯಾಮಿ ।

ಏಲಾಲವಂಗಕರ್ಪೂರಚಂದನಾದ್ಯೈಃ ಸುವಾಸಿತಮ್ ।
ಪಾನೀಯಂ ತೇ ಮಯಾ ನೀತಂ ಸಮ್ಯಗಾಚಮನೀಯಕಮ್ ॥
..... ಓಂ ಶ್ರೀ ತುಲಸ್ಯೈ ನಮಃ, ಆಚಮನೀಯಂ ಸಮರ್ಪಯಾಮಿ ।

ದಾಮೋದರಪ್ರಿಯೇ ದೇವಿ ದಧಿಕ್ಷೌದ್ರಸಮನ್ವಿತಮ್ ।
ಮಧುಪರ್ಕಂ ಗೃಹಾಣ ತ್ವಂ ಮಯಾ ದತ್ತಂ ಸುರೇಶ್ವರಿ ॥
..... ಓಂ ಶ್ರೀ ತುಲಸ್ಯೈ ನಮಃ, ಮಧುಪರ್ಕಂ ಸಮರ್ಪಯಾಮಿ ।

ಸುಗಂಧಿತೈಲಹರಿದ್ರಾಭ್ಯಾಂ ಉಷ್ಣೋದಕೇನ ಚ ಮಂಗಲಸ್ನಾನಂ ಕಾರಯಿತ್ವಾ,
ದಧಿಕ್ಷೀರಘೃತೋಪೇತಂ ಶರ್ಕರಾಮಧುಸಂಯುತಮ್ ।
ಸ್ನಾನಂ ಪಂಚಾಮೃತಂ ದೇವಿ ಗೃಹಾಣ ಸುರಪೂಜಿತೇ ॥
..... ಓಂ ಶ್ರೀ ತುಲಸ್ಯೈ ನಮಃ, ಪಂಚಾಮೃತಸ್ನಾನಂ ಸಮರ್ಪಯಾಮಿ ।

ಗಂಗಾದಿಸರ್ವತೀರ್ಥೇಭ್ಯಃ ಸಮಾನೀತಮಿದಂ ಜಲಮ್ ।
ಸ್ನಾನಾರ್ಥಂ ತುಲಸಿ ಸ್ವಚ್ಛಂ ಪ್ರೀತ್ಯಾ ತತ್ಪ್ರತಿಗೃಹ್ಯತಾಮ್ ॥
..... ಓಂ ಶ್ರೀ ತುಲಸ್ಯೈ ನಮಃ, ಶುದ್ಧೋದಕ ಸ್ನಾನಂ ಸಮರ್ಪಯಾಮಿ ।

ಸ್ನಾನಾನಂತರಂ ಆಚಮನೀಯಂ ಸಮರ್ಪಯಾಮಿ।

ಸುರಾರ್ಚಿತಾಂಘ್ರಿಯುಗಲೇ ದುಕೂಲವಸನಪ್ರಿಯೇ।
ವಸ್ತ್ರಯುಗ್ಮಂ ಪ್ರದಾಸ್ಯಾಮಿ ಗೃಹಾಣ ದುರಿತಾಪಹೇ॥
..... ಓಂ ಶ್ರೀ ತುಲಸ್ಯೈ ನಮಃ, ವಸ್ತ್ರಯುಗ್ಮಂ ಸಮರ್ಪಯಾಮಿ।

ನವರತ್ನಾದಿಭಿರ್ಬದ್ಧಂ ಸೌವರ್ಣ್ಯೈಶ್ಚೈವ ತಂತುಭಿಃ।
ನಿರ್ಮಿತಂ ಕಂಚುಕಂ ಭಕ್ತ್ಯಾ ಗೃಹಾಣ ತ್ವಂ ಸುರೇಶ್ವರಿ॥
..... ಓಂ ಶ್ರೀ ತುಲಸ್ಯೈ ನಮಃ, ಕಂಚುಕಂ ಸಮರ್ಪಯಾಮಿ।

ಸುವರ್ಣನಿರ್ಮಿತಂ ದಿವ್ಯಂ ನಾನಾರತ್ನಸುಶೋಭಿತಮ್।
ತ್ರೈಲೋಕ್ಯಪೂಜಿತೇ ದೇವಿ ಗೃಹಾಣಾಭರಣಂ ಶುಭಮ್॥
..... ಓಂ ಶ್ರೀ ತುಲಸ್ಯೈ ನಮಃ, ಆಭರಣಾನಿ ಸಮರ್ಪಯಾಮಿ।

ಕರ್ಪೂರಾಗರುಕಸ್ತೂರೀರೋಚನಾದಿಭಿರನ್ವಿತಮ್।
ಗಂಧಂ ದದಾಮ್ಯಹಂ ದೇವಿ ಪ್ರೀತ್ಯರ್ಥಂ ಪ್ರತಿಗೃಹ್ಯತಾಮ್॥
..... ಓಂ ಶ್ರೀ ತುಲಸ್ಯೈ ನಮಃ, ಗಂಧಂ ಸಮರ್ಪಯಾಮಿ।

ಶ್ವೇತಾಂಶ್ಚ ಚಂದ್ರವರ್ಣಾಭಾನ್ ಹರಿದ್ರಾರಾಗರಂಜಿತಾನ್।
ಅಕ್ಷತಾನ್ ಸಂಗೃಹಾಣ ತ್ವಂ ತುಲಸ್ಯಘವಿನಾಶಿನಿ॥
..... ಓಂ ಶ್ರೀ ತುಲಸ್ಯೈ ನಮಃ, ಅಕ್ಷತಾನ್ ಸಮರ್ಪಯಾಮಿ।

ಕಂಠಸೂತ್ರಂ ತಾಲಪತ್ರಂ ಹರಿದ್ರಾಕುಂಕುಮಾಂಜನಮ್।
ಸಿಂಧೂರಾದಿ ಪ್ರದಾಸ್ಯಾಮಿ ಸೌಭಾಗ್ಯಂ ದೇಹಿ ಮೇಽವ್ಯಯೇ॥
..... ಓಂ ಶ್ರೀ ತುಲಸ್ಯೈ ನಮಃ, ಸೌಭಾಗ್ಯದ್ರವ್ಯಂ ಸಮರ್ಪಯಾಮಿ।

ಕೇತಕೀಜಾಜಿಪುನ್ನಾಗೈಶ್ಚಂಪಕೈರ್ಬಕುಲೈಃ ಶುಭೈಃ।
ಪೂಜಯಾಮಿ ಚ ದೇವೇಶಿ ವರದೇ ಭಕ್ತವತ್ಸಲೇ॥
..... ಓಂ ಶ್ರೀ ತುಲಸ್ಯೈ ನಮಃ, ನಾನಾವಿಧಪುಷ್ಪಾಣಿ ಸಮರ್ಪಯಾಮಿ।

## ಅಥ ತುಲಸ್ಯಂಗಪೂಜಾ

..... ಓಂ ಶ್ರೀ ತುಲಸ್ಯೈ ನಮಃ ಪಾದೌ ಪೂಜಯಾಮಿ।
ಓಂ ವಿಷ್ಣುಪತ್ನ್ಯೈ ನಮಃ ಗುಲ್ಫೌ ಪೂಜಯಾಮಿ।
ಓಂ ಅಘಹಂತ್ರ್ಯೈ ನಮಃ ಜಂಘೇ ಪೂಜಯಾಮಿ।

ಓಂ ಲೋಕವಂದಿತಾಯ್ಯೆ ನಮಃ ಜಾನುನೀ ಪೂಜಯಾಮಿ।
ಓಂ ರಂಭೋರ್ವ್ಯೆ ನಮಃ ಊರೂ ಪೂಜಯಾಮಿ।
ಓಂ ಪೀತಾಂಬರಧಾರಿಣ್ಯೈ ನಮಃ ಕಟಿಂ ಪೂಜಯಾಮಿ।
ಓಂ ಕ್ಷೀರಾಬ್ಧಿತನಯಾಯ್ಯೆ ನಾಭಿಂ ಪೂಜಯಾಮಿ।
ಓಂ ಲೋಕಜನನ್ಯೈ ನಮಃ ಗುಹ್ಯಂ ಪೂಜಯಾಮಿ।
ಓಂ ದಾಮೋದರಪ್ರಿಯಾಯ್ಯೆ ನಮಃ ಉದರಂ ಪೂಜಯಾಮಿ।
ಓಂ ಕುಂಭಸ್ತನ್ಯೈ ನಮಃ ಸ್ತನೌ ಪೂಜಯಾಮಿ।
ಓಂ ಸಕಲಸುರಪೂಜ್ಯಾಯ್ಯೆ ನಮಃ ಭುಜೌ ಪೂಜಯಾಮಿ।
ಓಂ ಸರ್ವಾಭರಣಭೂಷಿತಾಯ್ಯೆ ನಮಃ ಕಂಠಂ ಪೂಜಯಾಮಿ।
ಓಂ ಸುಮುಖಾಯ್ಯೆ ನಮಃ ಮುಖಂ ಪೂಜಯಾಮಿ।
ಓಂ ಬಿಂಬೋಷ್ಠ್ಯೈ ನಮಃ ಓಷ್ಠೌ ಪೂಜಯಾಮಿ।
ಓಂ ಸುನಾಸಿಕಾಯ್ಯೆ ನಮಃ ನಾಸಿಕಾಂ ಪೂಜಯಾಮಿ।
ಓಂ ಉತ್ಪಲಾಕ್ಷ್ಯೈ ನಮಃ ನೇತ್ರೇ ಪೂಜಯಾಮಿ।
ಓಂ ತಾಟಂಕಧಾರಿಣ್ಯೈ ನಮಃ ಕರ್ಣೌ ಪೂಜಯಾಮಿ।
ಓಂ ರಮಾಯ್ಯೆ ನಮಃ ಲಲಾಟಂ ಪೂಜಯಾಮಿ।
ಓಂ ಇಂದುಸುಂದರ್ಯ್ಯೆ ನಮಃ ಶಿರಃ ಪೂಜಯಾಮಿ।
..... ಓಂ ಶ್ರೀ ತುಲಸ್ಯೈ ನಮಃ ಸರ್ವಾಂಗಂ ಪೂಜಯಾಮಿ।

ದಶಾಂಗಂ ಗುಗ್ಗುಲೋಪೇತಂ ಸುಗಂಧಂ ಚ ಮನೋಹರಮ್।
ಧೂಪಂ ದಾಸ್ಯಾಮಿ ತುಲಸಿ ಕೃಪಯಾ ತ್ವಂ ಗೃಹಾಣ ತಮ್॥
..... ಓಂ ಶ್ರೀ ತುಲಸ್ಯೈ ನಮಃ, ಧೂಪಮಾಘ್ರಾಪಯಾಮಿ।

ಘೃತಾಕ್ತವರ್ತಿಸಂಯುಕ್ತಮಂಧಕಾರವಿನಾಶಕಮ್।
ದೀಪಂ ದಾಸ್ಯಾಮಿ ತೇ ದೇವಿ ಗೃಹಾಣ ಮುದಿತಾ ಭವ॥
..... ಓಂ ಶ್ರೀ ತುಲಸ್ಯೈ ನಮಃ, ದೀಪಂ ದರ್ಶಯಾಮಿ।

ನೈವೇದ್ಯಂ ಷಡ್ರಸೋಪೇತಂ ದಧಿಮಧ್ವಾಜ್ಯಸಂಯುತಮ್।
ನಾನಾಭಕ್ಷ್ಯಫಲೋಪೇತಂ ಗೃಹಾಣಭೀಷ್ಟದಾಯಿನಿ॥
..... ಓಂ ಶ್ರೀ ತುಲಸ್ಯೈ ನಮಃ, ನೈವೇದ್ಯಂ ಸಮರ್ಪಯಾಮಿ।

ಘನಸಾರಸುಗಂಧೇನ ಮಿಶ್ರಿತಂ ಪುಷ್ಪವಾಸಿತಮ್।
ಪಾನೀಯಂ ಗೃಹ್ಯತಾಂ ದೇವಿ ಶೀತಲಂ ಸುಮನೋಹರಮ್॥
ಮಧ್ಯೇ ಮಧ್ಯೇ ಪಾನೀಯಂ ಸಮರ್ಪಯಾಮಿ।

..... ಓಂ ಶ್ರೀ ತುಲಸ್ಯೈ ನಮಃ, ಹಸ್ತಪ್ರಕ್ಷಾಲನಂ ಸಮರ್ಪಯಾಮಿ।
..... ಓಂ ಶ್ರೀ ತುಲಸ್ಯೈ ನಮಃ, ಮುಖಪ್ರಕ್ಷಾಲನಂ ಸಮರ್ಪಯಾಮಿ।
..... ಓಂ ಶ್ರೀ ತುಲಸ್ಯೈ ನಮಃ, ಪುನರಾಚಮನೀಯಂ ಸಮರ್ಪಯಾಮಿ।

ಬೀಜಪೂರಾಮ್ರಪನಸಖರ್ಜೂರೀಕದಲೀಫಲಮ್ ।
ನಾರಿಕೇಲಫಲಂ ದಿವ್ಯಂ ಗೃಹಾಣ ಸುರಪೂಜಿತೇ ॥
..... ಓಂ ಶ್ರೀ ತುಲಸ್ಯೈ ನಮಃ, ನಾನಾವಿಧಫಲಾನಿ ಸಮರ್ಪಯಾಮಿ।

ಪೂಗೀಫಲಸಮಾಯುಕ್ತಂ ನಾಗವಲ್ಲೀದಲೈರ್ಯುತಮ್ ।
ಕರ್ಪೂರಚೂರ್ಣಸಂಯುಕ್ತಂ ತಾಂಬೂಲಂ ಪ್ರತಿಗೃಹ್ಯತಾಮ್ ॥
..... ಓಂ ಶ್ರೀ ತುಲಸ್ಯೈ ನಮಃ, ತಾಂಬೂಲಂ ಸಮರ್ಪಯಾಮಿ।

ಸುವರ್ಣಂ ಸರ್ವಧಾತೂನಾಂ ಶ್ರೇಷ್ಠಂ ದೇವಿ ಚ ತತ್ ಸದಾ।
ಭಕ್ತ್ಯಾ ದದಾಮಿ ವರದೇ ಸ್ವರ್ಣವೃದ್ಧಿಂ ಚ ದೇಹಿ ಮೇ ॥
..... ಓಂ ಶ್ರೀ ತುಲಸ್ಯೈ ನಮಃ, ಸುವರ್ಣಪುಷ್ಪದಕ್ಷಿಣಾಂ ಸಮರ್ಪಯಾಮಿ।

ನೀರಾಜನಂ ಸುಮಂಗಲ್ಯಂ ಕರ್ಪೂರೇಣ ಸಮನ್ವಿತಮ್ ।
ವಹ್ನಿಚಂದ್ರಾರ್ಕಸದೃಶಂ ಗೃಹಾಣ ದುರಿತಾಪಹೇ ॥
..... ಓಂ ಶ್ರೀ ತುಲಸ್ಯೈ ನಮಃ, ಮಹಾನೀರಾಜನಂ ಸಮರ್ಪಯಾಮಿ ॥

ನಮಸ್ತೇ ಸರ್ವಲೋಕಾನಾಂ ಜನನ್ಯೈ ಪುಣ್ಯಮೂರ್ತಯೇ।
ನಮಸ್ತೇ ದೇವಿ ಕಲ್ಯಾಣಿ ನಮಸ್ತೇ ಮುನಿಪೂಜಿತೇ ॥
..... ಓಂ ಶ್ರೀ ತುಲಸ್ಯೈ ನಮಃ, ಮಂತ್ರಪುಷ್ಪಾಂಜಲಿಂ ಸಮರ್ಪಯಾಮಿ।

..... ಓಂ ಶ್ರೀ ತುಲಸ್ಯೈ ನಮಃ, ಛತ್ರಚಾಮರದರ್ಪಣನೃತ್ತಗೀತ-
ವಾದ್ಯಾಂದೋಲಿಕಾದಿಸಮಸ್ತರಾಜೋಪಚಾರಾನ್ ಸಮರ್ಪಯಾಮಿ।

ದೇವ್ಯೈ ವಿಘ್ನವಿನಾಶಿನ್ಯೈ ಪ್ರದಕ್ಷಿಣಕೃತಾಂ ನೃಣಾಮ್ ।
ಪ್ರದಿಕ್ಷಿಣಂ ಕರೋಮ್ಯದ್ಯ ವಾಂಛಿತಾರ್ಥಪ್ರದಾಭವಃ ॥
..... ಓಂ ಶ್ರೀ ತುಲಸ್ಯೈ ನಮಃ, ಪ್ರದಕ್ಷಿಣಾನಿ ಸಮರ್ಪಯಾಮಿ।

ನಮಸ್ತುಲಸಿ ಕಲ್ಯಾಣಿ ನಮೋ ವಿಷ್ಣುಪ್ರಿಯೇ ಶುಭೇ।
ನಮೋ ಮೋಕ್ಷಪ್ರದೇ ದೇವಿ ನಮಃ ಸಂಪತ್ಪ್ರದಾಯಿಕೇ ॥

ಯನ್ಮೂಲೇ ಸರ್ವತೀರ್ಥಾನಿ ಯನ್ಮಧ್ಯೇ ಸರ್ವದೇವತಾಃ।
ಯದಗ್ರೇ ಸರ್ವವೇದಾಶ್ಚ ತುಲಸಿ ತ್ವಾಂ ನಮಾಮ್ಯಹಮ್ ॥

ಯಾ ದೃಷ್ಟಾ ನಿಖಿಲಾಘಸಂಘಶಮನೀ ಸ್ಪೃಷ್ಟಾ ವಪುಃಪಾವನೀ
ರೋಗಾಣಾಮಭಿವಂದಿತಾ ನಿರಸನೀ ಸಿಕ್ತಾಽಂತಕತ್ರಾಸಿನೀ ।
ಪ್ರತ್ಯಾಸತ್ತಿವಿಧಾಯಿನೀ ಭಗವತಃ ಕೃಷ್ಣಸ್ಯ ಸಂರೋಪಿತಾ
ನ್ಯಸ್ತಾ ತಚ್ಚರಣೇ ವಿಮುಕ್ತಿಫಲದಾ ತಸ್ಯೈ ತುಲಸ್ಯೈ ನಮಃ ॥

ಅನೇನ ಶ್ರೀತುಲಸೀ ಪೂಜನೇನ ಭಗವಾನ್ ಭಾರತೀರಮಣ-ಮುಖ್ಯಪ್ರಾಣಾಂತರ್ಗತ ವಾಸುದೇವಾದ್ಯನಂತರೂಪಾತ್ಮಕ ಶ್ರೀ ದಾಮೋದರ ಪ್ರಿಯತಾಂ ಪ್ರೀತೋ ವರದೋ ಭವತು

॥ ಶ್ರೀಕೃಷ್ಣಾರ್ಪಣಮಸ್ತು ॥

## ಅಥ ಪ್ರಬೋಧೋತ್ಸವಃ[೯೪]

ಯಜಮಾನಃ ಕೃತಾಂಜಲಿಃ ಕ್ಷೀರಾಬ್ಧಿಶಾಯಿನಂ ಶ್ರೀದಾಮೋದರಂ ಘಂಟಾದಿ ವಾದ್ಯಘೋಷೇಣ ಪ್ರಬೋಧ್ಯ ಪ್ರಾರ್ಥಯೇತ್ ।

ತತ್ರ ಮಂತ್ರಃ[೯೫] –

ಇದಂ ವಿಷ್ಣುರ್ವಿಚಕ್ರಮೇ ತ್ರೇಧಾ ನಿದಧೇ ಪದಮ್ ।
ಸಮೂಳ್ಹಮಸ್ಯ ಪಾಂಸುರೇ ॥

ಬ್ರಹ್ಮೇಂದ್ರರುದ್ರಾಗ್ನಿಕುಬೇರಸೂರ್ಯಸೋಮಾದಿಭಿರ್ವಂದಿತ ವಂದನೀಯ ।
ಬುಧ್ಯಸ್ವ ದೇವೇಶ ಜಗನ್ನಿವಾಸ ಮಂತ್ರಪ್ರಭಾವೇನ ಸುಖೇನ ದೇವ ॥

ಇಯಂ ತು ದ್ವಾದಶೀ ದೇವ ಪ್ರಬೋಧಾರ್ಥಂ ವಿನಿರ್ಮಿತಾ ।
ತ್ವಯ್ಯೈವ ಸರ್ವಲೋಕಾನಾಂ ಹಿತಾರ್ಥಂ ಶೇಷಶಾಯಿನಾ ॥

ಉತ್ತಿಷ್ಠೋತ್ತಿಷ್ಠ ಗೋವಿಂದ ತ್ಯಜ ನಿದ್ರಾಂ ಜಗತ್ಪತೇ ।
ತ್ವಯಿ ಸುಪ್ತೇ ಜಗತ್ಸುಪ್ತಮುತ್ಥಿತೇ ಚೋತ್ಥಿತಂ ಭವೇತ್ ॥

ಏವಮುತ್ಥಾಪ್ಯ –

ಚರಣಂ ಪವಿತ್ರಂ ವಿತತಂ ಪುರಾಣಂ ಯೇನ ಪೂತಸ್ತರತಿ ದುಷ್ಕೃತಾನಿ ।
ತೇನ ಪವಿತ್ರೇಣ ಶುದ್ಧೇನ ಪೂತಾ ಅತಿಪಾಪ್ಮಾನಮರಾತಿಂ ತರೇಮ ॥

---

೯೪ ಈ ತುಲಸೀಪೂಜೆಯ ನಂತರ ಪ್ರಬೋಧೋತ್ಸವವನ್ನು ಆಚರಿಸಬೇಕು.

೯೫ ಈ ಮಂತ್ರಗಳನ್ನು ಹೇಳುತ್ತಾ ಶ್ರೀಹರಿಯು ಯೋಗನಿದ್ರೆಯಿಂದ ಏಳುವನು ಎಂಬುದಾಗಿ ಚಿಂತಿಸಬೇಕು.

ಗತಾ ಮೇಘಾ ವಿಯಚ್ಚೈವ ನಿರ್ಮಲಂ ನಿರ್ಮಲಾ ದಿಶಃ।
ಶಾರದಾನಿ ಚ ಪುಷ್ಪಾಣಿ ಗೃಹಾಣ ಮಮ ಕೇಶವ[೯೬] ॥
ಪುಷ್ಪಾಂಜಲಿಂ ದದ್ಯಾತ್ ।

## ಅಥ ತುಲಸೀವಿವಾಹಃ

[೯೭]ಶ್ರೀದಾಮೋದರಂ ತುಲಸ್ಯಭಿಮುಖಂ ಕೃತ್ವಾ । ಅಂತಃಪಟಂ ಧಾರಯೇತ್ ।
ಸೂರ್ಯಸೂಕ್ತಮಂಗಳಾಷ್ಟಕಾದಿ ಪಠಿತ್ವಾ ।
ಸತ್ಯೇನೋತ್ತಭಿತಾಭೂಮಿಃ ಸೂರ್ಯೇಣೋತ್ತಭಿತಾ ದ್ಯೌಃ।
ಋತೇನಾದಿತ್ಯಾಸ್ತಿಷ್ಠಂತಿ ದಿವಿ ಸೋಮೋ ಅಧಿಶ್ರಿತಃ।

## ಮಂಗಲಾಷ್ಟಕಮ್

ಲಕ್ಷ್ಮೀರ್ಯಸ್ಯ ಪರಿಗ್ರಹಃ ಕಮಲಭೂಃ ಸೂನುರ್ಗರುತ್ಮಾನ್ ರಥಃ
ಪೌತ್ರಶ್ಚಂದ್ರವಿಭೂಷಣಃ ಸುರಗುರುಃ ಶೇಷಶ್ಚ ಶಯ್ಯಾ ಪುನಃ।
ಬ್ರಹ್ಮಾಂಡಂ ವರಮಂದಿರಂ ಸುರಗಣಾ ಯಸ್ಯ ಪ್ರಭೋಃ ಸೇವಕಾಃ
ಸ ತ್ರೈಲೋಕ್ಯಕುಟುಂಬಪಾಲನಪರಃ ಕುರ್ಯಾದ್ಧರಿರ್ಮಂಗಲಮ್ ॥ ೧ ॥

ಬ್ರಹ್ಮಾ ವಾಯುಗಿರೀಶಶೇಷಗರುಡಾ ದೇವೇಂದ್ರಕಾಮೌ ಗುರು–
ಶ್ಚಂದ್ರಾರ್ಕೌ ವರುಣಾನಲೌ ಮನುಯಮೌ ವಿತ್ತೇಶವಿಘ್ನೇಶ್ವರೌ।
ನಾಸತ್ಯೌ ನಿರ್ಋತಿರ್ಮರುದ್ಗಣಯುತಾಃ ಪರ್ಜನ್ಯಮಿತ್ರಾದಯಃ
ಸಸ್ತ್ರೀಕಾಃ ಸುರಪುಂಗವಾಃ ಪ್ರತಿದಿನಂ ಕುರ್ವಂತು ನೋ ಮಂಗಲಮ್ ॥ ೨ ॥

ವಿಶ್ವಾಮಿತ್ರಪರಾಶರೌರ್ವಭೃಗವೋಽಗಸ್ತ್ಯಃ ಪುಲಸ್ತ್ಯಃ ಕ್ರತುಃ
ಶ್ರೀಮಾನತ್ರಿಮರೀಚಿಕೌತ್ಸಪುಲಹಾಃ ಶಕ್ತಿರ್ವಸಿಷ್ಠೋಽಂಗಿರಾಃ।
ಮಾಂಡವ್ಯೋ ಜಮದಗ್ನಿಗೌತಮಭರದ್ವಾಜಾದಯಸ್ತಾಪಸಾಃ
ಶ್ರೀವಿಷ್ಣೋಃ ಪದಪದ್ಮಚಿಂತನರತಾಃ ಕುರ್ವಂತು ನೋ ಮಂಗಲಮ್ ॥ ೩ ॥

ಮಾಂಧಾತಾ ನಹುಷೋಽಂಬರೀಷಸಗರೌ ರಾಜಾ ಪೃಥುರ್ಹೈಹಯಃ
ಶ್ರೀಮಾನ್ ಧರ್ಮಸುತೋ ನಲೋ ದಶರಥೋ ರಾಮೋ ಯಯಾತಿರ್ಯದುಃ।

---

೯೬ ಈ ಮಂತ್ರಗಳನ್ನು ಪಠಿಸುತ್ತಾ ಶ್ರೀಹರಿಗೆ ಪುಷ್ಪಾಂಜಲಿಯನ್ನು ಸಮರ್ಪಿಸಬೇಕು.

೯೭ ಶ್ರೀತುಲಸಿ ಹಾಗೂ ದಾಮೋದರ ರೂಪದ ಶ್ರೀಹರಿಯನ್ನು ಪರಸ್ಪರ ಅಭಿಮುಖವಾಗಿ ನಿಲ್ಲಿಸಿ ಅವರಿಬ್ಬರ ಮಧ್ಯದಲ್ಲಿ ಅಂತಃಪಟವನ್ನು ಹಿಡಿಯಬೇಕು. ಸೂರ್ಯಸೂಕ್ತ, ಮಂಗಳಾಷ್ಟಕಾದಿಗಳನ್ನು ಪಠಿಸಬೇಕು.

ಇಕ್ಷ್ವಾಕುಶ್ಚ ವಿಭೀಷಣಶ್ಚ ಭರತಶ್ಚೋತ್ತಾನಪಾದೋ ಧ್ರುವ-
ಶ್ಚೇತ್ಯಾದ್ಯಾ ಭುವಿ ಭೂಭುಜಶ್ಚ ಸತತಂ ಕುರ್ವಂತು ನೋ ಮಂಗಲಮ್ ॥ ೪ ॥

ಶ್ರೀಮೇರುರ್ಹಿಮವಾಂಶ್ಚ ಮಂದರಗಿರಿಃ ಕೈಲಾಸಶೈಲಸ್ತಥಾ
ಮಾಹೇಂದ್ರೋ ಮಲಯಶ್ಚ ವಿಂಧ್ಯನಿಷಧೌ ಸಿಂಹಸ್ತಥಾ ರೈವತಃ ।
ಸಹ್ಯಾದ್ರಿರ್ವರಗಂಧಮಾದನಗಿರಿರ್ಮೈನಾಕಗೋಮಂತಕೌ
ಇತ್ಯಾದ್ಯಾ ಭುವಿ ಭೂಧರಾಃ ಪ್ರತಿದಿನಂ ಕುರ್ವಂತು ನೋ ಮಂಗಲಮ್ ॥ ೫ ॥

ಗಂಗಾ ಸಿಂಧುಸರಸ್ವತೀ ಚ ಯಮುನಾ ಗೋದಾವರೀ ನರ್ಮದಾ
ಕೃಷ್ಣಾ ಭೀಮರಥೀ ಚ ಫಲ್ಗುಸರಯೂ ಶ್ರೀಗಂಡಕೀ ಗೋಮತೀ ।
ಕಾವೇರೀ ಕಪಿಲಾ ವರಾಹತನಯಾ ನೇತ್ರಾವತೀತ್ಯಾದಯೋ
ನದ್ಯಃ ಶ್ರೀಹರಿಪಾದಪಂಕಜಭವಾಃ ಕುರ್ವಂತು ನೋ ಮಂಗಲಮ್ ॥ ೬ ॥

ವೇದಾಶ್ಚೋಪನಿಷದ್ಗಣಾಶ್ಚ ವಿವಿಧಾಃ ಸಾಂಗಾಃ ಪುರಾಣಾನ್ವಿತಾ
ವೇದಾಂತಾ ಅಪಿ ಮಂತ್ರತಂತ್ರಸಹಿತಾಸ್ತರ್ಕಾಃ ಸ್ಮೃತೀನಾಂ ಗಣಾಃ ।
ಕಾವ್ಯಾಲಂಕೃತಿನೀತಿನಾಟಕಯುತಾಃ ಶಬ್ದಾಶ್ಚ ನಾನಾವಿಧಾಃ
ಶ್ರೀವಿಷ್ಣೋರ್ಗುಣರಾಶಿಕೀರ್ತನಪರಾಃ ಕುರ್ವಂತು ನೋ ಮಂಗಲಮ್ ॥ ೭ ॥

ಆದಿತ್ಯಾದಿನವಗ್ರಹಾಃ ಶುಭಕರಾ ಮೇಷಾದಯೋ ರಾಶಯೋ
ನಕ್ಷತ್ರಾಣಿ ಸಯೋಗಕಾಶ್ಚ ತಿಥಯಸ್ತದ್ದೇವತಾಸ್ತದ್ಗಣಾಃ ।
ಮಾಸಾಬ್ದಾ ಋತವಸ್ತಥೈವ ದಿವಸಾಃ ಸಂಧ್ಯಾಸ್ತಥಾ ರಾತ್ರಯಃ
ಸರ್ವೇ ಸ್ಥಾವರಜಂಗಮಾಃ ಪ್ರತಿದಿನಂ ಕುರ್ವಂತು ನೋ ಮಂಗಲಮ್ ॥ ೮ ॥

ಇತ್ಯೇತದ್ವರಮಂಗಲಾಷ್ಟಕಮಿದಂ ಶ್ರೀರಾಜರಾಜೇಶ್ವರೈ-
ರಾಖ್ಯಾತಂ ಜಗತಾಮಭೀಷ್ಟಫಲದಂ ಸರ್ವಾಶುಭಧ್ವಂಸನಮ್ ।
ಮಾಂಗಲ್ಯಾದಿಶುಭಕ್ರಿಯಾಸು ಸತತಂ ಸಂಧ್ಯಾಸು ವಾ ಯಃ ಪಠೇತ್
ಧರ್ಮಾರ್ಥಾದಿಸಮಸ್ತವಾಂಛಿತಫಲಂ ಪ್ರಾಪ್ನೋತ್ಯಸೌ ಮಾನವಃ ॥ ೯ ॥

**॥ ಇತಿ ಶ್ರೀರಾಜರಾಜೇಶ್ವರತೀರ್ಥಶ್ರೀಚರಣವಿರಚಿತಂ ಮಂಗಲಾಷ್ಟಕಮ್ ॥**

★ ★ ★

[೯೮] ಅಂತಃಪಟಮುದಗಪಸಾರ್ಯ । ಅಕ್ಷತಪ್ರಕ್ಷೇಪಂ ಕೃತ್ವಾ । ದಾಮೋದರಹಸ್ತೇ
ತುಲಸೀಂ ದದ್ಯಾತ್ । ತತ್ರ ಮಂತ್ರಃ –

---

೯೮ ಅಂತಃಪಟವನ್ನು ಸರಿಸಿ ಅಕ್ಷತೆಗಳನ್ನು ಸಮರ್ಪಿಸಿ ಶ್ರೀದಾಮೋದರ ರೂಪದ ಹರಿಯ ಕೈಯಲ್ಲಿ ತುಲಸೀ ರೂಪದ ಮಹಾಲಕ್ಷ್ಮಿಯನ್ನು ಸಮರ್ಪಿಸಬೇಕು.

ದೇವೀಂ ಕನಕಸಂಪನ್ನಾಂ ಕನಕಾಭರಣೈರ್ಯುತಾಮ್ ।
ದಾಸ್ಯಾಮಿ ವಿಷ್ಣವೇ ತುಭ್ಯಂ ಬ್ರಹ್ಮಲೋಕಜಿಗೀಷಯಾ ॥

ಮಯಾ ಸಂವರ್ಧಿತಾಂ ಯಥಾಶಕ್ತ್ಯಲಂಕೃತಾಂ ಇಮಾಂ ತುಲಸೀಂ ದಾಮೋದರಸ್ಯ ಶ್ರೀಧರಾಯ ವರಾಯ ತುಭ್ಯಮಹಂ ಸಂಪ್ರದದೇ । ಇತಿ ದೇವಸ್ಯ ಪುರತಃ ಸಾಕ್ಷತಜಲಂ ಕ್ಷಿಪೇತ್ । ಇಮಾಂ ದೇವೀಂ ಪ್ರತಿಗೃಹ್ಣಾತು ಭವಾನ್ । ಇತಿ ಪ್ರಾರ್ಥಯೇತ್ । ದೇವಹಸ್ತಸ್ಪರ್ಶಂ ತುಲಸ್ಯಾಃ ಕಾರಯಿತ್ವಾ।

ಕ ಇದಂ ಕಸ್ಮಾ ಅದಾತ್ ಕಾಮಃ ಕಾಮಾಯಾದಾತ್ ಕಾಮೋ ದಾತಾ ಕಾಮಃ
ಪ್ರತಿಗ್ರಹೀತಾ ಕಾಮಂ ಸಮುದ್ರಮಾವಿಶ ಕಾಮೇನ ತ್ವಾ ಪ್ರತಿಗೃಹ್ಣಾಮಿ ಕಾಮೈತತ್ತೇ ।
ವೃಷ್ಟಿರಸಿ ದ್ಯೌಸ್ತ್ವಾ ದದಾತು ಪೃಥಿವೀ ಹ ಪ್ರತಿಗೃಹ್ಣಾತು ।

– ಇತಿ ಮಂತ್ರಂ ಅನ್ಯೇನ ವಾಚಯೇತ್ । (ಆಚಾರ್ಯಃ)

ತ್ವಂ ದೇವಿ ಮೇಽಗ್ರತೋ ಭೂಯಾಃ ತುಲಸೀ ದೇವಿ ಪಾರ್ಶ್ವತಃ ।
ತ್ವಂ ದೇವಿ ಪೃಷ್ಠತೋ ಭೂಯಾಸ್ತ್ವದ್ದಾನಾನ್ಮೋಕ್ಷಮಾಪ್ನುಯಾತ್ ॥

ದಾನಸ್ಯ ಪ್ರತಿಷ್ಠಾಸಿದ್ಧ್ಯರ್ಥಂ ಇಮಾಂ ಸೌವರ್ಣೀಂ ದಕ್ಷಿಣಾಂ ಸಂಪ್ರದದೇ। ಇತಿ ದೇವಸ್ಯ ಪುರತೋ ದಕ್ಷಿಣಾಮರ್ಪಯೇತ್ । ತತಃ –

ಧ್ರುವಾ ದ್ಯೌರ್ಧ್ರುವಾ ಪೃಥಿವೀ ಧ್ರುವಾಸಃ ಪರ್ವತಾ ಇಮೇ ।
ಧ್ರುವಂ ವಿಶ್ವಮಿದಂ ಜಗದ್ಧ್ರುವೋರಾಜಾ ವಿಶಾಮಯಮ್ ॥

ತದಸ್ತು ಮಿತ್ರಾವರುಣಾ ತದಗ್ನೇ ಶಂಯೋರಸ್ಮಭ್ಯಮಿದಮಸ್ತು ಶಸ್ತಮ್ ।
ಅಶೀಮಹಿ ಗಾಧಮುತ ಪ್ರತಿಷ್ಠಾಂ ನಮೋ ದಿವೇ ಬೃಹತೇ ಸಾದನಾಯ ॥

ಇತಿ ದೇವಹಸ್ತೇನ ತುಳಸ್ಯಾಃ ಕಂಠೇ ಮಾಂಗಲ್ಯಂ ಬಧ್ನೀಯಾತ್ । ತತಃ – ತತ್ರಸ್ಥಬ್ರಾಹ್ಮಣೇಷು, ಸ್ವಸ್ತಿ ನೋ ಮಿಮೀತಾಂ.. ಶನ್ನ ಇಂದ್ರಾಗ್ನೀ.. ವಿಷ್ಣೋರ್ನುಕಂ .. ಹಿರಣ್ಯವರ್ಣಾಂ ಸಹಸ್ರಶೀರ್ಷೇತ್ಯಾದಿ ಪಠತ್ಸು ತುಲಸೀಯುತಾಯ ಶ್ರೀದಾಮೋದರಾಯ ಮಹಾನೀರಾಜನಂ ಕುರ್ಯಾತ್। ತತ್ರ ಮಂತ್ರಃ –

ಶ್ರಿಯೇ ಜಾತಃ ಶ್ರಿಯ ಆನಿರಿಯಾಯ ಶ್ರಿಯಂ ವಯೋ ಜರಿತೃಭ್ಯೋ ದಧಾತಿ । ಶ್ರಿಯಂ ವಸಾನಾ ಅಮೃತತ್ವಮಾಯನ್ ಭವಂತಿ ಸತ್ಯಾ ಸಮಿಥಾ ಮಿತದ್ರೌ । ಶ್ರಿಯ ಏವೈನಂ ತಚ್ಛ್ರಿಯಮಾದಧಾತಿ ಸಂತತಮೃಚಾ ವಷಟ್ಕೃತ್ಯಂ ಸಂತತ್ಯೈ ಸಂಧೀಯತೇ ಪ್ರಜಯಾ ಪಶುಭಿರ್ಯ ಏವಂ ವೇದ ।
– ಇತಿ ನೀರಾಜನಂ ಕೃತ್ವಾ, ಮಂತ್ರಪುಷ್ಪಂ ದತ್ವಾ, ಪ್ರದಕ್ಷಿಣಾಃ ಕುರ್ವೀತ ।

ಯಾನಿ ಕಾನಿ ಚ ಪಾಪಾನಿ ಜನ್ಮಾಂತರಕೃತಾನಿ ಚ ।
ತಾನಿ ತಾನಿ ಪ್ರಣಶ್ಯಂತು ಪ್ರದಕ್ಷಿಣ ಪದೇ ಪದೇ ॥

– ಪ್ರದಕ್ಷಿಣಾಃ ಸಮರ್ಪಯಾಮಿ –

ನಮಸ್ತೇ ಸರ್ವಲೋಕೇಶ ನಮಸ್ತೇ ಲೋಕವಂದಿತ ।
ನಮಸ್ತೇಽಸ್ತು ಸದಾ ದೇವ ತ್ರಾಹಿ ಮಾಂ ದುಃಖಸಾಗರಾತ್ ॥

– ನಮಸ್ಕಾರಾನ್ ಸಮರ್ಪಯಾಮಿ –

ಇದಂ ವ್ರತಂ ಮಯಾ ದೇವ ತವ ಪ್ರೀತ್ಯೈ ಕೃತಂ ಪ್ರಭೋ ।
ನ್ಯೂನಂ ಸಂಪೂರ್ಣತಾಂ ಯಾತು ತ್ವತ್ಪ್ರಸಾದಾದ್ರಮಾಪತೇ ॥

– ಏವಂ ಸಂಪ್ರಾರ್ಥ್ಯ, ಪುಷ್ಪಾಂಜಲಿಂ ದದ್ಯಾತ್ ।

ಯಸ್ಯ ಸ್ಮೃತ್ಯಾ ಚ ... ಅನೇನ ಪ್ರಬೋಧೋತ್ಸವೇನ, ಶ್ರೀದಾಮೋದರ ತುಲಸೀವಿವಾಹಾಂಗ ಶ್ರೀದಾಮೋದರತುಲಸೀ ಷೋಡಶೋಪಚಾರ ಪೂಜನೇನ ಚ ಭಗವಾನ್ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀತುಲಸೀಸಮೇತ ಕಾರ್ತಿಕದಾಮೋದರಃ ಪ್ರೀಯತಾಮ್ ॥

– ತತಃ ಬ್ರಾಹ್ಮಣೇಭ್ಯೋ ಗಂಧಪುಷ್ಪತಾಂಬೂಲದಕ್ಷಿಣಾದೀನಿ ದತ್ತ್ವಾ ವ್ರತಂ ಸಮಾಪಯೇತ್ । ತತಃ ದೇವಸ್ಯಾಗ್ರೇ ಚಾತುರ್ಮಾಸ್ಯವ್ರತಸಮಾಪ್ತಿಂ ಕುರ್ಯಾತ್ ।

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪಃಪೂಜಾಕ್ರಿಯಾದಿಷು
ನ್ಯೂನಂ ಸಂಪೂರ್ಣತಾಂ ಯಾತು ತ್ವತ್ಪ್ರಸಾದಾಜ್ಜನಾರ್ದನ ॥ಇತಿ

ಕಾಯೇನ ವಾಚಾ ಮನಸೇಂದ್ರಿಯೇರ್ವಾ ।
ಬುದ್ಧ್ಯಾಽಽತ್ಮನಾ ವಾಽನುಸೃತಃ ಸ್ವಭಾವಮ್ ॥
ಕರೋಮಿಯದ್ಯತ್ ಸಕಲಂ ಪರಸ್ಮೈ ।
ನಾರಾಯಣಾಯೇತಿ ಸಮರ್ಪಯಾಮಿ ॥

॥ ಶ್ರೀಕೃಷ್ಣಾರ್ಪಣಮಸ್ತು ॥

ಸಮರ್ಪಿತಂ ಮಯಾ ಭವೇತ್ ಸುಮಧ್ವಸುತ್ತವಾಣಿನಾ ।
ರಮಾರಮೇಶಪಾದಯೋಃ ಪ್ರಭಂಜನಾಭಿಧಾಯುಜಾ ॥

★★★★★

## ಪರಿಶಿಷ್ಠ - ೦೭

# ತುಲಸೀಮಹಾತ್ಮ್ಯ

ತವ ಕೇಶಸಮುಹಶ್ಚ ಪುಣ್ಯವೃಕ್ಷೋ ಭವಿಷ್ಯತಿ ।
ತುಲಸೀ ಕೇಶಸಂಭೂತಾ ತುಲಸೀತಿ ಚ ವಿಶ್ರುತಾ ॥

ತ್ರಿಷು ಲೋಕೇಷು ಪುಷ್ಪಾಣಾಂ ಪತ್ರಾಣಾಂ ದೇವಪೂಜನೇ ।
ಪ್ರಧಾನರೂಪಾ ತುಲಸೀ ಭವಿಷ್ಯತಿ ವರಾನನೇ ॥

ಸ್ವರ್ಗೇ ಮರ್ತ್ಯೇ ಚ ಪಾತಾಲೇ ಗೋಲೋಕೇ ಮಮ ಸನ್ನಿಧೌ ।
ಭವ ತ್ವಂ ತುಲಸೀವೃಕ್ಷವರಾ ಪುಷ್ಪೇಷು ಸುಂದರೀ ॥

ಗೋಲೋಕೇ ವಿರಜಾತೀರೇ ರಾಸೇ ವೃಂದಾವನೇ ವನೇ ।
ಭಾಂಡೀರೇ ಚಂಪಕವನೇ ರಮ್ಯೇ ಚಂದನಕಾನನೇ ॥

ವಾಸಸ್ತತ್ರೈವ ಭವತು ಪುಣ್ಯಸ್ಥಾನೇಷು ಪುಣ್ಯದಃ ।
ತತ್ರೈವ ಸರ್ವದೇವಾನಾಂ ಮಮಾಧಿಷ್ಠಾನಮೇವ ಚ
ತುಲಸೀಪತ್ರಪತನಪ್ರಾಪ್ತಯೇ ಚ ವರಾನನೇ ॥

ಸ ಸ್ನಾತಃ ಸರ್ವತೀರ್ಥೇಷು ಸರ್ವಯಜ್ಞೇಷು ದೀಕ್ಷಿತಃ ।
ತುಲಸೀಪತ್ರತೋಯೇನ ಯೋಽಭಿಷೇಕಂ ಸಮಾಚರೇತ್ ॥

ಸುಧಾಘಟಸಹಸ್ರಾಣಾಂ ಯಾ ತುಷ್ಟಿಸ್ತು ಭವೇದ್ಧರೇಃ ।
ಸಾ ಚ ತುಷ್ಟಿರ್ಭವೇನ್ನೂನಂ ತುಲಸೀಪತ್ರದಾನತಃ ॥

ಗವಾಮಯುತದಾನೇನ ಯತ್ಫಲಂ ತತ್ಫಲಂ ಭವೇತ್ ।
ತುಲಸೀಪತ್ರದಾನೇನ ತತ್ಫಲಂ ಕಾರ್ತಿಕೇ ಸತಿ ॥

ನಿತ್ಯಂ ಯಸ್ತುಲಸೀತೋಯಂ ಭುಂಕ್ತೇ ಭಕ್ತ್ಯಾ ಚ ಮಾನವಃ ।
ಲಕ್ಷಾಶ್ವಮೇಧಜಂ ಪುಣ್ಯಂ ಸಂಪ್ರಾಪ್ನೋತಿ ಸ ಮಾನವಃ ।
ಪ್ರಾಣಾಂಸ್ತ್ಯಜತಿ ತೀರ್ಥೇಷು ವಿಷ್ಣುಲೋಕಂ ಸ ಗಚ್ಛತಿ ॥

ತುಲಸೀತೋಯಕಣಿಕಾಂ ಮೃತ್ಯುಕಾಲೇ ಚ ಯೋ ಲಭೇತ್ ।
ರತ್ನಯಾನಂ ಸಮಾರುಹ್ಯ ವೈಕುಂಠಂ ಪ್ರಾಪ್ಯತೇ ಧ್ರುವಂ ॥

ಪೂರ್ಣಿಮಾಯಾಮಮಾಯಾಂ ಚ ದ್ವಾದಶ್ಯಾಂ ರವಿಸಂಕ್ರಮೇ ।
ತೈಲಾಭ್ಯಂಗಂ ಚ ಕೃತ್ವಾ ವೈ ಮಧ್ಯಾಹ್ನೇ ನಿಶಿ ಸಂಧ್ಯಯೋಃ ॥

ಅಶೌಚೇಽಶುಚಿಕಾಲೇ ಯೇ ರಾತ್ರಿವಾಸೋಽನ್ವಿತಾ ನರಾಃ ।
ತುಲಸೀಂ ಯೇ ವಿಚಿನ್ವಂತಿ ತೇ ಛಿಂದಂತಿ ಹರೇಃ ಶಿರಃ ॥

ತ್ರಿರಾತ್ರಂ ತುಲಸೀಪತ್ರಂ ಶುದ್ಧಂ ಪರ್ಯುಷಿತಂ ಸತಿ ।
ಶ್ರಾದ್ಧೇ ವ್ರತೇ ಚ ದಾನೇ ಚ ಪ್ರತಿಷ್ಠಾಯಾಂ ಸುರಾರ್ಚನೇ ॥

ಭೂಗತಂ ತೋಯಪತಿತಂ ಯದ್ದತ್ತಂ ವಿಷ್ಣವೇ ಸತಿ ।
ಶುದ್ಧಂ ಚ ತುಲಸೀಪತ್ರಂ ಕ್ಷಾಲನಾದನ್ಯಕರ್ಮಣಿ ॥

ನದ್ಯಧಿಷ್ಠಾತೃದೇವೀ ಯಾ ಭಾರತೇ ಚ ಸುಪುಣ್ಯದಾ ।
ಲವಣೋದಸ್ಯ ಸಾ ಪತ್ನೀ ಮದಂಶಸ್ಯ ಭವಿಷ್ಯತಿ ॥

ತ್ವಂ ಚ ಸ್ವಯಂ ಮಹಾಸಾಧ್ವೀ ವೈಕುಂಠೇ ಮಮ ಸನ್ನಿಧೌ ।
ರಮಾಸಮಾ ಚ ರಾಮಾ ಚ ಭವಿಷ್ಯತಿ ನ ಸಂಶಯಃ ॥ ....

ತುಲಸೀಪತ್ರ ವಿಚ್ಛೇದಂ ಶಾಲಗ್ರಾಮೇ ಕರೋತಿ ಯಃ ।
ತಸ್ಯ ಜನ್ಮಾಂತರೇ ಕಾಂತೇ ಸ್ತ್ರೀವಿಚ್ಛೇದೋ ಭವಿಷ್ಯತಿ ॥

ತುಲಸೀಪತ್ರವಿಚ್ಛೇದಂ ಶಂಖೇ ಯೋ ಯಃ ಕರೋತಿ ಚ ।
ಭಾರ್ಯಾಹೀನೋ ಭವೇತ್ಸೋ ಪಿ ರೋಗೀಃ ಚ ಸಪ್ತಜನ್ಮಸು ॥

ಶಾಲಗ್ರಾಮಂ ಚ ತುಲಸೀಂ ಶಂಖಂ ಚೈಕತ್ರಮೇವ ಚ ।
ಯೋ ರಕ್ಷತಿ ಮಹಾಜ್ಞಾನೀ ಸ ಭವೇಚ್ಛ್ರೀಹರೇಃ ಪ್ರಿಯಃ ॥ .....

ಲಕ್ಷ್ಮೀಸ್ಸರಸ್ವತೀ ಗಂಗಾ ತುಲಸೀ ಚಾಪಿ ನಾರದ ।
ಹರೇಃ ಪ್ರಿಯಾಶ್ಚ ತಸ್ರಶ್ಚ ಬಭೂವುರೀಶ್ವರಸ್ಯ ಚ ॥

॥ ಇತಿ ಶ್ರೀಮದ್ದೇವೀಭಾಗವತೇ ತುಲಸೀಮಾಹಾತ್ಮ್ಯಮ್ (೯/೨೪/೩೨-೧೦೧)॥

॥ ಶ್ರೀಕೃಷ್ಣಾರ್ಪಣಮಸ್ತು ॥

ಸಮರ್ಪಿತಂ ಮಯಾ ಭವೇತ್ ಸುಮಧ್ವಸುತ್ತವಾಣಿನಾ ।
ರಮಾರಮೇಶಪಾದಯೋಃ ಪ್ರಭಂಜನಾಭಿಧಾಯುಜಾ ॥

★★★★★

# ಧಾರ್ಮಿಕಪ್ರವಚನಗಳ ಸಿ.ಡಿ./ಎಂಪಿ ೩ ಗಳು ಲಭ್ಯ

ನಮ್ಮ ಪ್ರಕಾಶನದಿಂದ ಬಿಡುಗಡೆಯಾಗಿರುವ ಡಾ|| ವ್ಯಾಸನಕೆರೆ ಪ್ರಭಂಜನಾಚಾರ್ಯ-ರಿಂದ ನಡೆದ ಪ್ರವಚನಮಾಲಿಕೆಗಳ ಸಿ.ಡಿ.ಗಳ ವಿವರ. (Ph.26602802/26611011)

| ವಿಷಯ | ಒಟ್ಟು ಅವಧಿ(ಗಂಟೆಗಳು) | ಬೆಲೆ(ರೂಗಳಲ್ಲಿ) |
|---|---|---|
| 1. ಶ್ರೀಮದ್ಭಾಗವತ | 26 | 100 |
| 2. ಮಹಾಭಾರತ (4 ಸಿಡಿಗಳು - mp3) | 150 | 400 |
| 3. ಸುಂದರಕಾಂಡ | 16 | 50 |
| 4. ಸುಮಧ್ವವಿಜಯ | 18 | 50 |
| 5. ಶ್ರೀನಿವಾಸಕಲ್ಯಾಣ | 12 | 50 |
| 6. ರಾಮಾಯಣ | 18 | 50 |
| 7. ದ್ವಾದಶಸ್ತೋತ್ರ | 15 | 50 |
| 8. ಅಧಿಕಮಾಸಮಾಹಾತ್ಮ್ಯೆ | 3 | 20 |
| 9. ವಿಷ್ಣುಸಹಸ್ರನಾಮ | 3 | 20 |
| 10.ಹರಿವಾಯುಸ್ತುತಿ: | 25 | 100 |
| 11.ಸದಾಚಾರಸ್ಮೃತಿ | 3 | 20 |
| 12.ಹರಿವಂಶ | 10 | 50 |
| 13.ಹರಿಕಥಾಮೃತಸಾರ | 20 | 50 |
| 14.ಮಹಾಭಾರತದಲ್ಲಿ ಧರ್ಮರಾಜ, ಅರ್ಜುನ | 16 | 60 |
| 15.ಮಹಾಭಾರತದಲ್ಲಿ ಕರ್ಣನ ಪಾತ್ರ | 10 | 60 |
| 16.ಮಹಾಭಾರತದಲ್ಲಿ ವಿದುರ, ಭೀಷ್ಮರ ಪಾತ್ರ | 18 | 60 |
| 17.ಚಾತುರ್ಮಾಸ್ಯ, ಧಾತ್ರಿಹವನ | 8 | 20 |
| 18.ಶ್ರೀವಿಷ್ಣುಪುರಾಣ | 8 | 50 |
| 19.ಮಹಾಭಾರತತಾತ್ಪರ್ಯನಿರ್ಣಯ | 40 | 150 |
| 20.ಸರ್ವಮೂಲ - ಪರಿಚಯ | 40 | 150 |
| 21.ಪ್ರಾತಃಸಂಕಲ್ಪಗದ್ಯ | 3 | 25 |
| 22.ದೇವರು, ಏಕಾದಶಿ, ಉಪನಯನ ಲಕ್ಷ್ಮೀಶೋಭಾನೆ, ರಾಘವೇಂದ್ರಮಂಗಳಾಷ್ಟಕ | 8 | 50 |
| 23.ಮಧ್ವ ಫಾರ್ ಯೂತ್ | 18 | 50 |
| 24.ಮಾಧ್ವ ಯತಿಗಳು ಮತ್ತು ಹರಿದಾಸರು | 15 | 50 |
| 25.ಗೀತಾಮಹಾತ್ಮೆ | 15 | 50 |
| 26.ಸಮಗ್ರ ಭಾಗವತ (10 ಸಿಡಿಗಳ ಸೆಟ್) | 450 | 1500 |
| 27.ಪ್ರಪಂಚಮಿಥ್ಯಾತ್ವಾನುಮಾನಖಂಡನ, ತತ್ತ್ವಸಂಖ್ಯಾನ, ಉಪಾಧಿಖಂಡನ, ಕಥಾಲಕ್ಷಣ, ಮಾಯಾವಾದಖಂಡನ, ತತ್ತ್ವವಿವೇಕ, ಪ್ರಮಾಣಲಕ್ಷಣ | 3 each | 25 |

## ಡಿ.ವಿ.ಡಿ.

| | | |
|---|---|---|
| 1. ಸಮಗ್ರ ಭಾಗವತ (4 ಡಿವಿಡಿಗಳ ಸೆಟ್) | 450 | 1500 |
| 2. ಮಹಾಭಾರತ | 150 | 400 |
| 3. ಭಗವದ್ಗೀತೆ (3 ಡಿವಿಡಿಗಳ ಸೆಟ್) | 225 | 600 |
| 4. ಭಾಗವತ ಸಾರೋದ್ಧಾರ | 70 | 150 |

# ಶ್ರೀವ್ಯಾಸಮಧ್ವಸಂಶೋಧನ ಪ್ರತಿಷ್ಠಾನ(ರಿ.)

## ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯರಿಂದ ಸಂಪಾದಿತ/ಅನುವಾದಿತ/ರಚಿತ ಕೆಲವು ಕೃತಿಗಳು

## ಕೆಲವು ಸಂಸ್ಕೃತ ಕೃತಿಗಳು

| | | |
|---|---|---|
| ೧. | ಶ್ರೀಮದಾನಂದತೀರ್ಥ ಭಗವತ್ಪಾದಪ್ರಣೀತ ಸರ್ವಮೂಲಗ್ರಂಥಗಳು (ಸಂಸ್ಕೃತ, ಕನ್ನಡ ಹಾಗೂ ತೆಲುಗು ಲಿಪಿಗಳಲ್ಲಿ) | (ಕನ್ನಡ ಲಿಪಿ ರೂ. ೨೦೦೦.೦೦) |
| ೨. | ಮಹಾಭಾರತತಾತ್ಪರ್ಯನಿರ್ಣಯಃ (ಭಾವಪ್ರಕಾಶಿಕಾಸಮೇತಃ) | ೮೦೦.೦೦ |
| ೩. | ದ್ವಾದಶಸ್ತೋತ್ರಮ್ (ಎರಡು ವ್ಯಾಖ್ಯಾನಗಳ ಸಮೇತ) | ೧೦೦.೦೦ |
| ೪. | ಶ್ರೀಮದ್ಭಗವದ್ಗೀತಾ (ಶ್ರೀಮದಾನಂದತೀರ್ಥಕೃತ ಗೀತಾಭಾಷ್ಯ, ಶ್ರೀಪದ್ಮನಾಭತೀರ್ಥರ ಗೀತಾಭಾಷ್ಯಟೀಕಾ ಹಾಗೂ ಶ್ರೀವಾದಿರಾಜರ ಭಗವದ್ಗೀತಾ ಲಕ್ಷಾಲಂಕಾರ ಸಮೇತ) | ೫೫೦.೦೦ |
| ೫. | ಶ್ರೀನರಹರಿತೀರ್ಥಕೃತ ಗೀತಾಭಾಷ್ಯಟೀಕಾ | ೩೦೦.೦೦ |
| ೬. | ಶ್ರೀಮದ್ಭಗವದ್ಗೀತಾ (ಶ್ರೀವಿದ್ಯಾಧಿರಾಜತೀರ್ಥರು ಹಾಗೂ ಶ್ರೀರಾಘವೇಂದ್ರಸ್ವಾಮಿಗಳ ವ್ಯಾಖ್ಯಾನಸಮೇತ) | ೩೦೦.೦೦ |
| ೭. | ಶ್ರೀಸುಮತೀಂದ್ರತೀರ್ಥಕೃತಃ ಮಂತ್ರರತ್ನಕೋಶಃ (ಶ್ರೀಸುಮತೀಂದ್ರತೀರ್ಥರ ಇತರ ಕೆಲವು ಕೃತಿಗಳ ಸಮೇತ) | ೨೫.೦೦ |
| ೮. | ಶ್ರೀಸತ್ಯಾಭಿನವತೀರ್ಥಕೃತ ರಾಮಾಮೃತಮಹಾರ್ಣವಃ | ೨೦೦.೦೦ |
| ೯. | ಸುಮಧ್ವವಿಜಯಃ (ಮೂಲಮಾತ್ರ) | ೫೦.೦೦ |
| ೧೦. | ಸ್ತೋತ್ರಮಾಲಿಕಾ (ವೈಷ್ಣವಸ್ತೋತ್ರಸಂಗ್ರಹ) | ೫೦.೦೦ |

## ಕೆಲವು ಕನ್ನಡ ಕೃತಿಗಳು

ಸ್ತೋತ್ರಮಾಲಿಕಾ(೮ ಸಂಪುಟಗಳಲ್ಲಿ), ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯ, ಸಂಗ್ರಹರಾಮಾಯಣ, ಶ್ರೀಹರಿಕಥಾಮೃತಸಾರ, ಏಕಾದಶೀವ್ರತ, ಸುಂದರಕಾಂಡನಿರ್ಣಯ, ಸುಮಧ್ವವಿಜಯ, ಕೃಷ್ಣಾಮೃತಮಹಾರ್ಣವ, ಶ್ರೀಮಧ್ವಾಚಾರ್ಯರ ಕಾಲನಿರ್ಣಯ, ವೇಂಕಟೇಶಪಾರಿಜಾತ, ಶ್ರೀಹರಿದಾಸರ ಉಗಾಭೋಗಗಳು, ಶ್ರೀಮದ್ಭಗವದ್ಗೀತಾ, ಗೀತಾಮಧು, ಗೀತಾಮಾಹಾತ್ಮ್ಯ, ಮಹಾಭಾರತದ ಬೆಳಕು, ಭಾಗವತದ ಬೆಳಕು, ಶ್ರೀವೇದವ್ಯಾಸದರ್ಶನ, ಶ್ರೀಪೂರ್ಣಪ್ರಜ್ಞದರ್ಶನ, ಶ್ರೀಜಯತೀರ್ಥದರ್ಶನ, ಶ್ರೀಬ್ರಹ್ಮಣ್ಯತೀರ್ಥರು, ಶ್ರೀವ್ಯಾಸರಾಜದರ್ಶನ, ಶ್ರೀರಘೂತ್ತಮತೀರ್ಥರು, ಶ್ರೀವಿಜಯೀಂದ್ರದರ್ಶನ, ಶ್ರೀರಾಘವೇಂದ್ರದರ್ಶನ, ಶ್ರೀವಾದಿರಾಜತೀರ್ಥಕೃತ ತೀರ್ಥಪ್ರಬಂಧ, ಶ್ರೀಜಯತೀರ್ಥರ ಪದ್ಯಮಾಲಾ, ಬಳಿತ್ಥಾಸೂಕ್ತಮ್, ಹರಿಭಜನಕಲ್ಪದ್ರುಮ, ರಾಮಾಮೃತಮಹಾರ್ಣವ, ತಪ್ತಮುದ್ರಾಧಾರಣೆ, ಸದಾಚಾರವಿನೋದ, ಶ್ರೀಹೃಷೀಕೇಶತೀರ್ಥಕೃತ ಸಂಪ್ರದಾಯಪದ್ಧತಿ, ಉಡುಪಿ ಅಷ್ಟಮಠಗಳ ಗುರುಪರಂಪರೆ, ಅಂಭೃಣೀಸೂಕ್ತ, ಬ್ರಹ್ಮಸೂತ್ರನಾಮಾವಳಿ, ಶ್ರೀವೇದವ್ಯಾಸಪೂಜಾವಿಧಿ, ಮಧ್ವಸಿದ್ಧಾಂತ, ಇತ್ಯಾದಿ.

